# ಕಸ್ತೂರಿ





ನವೆಂಬರ್, ೧೯೬೦

ಬೆಲೆ: ೭೫ ನ. ಪೈ.

ಇಂದಿನ ವಿಶ್ವಕ್ಕೊಂದು ಬೆಳಕಿಂಡಿ

ಲೋಕಶಿಕ್ಷಣ ಟ್ರಸ್ಟಿನ ಪ್ರಕಟನೆಗಳು

## ಹೃದಯ ಮಿಡಿಸುವ
## ಉಜ್ವಲ ಸಾಮಾಜಿಕ
## ಚಿತ್ರ..



ಜಿ.ವಿ. ಅಯ್ಯರ್ ಪ್ರೊಡಕ್ಷನ್ಸ್ ರವರ...

# ತಾಯಿಕರುಳು

ಸಾಹಿತ್ಯ
ನಿರ್ಮಾಣ-ನಿರ್ದೇಶನ
**ಜಿ.ವಿ. ಅಯ್ಯರ್**

— ಸಂಗೀತ
ಜಿ.ಕೆ.ವೆಂಕಟೇಶ್

— ಕ್ಯಾಮರಾ
ಬಿ.ದೊರೈರಾಜ್

— ಸಂಕಲನ
ಎನ್.ಸಿ.ರಾಜನ್

— ನೃತ್ಯ
ಬಿ. ಜಯರಾಂ

ಸಂಪೂರ್ಣ ಹಂಚಿಕೆಯ ಹಕ್ಕು
**ವಿಜಯ ಪಿಕ್ಚರ್ಸ್ ಸರ್ಕ್ಯೂಟ್**
ಬೆಂಗಳೂರು-೨

Indra

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿ ತಿಂಗಳ ೧ ನೇ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಹಲ್ಲಿ
ಎ. ಎಸ್. ಆರ್. ಮೂರ್ತಿ

ಚಂದಾ ದರ :

ವಾರ್ಷಿಕ(ಅಂಚೆಸೇರಿ). ರೂ.೮·೦೦
ಅರ್ಧ ವರ್ಷ — ರೂ. ೪·೫೦
ಬಿಡಿಸಂಚಿಕೆ .— ರೂ. ೦·೭೫

Kasturi, November 1962


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ

ಕಸ್ತೂರಿ



ಸಂಚಿಕೆ ೩ ನವೆಂಬರ್, ೧೯೬೨ ವರ್ಷ ೭

# ಭಕ್ತಿಯ ಎರಡು ಮುಖಗಳು

ಧರ್ಮರಾಯನಿಗೆ ಯಾವಾಗಲೂ ಭೀಮನಿಗಿಂತ ಅರ್ಜುನನ ಮೇಲೆಯೇ ಸ್ವಲ್ಪ ಪ್ರೀತಿ ಹೆಚ್ಚು. ಅರ್ಜುನನು ಬಿಡುವಿನ ಸಮಯದಲ್ಲಿ ಶಿವಲಿಂಗವನ್ನು ಪುಷ್ಪಧೂಪಗಳಿಂದ ಪೂಜಿಸುತ್ತಿದ್ದರೆ, ಭೀಮನು ಮಾತ್ರ ಹೊಟ್ಟೆಬಾಕನಂತೆ ಮೂಗಿನತನಕ ಉಂಡು ಸುಖವಾಗಿ ನಿದ್ರಿಸುತ್ತಿದ್ದ. ಇದನ್ನು ನೋಡಿ ಬೇಸತ್ತ ಧರ್ಮಜನು, ಒಂದು ದಿನ ನಿದ್ರಿಸುತ್ತಿದ್ದ ಭೀಮಸೇನನನ್ನು ಹೊಡೆದೆಬ್ಬಿಸಿ ಅಲ್ಲೇ ಶಿವಲಿಂಗವನ್ನು ಪೂಜಿಸುತ್ತಿದ್ದ ಪಾರ್ಥನನ್ನು ತೋರಿಸಿ, "ಎಲವೋ ಭೀಮ, ಚೆನ್ನಾಗಿ ಭಕ್ಷ ಭೋಜ್ಯಾದಿಗಳನ್ನು ಮೆದ್ದು ಕುಂಭಕರ್ಣನಂತೆ ಹೀಗೆ ಗೊರಕೆ ಹೊಡೆಯಲಿಕ್ಕೆ ನಿನಗೆ ಕೊಂಚವಾದರೂ ನಾಚಿಗೆಯಾಗಬೇಡವೇ? ಅರ್ಜುನನು ನಿನಗಿಂತ ಚಿಕ್ಕವನಾದರೂ ಅವನಲ್ಲಿರುವ ಭಕ್ತಿಯ ಒಂದಂಶವಾದರೂ ನಿನ್ನಲ್ಲಿಲ್ಲ" ಎಂದನು.

ಇದನ್ನು ಕೇಳಿ ಭೀಮಸೇನನಿಗೆ ಕೋಪವೂ ದುಃಖವೂ ಏಕಕಾಲದಲ್ಲಾಯಿತು. ಆ ಕೂಡಲೇ ಅವನು ಅಲ್ಲೇ ಇಟ್ಟಿದ್ದ ತನ್ನ ಉಕ್ಕಿನ ಗದೆಯನ್ನು ತನ್ನಿಂದ ಸಾಧ್ಯವಾದಷ್ಟು ಎತ್ತರ ಆಕಾಶಕ್ಕೆಸೆದು, "ಹೇ ಪರಮಾತ್ಮ! ನಾನು ಪ್ರತಿ ದಿನವೂ ಮಾಡುವಂತಹ ಸಕಲ ಕಾರ್ಯಗಳೂ ನಿನಗೆಯೇ ಅರ್ಪಿತವೆಂದು ಮಾಡದಿದ್ದರೆ, ಕಾಯೇನ, ವಾಚಾ, ಮನಸಾ ನಿನಗೆ ವಿರೋಧವಾದ ಯಾವುದಾದರೂ ಕೆಲಸವನ್ನು ಮಾಡಿದ್ದರೆ, ಈಗಲೇ ಈ ಗದೆಯು ಬಿದ್ದು ನನ್ನೆದೆಯನ್ನು ಪುಡಿಗೈಯಲಿ," ಎಂದು ತನ್ನ ಎದೆಯನ್ನಗಲಿಸಿ ನಿಂತುಕೊಂಡನು.

ಆದರೆ ಮೇಲೆ ಹೋದಂತಹ ಆ ಭೀಕರವಾದ ಆಯುಧವು ಯಾವುದೋ ಒಂದು ಅವ್ಯಕ್ತ ಶಕ್ತಿಯಿಂದ ಮೇಲೆಯೇ ನಿಂತಿತು! ಈ ನಾಟಕವನ್ನೆಲ್ಲಾ ನೋಡುತ್ತಾ ಪಕ್ಕದಲ್ಲೇ ನಿಂತಿದ್ದ

ಕಪಟನಾಟಕ ಸೂತ್ರಧಾರಿಯಾದ ಕೃಷ್ಣಪರಮಾತ್ಮನು ಯುಧಿಷ್ಠಿರನನ್ನು ಕುರಿತು ಹೇಳಿದನು: "ಧರ್ಮರಾಜಾ! ನೋಡಿದೆಯಾ? ಲೋಕದ ಕಣ್ಣುಗಳಿಗೆ ಕಾಣುವಂತೆ ಮಾಡಿದ ಪೂಜೆ ಪುರಸ್ಕಾರಗಳು ಮಾತ್ರ ಪರಮಾತ್ಮನಿಗೆ ಅರ್ಪಿತವಾಗಬೇಕೆಂದಿಲ್ಲ. ಅವನಿಗೆ ಅರ್ಪಿಸಿ ಮಾಡುವಂತಹ ಸಕಲ ಕಾರ್ಯಗಳೂ ಪೂಜೆಗಳೇ. ಇದಕ್ಕೆ ಹೊರತಾಗಿ ಬೇರೆ ಪೂಜೆಯೇ ಇಲ್ಲ."

ಸಂಗ್ರಹ— ಎ. ಎಂ. ರಾವ್

ಕಡು ಬೇಸಿಗೆಯ ಸುಡು ಬಿಸಿಲಿನ ಒಂದು ಮಧ್ಯಾಹ್ನ ಸ್ವಾಮಿ ವಿವೇಕಾನಂದರು ತಾರೀಘಟ್ಟದಲ್ಲಿ ರೈಲಿನಿಂದಿಳಿದರು. ಮೈಮೇಲಿನ ಕಾವಿಬಟ್ಟೆ, ಯಾರೋ ಕೊಟ್ಟ ಮೂರನೆಯ ತರಗತಿಯ ಟಿಕೆಟ್ ಹೊರತು ಬೇರೇನೂ ಅವರ ಬಳಿ ಇರಲಿಲ್ಲ. ನಿಲ್ದಾಣದ ಕೊಠಡಿಯ ನೆರಳಿನಲ್ಲಿ ಕುಳಿತುಕೊಳ್ಳಲು ಪೋರ್ಟರ್ ಬಿಡದಿದ್ದುದರಿಂದ ಬಿಸಿಲಲ್ಲೇ ನೆಲದ ಮೇಲೆ ಒಂದು ಕಂಬಕ್ಕೊರಗಿ ಕುಳಿತುಕೊಂಡರು. ಎದುರಿಗೇ ಸ್ವಲ್ಪ ದೂರದಲ್ಲಿ ಹಿಂದಿನ ರಾತ್ರಿ ಇವರೊಂದಿಗೆ ಪ್ರಯಾಣಿಸಿದ್ದ ಮಧ್ಯ ವಯಸ್ಸಿನ ಬನಿಯನೊಬ್ಬನು ನೆರಳಿನಲ್ಲಿ ಚಾಪೆಯ ಮೇಲೆ ಕುಳಿತಿದ್ದನು. ಹಣವಿಲ್ಲದ್ದರಿಂದ ಹಿಂದೆ ಕೆಲವು ಕಡೆ ರೈಲು ನಿಂತಾಗ, ತೀವ್ರ ನೀರಡಿಕೆಯಿಂದ ಬಳಲಿದ್ದರೂ ಸ್ವಾಮಿಗಳಿಗೆ ನೀರು ಸಿಕ್ಕಿರಲಿಲ್ಲ. ಆಗಲೆ ಆ ಬನಿಯನು ಯಥೇಚ್ಛವಾಗಿ ನೀರು ಕೊಂಡು ಕುಡಿದು ಸ್ವಾಮೀಜಿಯನ್ನು ಗೇಲಿ ಮಾಡಹತ್ತಿದ್ದ. ಸಂನ್ಯಾಸಿಯಾದವನು ಹಣ ಗಳಿಸುವುದಿಲ್ಲವಾದ್ದರಿಂದ ಹಸಿವೆಯಿಂದ ನರಳುವುದೇ ಸರಿಯೆಂದು ಆತನ ಮತವಾಗಿತ್ತು. ತಾನು ತಿನ್ನುತ್ತಿದ್ದ ಭಕ್ಷ್ಯಗಳನ್ನು ತೋರಿಸಿ ನಗೆಯಾಡುತ್ತ, "ನೋಡು, ಎಂಥ ರುಚಿಕರವಾದ ಪೂರಿ, ಲಾಡುಗಳು! ಹಣವನ್ನು ಗಳಿಸುವುದಿಲ್ಲವಾದ್ದರಿಂದ ನೀನು ಗಂಟಲೊಣಗಿಸಿಕೊಂಡು ಬರಿ ಹೊಟ್ಟೆಯಲ್ಲಿ, ಸುಡು ನೆಲದಲ್ಲಿ ಕುಳಿತುಕೊಳ್ಳುವುದೇ ಸರಿಯಾದದ್ದು" ಎಂದ. ಆದರೆ ವಿವೇಕಾನಂದರು ಯಾವ ಭಾವವನ್ನೂ ವ್ಯಕ್ತಪಡಿಸದೆ ಶಾಂತರಾಗಿ ಕುಳಿತಿದ್ದರು.

ಸ್ವಲ್ಪ ಹೊತ್ತಿನಲ್ಲಿ ಒಬ್ಬ ವ್ಯಕ್ತಿ ಇವರಿದ್ದಲ್ಲಿಗೆ ಧಾವಿಸುತ್ತ ಬಂದು ಶುಚಿಯಾದೊಂದು ಕಡೆ ಚಾಪೆ ಹಾಸಿ ತಾನು ತಂದಿದ್ದ ಆಹಾರ ಪದಾರ್ಥಗಳನ್ನೂ ನೀರನ್ನೂ ಅದರ ಮೇಲಿಟ್ಟು ವಿವೇಕಾನಂದರನ್ನು ಕರೆಯತೊಡಗಿದ. ಸ್ವಾಮೀಜಿಗೆ ಅಚ್ಚರಿಯೇ ಅಚ್ಚರಿ. ಬನಿಯನೂ ದಿಗ್ಭ್ರಮೆಗೊಂಡು ಅತ್ತ ನೋಡಿದ. ಸ್ವಾಮೀಜಿ ಹೊಸಬನತ್ತ ನೋಡಿ, "ಬಹುಶಃ ನೀನು ನನ್ನನ್ನು ನಿನ್ನ ಗುರುತಿನವನೆಂದು ತಪ್ಪಾಗಿ ತಿಳಿದಿರಬೇಕು. ನಾನು ನಿನ್ನನ್ನು ಎಲ್ಲಿಯೂ ನೋಡಿಲ್ಲವಲ್ಲ!" ಎಂದರು. ಆಗ ಆತ, "ಇಲ್ಲ ನಾನು ತಪ್ಪು ತಿಳಿದುಕೊಂಡಿಲ್ಲ. ನಿಮ್ಮನ್ನು ನೋಡಿದ್ದೇನೆ. ನಾನು ಮಿಠಾಯಿ ಮಾರುವವ. ಎಂದಿನಂತೆ ಮಧ್ಯಾಹ್ನದೂಟದ ನಂತರ ನಿದ್ದೆ ಹೋಗಿದ್ದೆ. ಕನಸಿನಲ್ಲಿ ಶ್ರೀರಾಮ ಕಾಣಿಸಿಕೊಂಡು ನಿಮ್ಮತ್ತ ಬೆರಳು ತೋರಿಸಿ, ನೀವು ಹಸಿದುದನ್ನು ನೋಡಿ ತನಗೆ ತುಂಬಾ ನೋವಾಯಿತೆಂದು ಹೇಳಿ, ಬೇಗನೆ ಸ್ವಲ್ಪ ಆಹಾರ ತಯಾರಿಸಿ ತೆಗೆದುಕೊಂಡು ಬರುವಂತೆ ಒತ್ತಾಯಿಸಿದ. ನಾನು ಎದ್ದು ಬರಿಯ ಕನಸೆಂದು ಪುನಃ ಮಲಗಿದೆ. ಆದರೆ ಶ್ರೀರಾಮ ಮತ್ತೆ ಕಾಣಿಸಿಕೊಂಡು ನನ್ನನ್ನು ಎಳೆಯತೊಡಗಿದ. ಅಂತೆಯೆ ಆಹಾರ ತಯಾರಿಸಿ ತಂದಿದ್ದೇನೆ. ಸ್ವೀಕರಿಸಬೇಕು" ಎಂದ. ವಿವೇಕಾನಂದರ ಹೃದಯ ತುಂಬಿಬಂದು ಕಣ್ಣು ಒದ್ದೆಗೊಂಡಿತು. ಚೇಷ್ಟೆ ಮಾಡಿದ ಬನಿಯ ಅವರ ಪಾದಧೂಳಿಯನ್ನು ತಲೆಯಲ್ಲಿ ಧರಿಸಿಕೊಂಡ.

ಸಂಗ್ರಹ— ಲಕ್ಷ್ಮೀನಾರಾಯಣ



# ಕವಿ ಕಂಡ ಸತ್ಯ

ಆರಾದರೇನವರ ಒಳಬಾಳು ಬೇರಿಹುದು—
ಒರೆ ಬೇರೆ, ಒಳಬಾಳು ಬೇರೆ;
ಜೋಡಾಗಿ ಸೇರಿದರೆ ಒಂದಾಗಿ ತೋರುವುದು,
ಅದರಂತೆ ಬಾಳುವೆಯು ನೋರೆ.

*

ಅನುಭವವು ಸವಿಯಲ್ಲ— ಅದರ ನೆನಪೇ ಸವಿಯು.

*

ದುಗುಡವನು ಸುಖದ-ಪಾಕದಲೆರೆದು ಸವಿಯುತಿಹ
ರಸಿಕರಿಗೆ ಬಾಳು, ಬಾಳುವೆಯು ಪಾಡು.

*

ವಿಷಯು ವಿಷಯುದಿ ಸುತ್ತಿಸುವ ಮನೋರಥ ವೇಗ
ಹಿರಿಯು ಜನ್ಮಕು ಕಿರಿಯು ಜನ್ಮಕೊಂದೆ.

*

ಆಸೆಗಾವುದು ಮರ್ದು? ಅದರ ತೀರ್ಕೆಯೆ ಹೊರತು.

*

ಬಾರಿಸುವ ಕೈ ಬೇರೆ— ಕೇಳುವಾ ಕಿವಿ ಬೇರೆ!
ಪರತಂತ್ರರೈ ನಾವು— ನುಡಿಯುವೆವು ನುಡಿಸಿದರೆ.

*

ಗಂಡು ಹೆಣ್ಣು - ಎಂಬ ಭೇದ-
ದೇವರೊಂದೆ ಮೆಯ್ಯ ಭೇದ
ಒಂದನಗಲಲೊಂದು ವಿಶ್ವರೂಪವರ್ಧವೆನಿಸದೆ?
ಜನನವೆಂಬುದಿದುವೆ ತೊಟ್ಟು;
ಹೆಣ್ಣು ಗಂಡು - ಜವಳಿ ಹುಟ್ಟು;
ನೊಗ್ಗೆಯಾಗಿ ಕೂಡಿಬಿದ್ದು ಮುಗ್ಗಿಹೋಪುವೊಮ್ಮೆಗೆ.

*

ಎಲ್ಲ ಜನಕು ನೀತಿಯೊಂದೆ;
ಎಲ್ಲ ಜನಕು ರೀತಿಯೊಂದೆ;
ಎಲ್ಲರೆದೆಗು ಭೀತಿಯೊಂದೆ! ಅದನು ತೊಡೆಯುಲಾರರು
ಹೋಗುವವರ ಕಂಡು ಮರೆತು
ಜೀವನಗಳ ಕೊಂಡು ಬೆರೆತು
ಕಾಲ ಬರುವ ವೇಳೆ ಬೆದರಿ ಸಾವ ಮೊದಲೆ ಸಾವರು.

ಕಡೆಂಗೋಡ್ಲು ಶಂಕರಭಟ್ಟರ "ನಾದ್ರಿಯು ಚಿತೆ" ಯಿಂದ
ಸಂಗ್ರಹ: ಎಂ. ರಾಮಚಂದ್ರ

# ನೀವೇ ಹೇಳಿದ್ದು..

ಆರ್. ಕೆ. ಲಕ್ಷ್ಮಣ್




ಇನ್ನು ನಿನ್ನನ್ನು ಶಾಲೆಗ ಹಾಕಲೇಬೇಕಾ-
ಗಿದೆ ಮಗೂ...ಹಿಂದಿಯೋ ಇಂಗ್ಲೀಷೋ
ಎಂಬ ತೀರ್ಮಾನಕ್ಕಾಗಿ ಇನ್ನು ಕಾಯು
ವುದರಲ್ಲಿ ಅರ್ಥವಿಲ್ಲ.

ಈ ಪ್ರದೇಶದಲ್ಲಿ ೨,೦೦೦ ಚೀನೀ ಸೈನಿಕ
ರನ್ನು ಸಂಗ್ರಹಿಸಲಾಗಿದೆ ಎಂದು ಪತ್ರಿಕೆ
ಗಳಲ್ಲಿ ಬಂದ ಉದ್ವೇಗಜನಕ ಸುದ್ದಿ
ನಿರಾಧಾರವಾಗಿದೆ. ನಿಜವಾಗಿ ಅಲ್ಲಿರು
ವವರು ಕೇವಲ ೧,೮೭೭ ಚೀನೀಯರು.




ಈ ಖಾತೆಯಲ್ಲಿ ಒಬ್ಬರನ್ನು ನೋಡಬೇಕಾ
ಗಿದೆಯೇನು? ಇಲ್ಲ ಸ್ವಾಮಿ. ಇಲ್ಲಿ ಎಲ್ಲ
ರನ್ನೂ ಲಂಚಗುಳಿತನಕ್ಕಾಗಿ ಸಸ್ಪೆಂಡ್
ಮಾಡಲಾಗಿದೆ.





ಅಲ್ಲ— ಆಟದಲ್ಲಲ್ಲ, ರಾಜಕಾರಣದಲ್ಲಿ
ಜಖಂ ಆಗಿದೆ.

ಗಾಂಧೀಜಿಯ ಕರೆಯನ್ನಾಲಿಸಿ ತ್ಯಾಗ ಮಾಡಿದ ಅನೇಕರ ಹೃದಯ ಹೀಗೆಯೆ ಪರಿತಪಿಸುತ್ತಿರಬಹುದೆ?

# ದೇಶಭಕ್ತನ ಮಗ ಒಂದು ದುಃಖದ ಪ್ರಸಂಗ

ಶ್ರೀಪ್ರಕಾಶ



ಮಗ

ಯಾರಿಗೇ ಆಗಲಿ, ಅವರ ಸನಿಹದ ಬಂಧುಗಳ ಬಗ್ಗೆ ಬಹಿರಂಗವಾಗಿ ಬರೆಯುವುದು ಸಂಕೋಚದ ಮಾತೇ ಸರಿ. ಈ ಸಂಬಂಧದಲ್ಲಿ ಮಾಡುವ ಯಾವ ಪ್ರಯತ್ನವೇ ಆಗಲಿ, ಸುಲಭದಲ್ಲಿ ತಪ್ಪು ಗ್ರಹಿಕೆಗೆ ಆಸ್ಪದ ಮಾಡಿಕೊಡಬಹುದು ಮಾತ್ರವಲ್ಲ, ಅದು ಉಪಹಾಸವನ್ನೂ ದ್ವೇಷವನ್ನೂ ಬರಮಾಡಬಹುದು. ಆದ್ದರಿಂದಲೇ ನನ್ನ ಕಿರಿಯ ಮಗ ತಪೋವರ್ಧನನ ಮರಣ ಮತ್ತು ಅಲ್ಪಾವಧಿಯ ಜೀವನಗಳನ್ನು ಕುರಿತು ಬರೆಯಬೇಕೆಂಬ ಮನಸ್ಸಿದ್ದರೂ ಆತ ನಮ್ಮನ್ನಗಲಿ ಹೋದ ಮೇಲಿನ ಈ ಐದೂವರೆ ವರ್ಷಗಳಲ್ಲಿ ನಾನು ಹಿಂದುಮುಂದು ನೋಡುತ್ತಲೇ ಇದ್ದೆ.

೧೯೫೬, ಅಕ್ಟೋಬರ್ ತಿಂಗಳಲ್ಲಿ ನಾನು ಮದ್ರಾಸಿನ ರಾಜ್ಯಪಾಲನಾಗಿದ್ದಾಗ ನನ್ನನ್ನು ಆಗ ದ್ವಿಭಾಷಾ ರಾಜ್ಯವಾಗಿದ್ದ ಮುಂಬಯಿಯ ರಾಜ್ಯಪಾಲನಾಗಿ ನೇಮಿಸಲಾಯಿತು. ಆದರೆ ಆ ನೇಮಕದ ಹೊತ್ತಿಗೇ ನನ್ನ ಮಗ ಸತ್ತಿದ್ದ ಎಂಬ ಮಾತು ಮಾತ್ರ ಅನೇಕರಿಗೆ ಗೊತ್ತಿಲ್ಲ. ನಾನು ದುರಂತವಾದ ದುಃಖದಲ್ಲಿ ಮುಳುಗಿಯೆ ಮುಂಬಯಿಗೆ ಬಂದೆ. ಪರಿಸ್ಥಿತಿಯನ್ನು ಗಮನಿಸಿ ನನ್ನನ್ನೀ ಹೊಣೆಯಿಂದ ಮುಕ್ತನನ್ನಾಗಿ ಮಾಡಬೇಕು ಎಂದು ನಾನು ರಾಷ್ಟ್ರಪತಿಗಳನ್ನು ಬಿನ್ನವಿಸಿಕೊಂಡೆ. ಆದರೆ ಅವರು ಮಾತ್ರ ದಕ್ಷಿಣ ಭಾರತದ ತಮ್ಮ ಪ್ರವಾಸ ಕಾಲದಲ್ಲಿ ಅನಿರೀಕ್ಷಿತವಾಗಿ ತಮ್ಮ ಕಾರ್ಯಕ್ರಮವನ್ನು ಭಂಗಗೊಳಿಸಿ ಜನರ ಲಕ್ಷ್ಯವನ್ನು ಸೆಳೆಯದಿರಲೆಂದು ಒಂದು ಚಿಕ್ಕ ಸ್ಟೇಶನ್ನಿನಲ್ಲಿಳಿದು ನೇರವಾಗಿ ಮದ್ರಾಸಿನ ರಾಜಭವನಕ್ಕೆ ಬಂದು ನನ್ನನ್ನು ಸಂತಯಿಸಿದರು. ಮಾತ್ರವಲ್ಲ, ಮುಂಬಯಿಯ ರಾಜ್ಯಪಾಲ ಹುದ್ದೆಯನ್ನು ನಿರಾಕರಿಸಬಾರದೆಂದು ನನ್ನನ್ನು ಕೇಳಿಕೊಂಡರು. ಡಾ. ರಾಜೇಂದ್ರ ಪ್ರಸಾದರ

ಈ ಅನುಕಂಪವನ್ನು ಕಂಡು ಅತ್ಯಂತ ಮನಕರಗಿದವನಾಗಿ ನಾನು ಅವರ ಮಾತನ್ನು ನಿರಾಕರಿಸಲಾರದೆ ಹೋದೆ.

೧೯೨೪, ನವಂಬರ ತಿಂಗಳಿನಲ್ಲಿ ಹುಟ್ಟಿದ ತಪೋವರ್ಧನ ಇನ್ನೂ ಒಂದೂವರೆ ವರ್ಷದವನಾಗಿದ್ದಾಗ ಅವನ ತಾಯಿ ಆಗ ವಾರಾಣಸಿಯಲ್ಲಿ ಉಗ್ರರೂಪದಲ್ಲಿ ತಲೆದೋರಿದ ಮೈಲಿಬೇನೆಗೆ ತುತ್ತಾಗಿ ತೀರಿಹೋದಳು. ಯಾವ ವೈದ್ಯಕೀಯ ಜಾಣ್ಮೆಯೂ ಅವಳನ್ನು ಉಳಿಸಿಕೊಳ್ಳಲಾರದೆ ಹೋಯಿತು. ತಪೋವರ್ಧನ ನನ್ನ ಗಂಡುಮಕ್ಕಳಲ್ಲಿ ಕಿರಿಯವ. ಅವನ ಅಣ್ಣ ಯಶೋವರ್ಧನ ಅವನಿಗಿಂತ ಎರಡು ವರ್ಷಗಳಿಗೆ ದೊಡ್ಡವನಾಗಿದ್ದ. ೧೦ ಮತ್ತು ೮ ವರ್ಷ ಪ್ರಾಯದ ಇಬ್ಬರು ಅಕ್ಕಂದಿರೂ ಅವನಿಗಿದ್ದರು.

ಆಗ ನನ್ನ ಪರಿಸ್ಥಿತಿ ಬಿಕ್ಕಟ್ಟಿನದಾಗಿತ್ತು. ಕಾಂಗ್ರೆಸ್ ಸ್ವರಾಜ್ಯ ಪಕ್ಷದ ಪ್ರಮುಖರಾದ ಪಂಡಿತ ಮೋತೀಲಾಲ ನೆಹರೂರವರು ಹಿಮಾಲಯದಿಂದ ವಿಂಧ್ಯದ ವರೆಗೂ ವ್ಯಾಪಿಸಿದಂತಿದ್ದ ಗೋರಖಪುರ ಮತ್ತು ಬನಾರಸ್ ಡಿವಿಜನ್ನುಗಳ ವಿಶಾಲವಾದ ಕ್ಷೇತ್ರದ ಪರವಾಗಿ ನನ್ನನ್ನು ಕೇಂದ್ರ ಶಾಸನ ಸಭೆಗೆ ಹುರಿಯಾಳನ್ನಾಗಿ ನಿಲ್ಲಿಸಿದ್ದರು. ಇದರಿಂದ ಅವರ ಮತ್ತು ನನ್ನ ಮೇಲೆ ಸಿಟ್ಟಿಗೆದ್ದ ಪಂಡಿತ ಮದನ ಮೋಹನ ಮಾಲವೀಯರು ಶ್ರೀ ಘನಶ್ಯಾಮದಾಸ ಬಿರ್ಲಾರವರನ್ನು ಕಲಕತ್ತೆಯಿಂದ ಕರೆಸಿಕೊಂಡು ಅವರನ್ನು ನನ್ನ ವಿರುದ್ಧ ಹುರಿಯಾಳನ್ನಾಗಿ ನಿಲ್ಲಿಸಿದ್ದರು. ನಾವಿಬ್ಬರೂ ಮನಸ್ಸಿಲ್ಲದ ಮನಸ್ಸಿನಿಂದ ಸ್ಪರ್ಧೆಗೆ ನಿಂತಿದ್ದೆವು. ಆದರೆ ಇಬ್ಬರೂ ನಂನಮ್ಮ ಧುರೀಣರಿಗೆ ತಲೆಬಾಗಿದ್ದೆವು. ವಿಚಿತ್ರವೆಂದರೆ ಶ್ರೀ ಘನಶ್ಯಾಮದಾಸ ಬಿರ್ಲಾರೂ ನನ್ನಂತೆಯೆ ವಿಧುರರಾಗಿದ್ದರು. ಇಷ್ಟೆ, ಅವರು ನನಗಿಂತಲೂ ಮೊದಲೇ ಹೆಂಡತಿಯನ್ನು ಕಳೆದುಕೊಂಡವರಾಗಿದ್ದರು.

ಆಗ ನಮ್ಮಿಬ್ಬರ ಪರಿಚಯ, ಮುಖ ಪರಿಚಯವಷ್ಟೇ ಆಗಿತ್ತು. ಆದರೂ ನಮ್ಮಿಬ್ಬರಲ್ಲಿ ಪರಸ್ಪರ ಸಹಾನುಭೂತಿಯಿದ್ದಿತು. ಪರಸ್ಪರ ಹೋರಾಡಬೇಕಲ್ಲ ಎಂದು ಇಬ್ಬರೂ ಖಿನ್ನರಾಗಿದ್ದೆವು. ಅವರವರ ಬೆಂಬಲಿಗರು ಏನನ್ನೇ ಮಾಡಿರಲಿ, ಬಿಟ್ಟಿರಲಿ- ಹುರಿಯಾಳುಗಳು ಅತ್ಯಂತ ಧರ್ಮಸಮ್ಮತವಾದ ರೀತಿಯಲ್ಲಿ ನಡೆಸಿದ ಚುನಾವಣೆ ಹೋರಾಟವಾಗಿತ್ತದು. ಈ ಅಸಮಾನ ಬಲದ ಯುದ್ಧದಲ್ಲಿ ನಾನು ಸೋತೆ. ಈ ಭೀಕರ ಚುನಾವಣೆ ಸಮರ ಹುರಿಯಾಳುಗಳನ್ನು ಒಂದುಗೂಡಿಸಿತು. ಅಂದಿನಿಂದಲೂ ನಾವಿಬ್ಬರೂ ಸ್ನೇಹಿತರಾಗಿದ್ದೇವೆ. ನನ್ನ ಪತ್ನಿಯ ಮರಣ, ಅದರಿಂದ ಮನೆಯಲ್ಲಿದ್ದ ಚಿಕ್ಕಮಕ್ಕಳ ಶೋಚನೀಯ ಪರಿಸ್ಥಿತಿ ಇವುಗಳು ರಾಜಕೀಯ ರಂಗದಿಂದ ನಿವೃತ್ತನಾಗಲು ಅವಕಾಶ ಕೊಡಬೇಕೆಂದು ಪಂಡಿತ ಮೋತಿಲಾಲ ನೆಹರೂರನ್ನು ಪ್ರಾರ್ಥಿಸಿಕೊಳ್ಳಲು ನನ್ನನ್ನು ಒತ್ತಾಯಿಸಿದವು. ಆದರೆ ಅವರು ಕೇಳಲಿಲ್ಲ. ಆದ್ದರಿಂದ ನಾನು ನನ್ನ ಮುರಿದ ಮನೆಗಿಂತಲೂ ಹೆಚ್ಚಾಗಿ ಸಾರ್ವಜನಿಕ ವ್ಯವಹಾರ ಮತ್ತು ಚುನಾವಣೆಗಳಿಗೆ ಗಮನವೀಯುವಂತಾಯಿತು.

ಚುನಾವಣೆಗಳಂತೂ ಸರಿಯೆ, ಆ ಕಾಲದಲ್ಲಿ ಚಳವಳಿಗೆ ಸೇರಿದವರಿಗೆಲ್ಲ ಕಾಂಗ್ರೆಸ್ ಕೆಲಸ ಮೈತುಂಬ ಇರುತ್ತಿತ್ತು. ದೇಶದ ಏಕೈಕ ಧುರೀಣರಾದ ಮಹಾತ್ಮಾ ಗಾಂಧಿಯವರಿಗೆ ವಿಶ್ರಾಂತಿಯೆಂಬುದು ಗೊತ್ತಿರಲೇ ಇಲ್ಲ; ತಮ್ಮ ಅನುಯಾಯಿಗಳಿಗೂ ಅವರು ವಿಶ್ರಾಂತಿಯ ಅವಕಾಶವನ್ನು ಕೊಡುತ್ತಿರಲಿಲ್ಲ. ಯಾವ ಗಳಿಗೆಯಲ್ಲೂ ಮಹಾತ್ಮಾಜಿಯವರು ಆರಂಭಿಸಬಹುದಾಗಿದ್ದ ಯಾವುದೇ ತರಹದ ಚಳವಳಿಯನ್ನು ನಡೆಸಲು ಕಾಂಗ್ರೆಸ್ ಸಂಸ್ಥೆ ಸದಾ ಸಿದ್ಧವಿರಬೇಕಾಗಿತ್ತು. ೧೯೨೯ ರಿಂದ ೧೯೩೩ ರ ನಡುವೆ ಉಪ್ಪಿನ ಸತ್ಯಾಗ್ರಹ (೧೯೩೦), ಕರನಿರಾಕರಣೆ ಚಳವಳಿ (೧೯೩೨) ಗಳ ರೂಪದಲ್ಲಿ ಕಾಯದೆ ಭಂಗ ಚಳವಳಿಗಳು ನಡೆದವು. ಈ ಎರಡೂ ಚಳವಳಿಗಳ ಸಮಯದಲ್ಲಿ ನಾನು ದೀರ್ಘಕಾಲದ ವರೆಗೆ ಸೆರೆಮನೆಯಲ್ಲಿದ್ದೆ. ದೇಶದ ತುಂ-

ಬೆಲ್ಲ ಆಗ ಅಸಂತುಷ್ಟತೆಯ ಹೊಗೆಯಾಡು ತ್ತಿತ್ತು. ಶಾಲೆ ಕಾಲೇಜುಗಳ ವಿದ್ಯಾರ್ಥಿಗಳ ಮೇಲೂ ಇದರ ಪರಿಣಾಮವಾಗಿತ್ತು. ಈ ಎಲ್ಲ ಕಾರಣಗಳಿಂದ ಚಿಕ್ಕ ತಪೋವರ್ಧನನಿಗೆ ಖಾಸಗಿ ಶಿಕ್ಷಕರಿಂದ ದೊರೆತ ಶಿಕ್ಷಣದ ಹೊರ ತಾಗಿ ಹೆಚ್ಚಿನ ಕ್ರಮಬದ್ಧ ಶಿಕ್ಷಣವೇನೂ ದೊರೆ ಯಲಿಲ್ಲ. ೧೯೪೦ ರ ವೈಯಕ್ತಿಕ ಸತ್ಯಾಗ್ರಹ ಚಳವಳಿ ಮತ್ತು ೧೯೪೨ ರ 'ಭಾರತದಿಂದ ತೊಲಗಿರಿ' ಚಳವಳಿಗಳು ನಂತರ ಬಂದವು. ೧೯೪೫ ರಲ್ಲಿ ದ್ವಿತೀಯ ಮಹಾಯುದ್ಧದ ಕೊನೆ- ಯ ದಿನಗಳು ಸಮೀಪಿಸಿ 'ಸ್ವರಾಜ್ಯ' ಪ್ರಾಪ್ತಿಯ ಚಿಹ್ನಗಳು ಕಾಣಿಸುವವರೆಗೂ ದೇಶದಲ್ಲಿ ಶಾಂತಿ ಯೆಂಬುದು ಇರಲೇ ಇಲ್ಲ.

೧೯೨೦-೨೧ ರ ನಂತರ ಸರಕಾರೀ ಶಿಕ್ಷಣ ಸಂಸ್ಥೆಗಳನ್ನು ಬಹಿಷ್ಕರಿಸಲು ಸ್ಪಷ್ಟ ಕರೆ ಇರ ಲಿಲ್ಲವಾದರೂ ಸಾಮಾನ್ಯವಾಗಿ ಕಾಂಗ್ರೆಸ್ಸಿಗರು ತಮ್ಮ ಮಕ್ಕಳನ್ನು ಇಂಥ ಸಂಸ್ಥೆಗಳಿಗೆ ಶಿಕ್ಷಣ ಕ್ಕಾಗಿ ಕಳಿಸಬಾರದೆಂದೇ ಇತ್ತು. ತನ್ನ ಜೀವನ ಸಿದ್ಧತೆಯ ಕಾಲದಲ್ಲಿ ನನ್ನ ಕಿರಿಯ ಮಗ ಮನೆಯಲ್ಲಿ ಮತ್ತು ಇಂದು ಒಂದು, ನಾಳೆ ಇನ್ನೊಂದು ಎಂದು ಹಲವಾರು ಶಾಲೆಗಳಲ್ಲಿ ಸಿಕ್ಕ ಅಷ್ಟಿಷ್ಟು ಶಿಕ್ಷಣದಿಂದಲೆ ಬೆಳೆದ. ೧೯೪೫ ರಲ್ಲಿ ಆತ ೨೧ ವರ್ಷದವನಾದಾಗ ಅವನಿಗೆ ಯಾವ ಅಧಿಕೃತ ಪದವಿಯೂ ದೊರಕಿರಲಿಲ್ಲ. ಆದರೆ ಜಗತ್ತು ಮತ್ತು ಅದರ ರೀತಿನೀತಿಗಳ ಬಗ್ಗೆ ಅವನಿಗೆ ತುಂಬಾ ಜ್ಞಾನ ಪ್ರಾಪ್ತವಾಗಿತ್ತು. ಆತನ ಮನದಲ್ಲಿ ಬಂಧನಗಳ, ದಂಡದ ಹಣ ವನ್ನು ವಸೂಲು ಮಾಡಲೆಂದು ಮನೆಯ ಜಪ್ತಿಗೆ ಬಂದ ನಿರ್ದಯಿ ಪೋಲೀಸರ ಕಹಿ ನೆನಹುಗಳು ಅಚ್ಚೊತ್ತಿದ್ದವು. ತಮ್ಮನ್ನು ಎಂದೂ ವಿರೋಧಿ ಸಲಾರದ ಮನೆಯಲ್ಲಿನ ಚಿಕ್ಕ ಮಕ್ಕಳೊಡ ನೆಯೂ ಈ ಪೋಲೀಸರು ಸೌಜನ್ಯದಿಂದ ವರ್ತಿ ಸುತ್ತಿರಲಿಲ್ಲ. ತನ್ನ ಪ್ರೀತಿಪಾತ್ರವಾದ ವಸ್ತುಗ ಳನ್ನು ಬಲಾತ್ಕಾರದಿಂದ ಅವರೊಯ್ಯುವುದನ್ನು ಕಂಡು ತಪೋವರ್ಧನನಿಗೆ ತುಂಬ ವೇದನೆಯಾ ಗುತ್ತಿತ್ತು.

೧೯೪೫ ರಲ್ಲಿ ಮಾತ್ರವೇ ಒಮ್ಮಿಂದೊಮ್ಮೆ ನನ್ನ ಕೌಟುಂಬಿಕ ಹೊಣೆಯ ಮತ್ತು ನಾನ- ದನ್ನು ಅತ್ಯಂತ ನಿರ್ಲಕ್ಷ್ಯ ಮಾಡಿದ್ದೆನೆಂಬ ಅರಿವು ನನಗುಂಟಾಯಿತು ಎಂದು ಹೇಳಲು ನನಗೆ ತುಂಬ ನಾಚಿಕೆಯಾಗುತ್ತದೆ. ಈ ಅರಿವು ತೀರ ತಡವಾಗಿ ಉಂಟಾಗಿತ್ತು. ಸ್ವಾತಂತ್ರ್ಯ ಚಳವಳಿಯನ್ನು ನನ್ನಂತೆ ಸೇರಿದ ಇನ್ನೂ ಅನೇ ಕಾನೇಕ ಜನರ ಅವಸ್ಥೆಯೂ ಹೀಗೆಯೆ ಆಗಿದ್ದಿರ ಬೇಕು. ನನಗಿಂತಲೂ ಅವರ ಪರಿಸ್ಥಿತಿ ಹೆಚ್ಚು ಕೆಟ್ಟದ್ದಾಗಿರಲೂ ಸಾಕು. ಈಗ ನನ್ನೆದುರಿರುವ ಸಮಸ್ಯೆ ನನ್ನ ಅಸಂಖ್ಯ ಮಿತ್ರರು ಮತ್ತು ಸಹ ಕಾರಿಗಳದ್ದೂ ಆಗಿರಬೇಕು. ಇಷ್ಟು ತಡವಾಗಿ ಯಾದರೂ ಈ ಸಮಸ್ಯೆ ಬಹಿರಂಗಕ್ಕೆ ಬಂದದ್ದು ಒಳ್ಳೆಯದೇ ಸರಿ. ಮರೆಯಬಾರದಂಥ ಒಂದು ಪಾಠ ಅದರಲ್ಲಿದೆ.

ಕೊನೆಗೂ ೧೯೪೭ ರಲ್ಲಿ ಸ್ವರಾಜ್ಯ ಬಂದಾಗ, ನಾನು ಪ್ರಧಾನ ಮಂತ್ರಿಗಳ ಕರೆಯನ್ನೊಪ್ಪಿ ಪಾಕಿಸ್ತಾನದಲ್ಲಿ ಭಾರತದ ಪ್ರಥಮ ಹೈಕಮೀಶ ನರ್ ಎಂದು ಕರಾಚಿಗೆ ಹೋದಾಗ ಮತ್ತು ಸಾರ್ವಜನಿಕ ಜೀವನದಲ್ಲಿದ್ದ ಇನ್ನೂ ಅನೇಕರು ಗವರ್ನರರೊ ಮಂತ್ರಿಗಳೊ ಆಗಿ ಅಧಿಕಾರ ಸ್ಥಾನಗಳನ್ನೇರಿದಾಗ ನಾನು ಉತ್ತರಿಸಲಾರದೆ ಹೋದ ಈ ತರುಣನ ಪ್ರಶ್ನೆಗಳು ನನ್ನ ಎದುರು ನಿಂತವು. ಆಗ ಅಧಿಕಾರ ಸ್ವೀಕರಿಸಿದವರೆಲ್ಲರೂ ಗಾಂಧಿಪೂರ್ವ ಯುಗದಲ್ಲಿ ಸಾಂಪ್ರದಾಯಿಕ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣ ಪಡೆದವರಾಗಿದ್ದರು ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಇವರಲ್ಲಿ ಅನೇಕರಿಗೆ ನನ್ನಂತೆ ಪಾಶ್ಚಾತ್ಯ ಶಿಕ್ಷಣದ ಲಾಭವೂ ದೊರೆತಿತ್ತು.

ಆ ಕಾಲದಲ್ಲಿ ಕೂಡ ರಾಷ್ಟ್ರೀಯ ಚಳವಳಿಯ ಪರಿಣಾಮಕ್ಕೊಳಗಾಗದ ಅಸಂಖ್ಯ ವಿದ್ಯಾರ್ಥಿಗ- ಳಿದ್ದರು ಎಂಬುದನ್ನು ಮರೆಯಲಾಗದು. ಅವರು ತಮ್ಮಷ್ಟಕ್ಕೆ ತಾವಿದ್ದು ಮನಗೊಟ್ಟು ಅಭ್ಯಾಸ ಮಾಡಿ ಉನ್ನತ ಪರೀಕ್ಷೆಗಳನ್ನು ಪಾಸಾಗಿ ಸರ-

ಕಾರದ ಹಿರಿಯ ಹುದ್ದೆಗಳಲ್ಲಿದ್ದರು. ಸ್ವರಾಜ್ಯ ಬಂದಾಗ ಅವರಲ್ಲೊಬ್ಬನಿಗೂ ಚ್ಯುತಿ ಬರಲಿಲ್ಲ. ನಿಜವೆಂದರೆ ಬ್ರಿಟಿಶ್ ಅಧಿಕಾರಿಗಳ ನಿರ್ಗಮನದಿಂದ ಈ ಜನರಿಗೆ ಅವರು ಕಾಯುತ್ತಿದ್ದ ಅವಕಾಶ ಅನಾಯಾಸವಾಗಿ ದೊರೆಯಿತು. ಅವರು ಮೇಲಿನ ಸ್ಥಾನಗಳಿಗೇರಿಸಲ್ಪಟ್ಟರು. ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ತಮ್ಮ ಕರ್ತವ್ಯವೆಂದು ಬಗೆದು ಯಾರು ಜನರ ಮೇಲೆ ಅತ್ಯಾಚಾರ ಮಾಡಿದ್ದರೊ ಅಂಥ ಅಧಿಕಾರಿಗಳು ಕೂಡ ನೌಕರಿಯಲ್ಲೆ ಉಳಿದರು. ಅವರಿಗೂ ಅವರಿಗೆ ಸಿಗಬೇಕಾಗಿದ್ದ ಬಡತಿ ಸಿಕ್ಕಿತು. ಸಿವಿಲ್ ಮತ್ತು ಇತರ ಶಾಖೆಗಳಲ್ಲಿನ ಎಷ್ಟೋ ಜನ ಅಧಿಕಾರಿಗಳು ಎಷ್ಟೋ ಕಾಂಗ್ರೆಸ್ ಧುರೀಣರ ಸಂಬಂಧಿಕರೇ ಆಗಿದ್ದರು.

ನನ್ನ ಮಗನ ಪ್ರಶ್ನೆಗಳು ಇವು: "ಗಾಂಧೀಜಿ ಮತ್ತು ಕಾಂಗ್ರೆಸ್ಸಿನ ಆದೇಶಗಳನ್ನು ಪಾಲಿಸುವಲ್ಲಿ ಸ್ವಂತ ಮಕ್ಕಳ ಶಿಕ್ಷಣಾದಿಗಳನ್ನೂ ಕಡೆಗಣಿಸುವಷ್ಟು ಮಟ್ಟಿಗೆ ಪ್ರಾಮಾಣಿಕ ತಾನು ಎಂದು ನೀವೇಕೆ ನಟಿಸಿದಿರಿ? ನೀವೆಲ್ಲ ನಿಮ್ಮ ಹೋಳಿಗೆ ತುಪ್ಪದಲ್ಲಿ ಕೆಡವಿಕೊಂಡಿರಿ, ಆದರೆ ನಮ್ಮನ್ನೆಲ್ಲ ಮೂಲೆಗೆಸೆದಿರಿ. ಕಾಂಗ್ರೆಸ್ಸಿನ ಆದೇಶವನ್ನು ಧಿಕ್ಕರಿಸಿ ಬ್ರಿಟಿಶರ ಸೇವೆಗೆ ನಿಂತವರಿಗೆ ಏನು ಪ್ರಾಯಶ್ಚಿತ್ತವಾಗಿದೆ ? ಅವರ ಸ್ಥಾನ ಭದ್ರವೇ ಆಗಿದೆ. ಅವರಲ್ಲಿ ಕೆಲವರಂತೂ ಮೊದಲಿಗಿಂತಲೂ ಈಗ ಚೆನ್ನಾಗಿದ್ದಾರೆ. ಅವರಲ್ಲಿ ಇಂಥಿಂಥವರು ಇಂಥಿಂಥವರ ಸಂಬಂಧಿಕರಲ್ಲವೆ? ಈ ಜನರಿಗೆ ಇಹಪರ ಎರಡೂ ಸಾಧಿಸಿದಂತಾಗಿದೆ. ಅವರೂ ಮಹಾಸ್ವಾತಂತ್ರ್ಯ ಚಳವಳಿಯ ಧುರೀಣರಾಗಿದ್ದರು. ಅವರು ನಿಮ್ಮಂತೆ ಮಾಡದೆ ತಮ್ಮ ಮಕ್ಕಳಿಗೆ ದೇಶವಿದೇಶಗಳಲ್ಲಿ ಶಿಕ್ಷಣ ಕೊಡಿಸಿದರು. ಇಂದು ಸ್ವತಂತ್ರ ಭಾರತದಲ್ಲಿ ಅವರು ಸ್ವತಃ ದೊಡ್ಡ ಅಧಿಕಾರ ಸ್ಥಾನಗಳಲ್ಲಿದ್ದಾರೆ. ಅವರ ಮಕ್ಕಳಿಗೂ ಒಳ್ಳೆಯ ಅವಕಾಶಗಳು ಪ್ರಾಪ್ತವಾಗಿವೆ. ಆದರೆ ನಾನೊ......"



ತಂದೆ

ಒಂದು ಮಹಾಸಾಧನೆಗಾಗಿ ಕೆಲವರಾದರೂ ಕಷ್ಟಪಡಬೇಕಾಗುತ್ತದೆ ಎಂದು ಅವನಿಗೆ ಹೇಳುವುದರಲ್ಲಿ ಏನೂ ಪ್ರಯೋಜನವಿರಲಿಲ್ಲ; ಸ್ವರಾಜ್ಯ ಬಂದಿರುವುದರಿಂದ ಅವನಿಗೆ ಸಿಗದ್ದು ಅವನ ಮಕ್ಕಳಿಗೆ ಸಿಕ್ಕೀತು ಎಂದು ಹೇಳುವುದರಲ್ಲಿ ಅರ್ಥವಿರಲಿಲ್ಲ. ಕರ್ತವ್ಯ ಪಥವನ್ನು ಮೀರಿ ಅನ್ಯಾಯವನ್ನೆಸಗಿದ್ದರೂ ಅಂಥವರನ್ನು ದಂಡಿಸುವುದು ಅಹಿಂಸಾತ್ಮಕ ಹೋರಾಟ ನಡೆಸಿದ್ದ ನಮಗೆ ಯುಕ್ತವಲ್ಲವೆಂದು ನಾನಂದಾಗ ಅವನಿಗೆ ಇನ್ನಿಷ್ಟು ಸಂತಾಪವಾಯಿತು. ಹಳೆಯ ನೌಕರರನ್ನೆಲ್ಲ ಕಿತ್ತು ಹಾಕಿದರೆ ದೇಶದಲ್ಲೆಲ್ಲ ಅವ್ಯವಸ್ಥೆ ತಾಂಡವವಾಡೀತು ಎಂದು ಅನ್ನುವುದರಲ್ಲಿ ಸ್ವಾರಸ್ಯವಿರಲಿಲ್ಲ. ಅವನಿಗೆ, ತನ್ನ ಯೌವನದಲ್ಲಿ ತಾನು ಗೊತ್ತುಗುರಿಯಿಲ್ಲದವನಾಗಿರುವಾಗ, ತನ್ನ ತಂದೆ ಮತ್ತು ಅವನ ಪರಿಚಯದ ಇನ್ನಿತರ ಹಿರಿಯರು ಉನ್ನತ ಅಧಿಕಾರಿಗಳಲ್ಲಿರುವುದನ್ನು ಕಾಣುತ್ತಿದ್ದ ಅವನಿಗೆ, ಇವಾವ ಮಾತುಗಳೂ

ಸಮಾಧಾನವನ್ನುಂಟುಮಾಡುವಂತಿರಲಿಲ್ಲ.

ಈ ಪರಿಸ್ಥಿತಿಯ ಒಳಹೊಡೆತ ತೀವ್ರವಾಗಿದ್ದುದರಿಂದ ನಾನು ಒಂದು ಅಧಿಕಾರ ಸ್ಥಾನದಿಂದ ಇನ್ನೊಂದಕ್ಕೆ ಹೋಗಲು ಏನೇನೂ ಮನವಿಲ್ಲದವನಾಗಿದ್ದೆ. ಪ್ರತಿ ಹೊಸ ಹುದ್ದೆಯನ್ನೂ ನನಗೆ ಕೊಡಮಾಡಿದಾಗ ನಾನು ಪ್ರಧಾನ ಮಂತ್ರಿಗಳನ್ನು ಬೇಡವೆಂದು ಬೇಡಿಕೊಂಡೆ. ಆದರೆ ನನ್ನ ಹಳೆಯ ಆತ್ಮೀಯ ಸ್ನೇಹಿತರಿಗೆ 'ಇಲ್ಲ'ವೆನ್ನಲಾರದೆ ನಾನು ೧೯೪೭ರಿಂದ ಮೊನ್ನೆ ಮೊನ್ನೆಯವರೆಗೂ ಅಧಿಕಾರ ಸ್ಥಾನದಲ್ಲುಳಿದೆ. ಆದರೆ ನನ್ನ ಮಗನ ಪ್ರಶ್ನೆಗಳು ಮಾತ್ರ ನನ್ನ ಹೃದಯದಲ್ಲಿ ನಾಟಿ ಕುಳಿತಿವೆ. ಅವಕ್ಕೆ ಉತ್ತರ ನನ್ನ ಬಳಿ ಇಲ್ಲ. ಕೊನೆಗೂ ನೌಕರಿ ಬಿಟ್ಟು ಬಂದಾಗ ನನಗೆ ಒಂದಿಷ್ಟು ಹಾಯೆನಿಸಿತು. ದುರ್ದೈವದಿಂದ ನನ್ನ ಮಗ ಇಲ್ಲವಾದರೂ ಅವನ ಪ್ರಶ್ನೆಗಳು ನನ್ನನ್ನು ಈಗಲೂ ಕಾಡಿಸುತ್ತಿವೆ.

ಕೊನೆಗೆ ನನ್ನ ಮಿತ್ರರಾದ ಶ್ರೀ ರಫಿ ಅಹಮ್ಮದ ಕಿಡವಾಯಿಯವರು-ನಾನು ಕಂಡ ಅಸಾಮಾನ್ಯ ಪುರುಷರಲ್ಲಿ ಇವರೊಬ್ಬರು—ಮಿತ್ರನಿರಲಿ ಶತ್ರುವಿರಲಿ ತಮ್ಮ ಬಳಿ ಬಂದ ಪ್ರತಿಯೊಬ್ಬನಿಗೂ ಇವರು ಸಹಾಯ ಮಾಡುತ್ತಿದ್ದರು-ನನ್ನ ಸಹಾಯಕ್ಕೆ ಬಂದರು. ನನ್ನ ಮಗನೊಂದಿಗೆ ಮಾತನಾಡುತ್ತಿದ್ದಾಗ ಆತನಿಗೆ ವೈಮಾನಿಕನಾಗುವ ಹಂಬಲವಿದ್ದಿತೆಂದು ಕಂಡುಕೊಂಡಿದ್ದೆ. ಆಗಿನ ಸರಕಾರದೊಡನೆ ಅಸಹಕರಿಸುತ್ತಿದ್ದ ನನಗೆ ಅಂಥ ವಿಚಾರ ಕೂಡ ಬರುವುದು ಸಾಧ್ಯವಿರಲಿಲ್ಲ. ನನ್ನೊಂದಿಗೆ ನನ್ನ ಪ್ರಿಯ ಪುತ್ರನನ್ನೂ ಬಲಿ ಕೊಡಬೇಕಾಗಿತ್ತು. ನನ್ನ ಸಹಕಾರಿಗಳನೇಕರು ಅಂಥ ವಿಚಾರ ಕೂಡ ತಮಗೆ ನೀಗದ ಮಾತು ಎಂದು ನನ್ನೊಡನೆ ಹೇಳಿಯೂ ಇದ್ದರು. ಅವರದು ಸರಿಯೆ ನನ್ನದು ಸರಿಯೆ ಎಂದು ನನಗೆ ತಿಳಿಯದು. ಆದರೆ ಸ್ವರಾಜ್ಯ ಬಂದನಂತರ ಯಾವ ನಿಷೇಧವೂ ಉಳಿಯಲಿಲ್ಲ. ರಫಿ ಅಹಮ್ಮದರಿಗೆ ಈ ವಿಚಾರ ತಿಳಿದಾಗ ತಪೋವರ್ಧನನಿಗೆ ವೈಮಾನಿಕ ದಲದಲ್ಲಿ ಸೇರಿಕೊಳ್ಳುವ ವಯಸ್ಸು ದಾಟಿಹೋಗಿತ್ತು. ಆತ ನಾಗರಿಕ ವಿಮಾನ ಸಾರಿಗೆ ಶಾಖೆಯನ್ನು ಸೇರಿಕೊಳ್ಳಬಹುದಲ್ಲ ಎಂದರವರು. ಇದಕ್ಕಾಗಿ ವೈಮಾನಿಕ ಶಿಕ್ಷಣ ಸಂಸ್ಥೆಗೆ ಸೇರಿಕೊಳ್ಳುವುದೂ ಸುಲಭವಾಗಿರಲಿಲ್ಲ. ಆದರೆ ರಫಿಯವರಿಗೆ ಅವರದೇ ಕಾರ್ಯಪದ್ಧತಿಯೊಂದಿತ್ತು. ಅವರು ಯಾವಾಗಲೂ ಯಶಸ್ವಿಗಳಾಗುತ್ತಿದ್ದರು. ನನ್ನ ಮಗನಿಗೆ ಅವರು ಪ್ರವೇಶ ದೊರಕಿಸಿಕೊಟ್ಟರು. ಆತ ಶಿಕ್ಷಣ ಪಡೆದು ಒಂದು ಸಾರಿಗೆ ವಿಮಾನ ಕಂಪನಿ ಸೇರಿ ನಂತರ ಇಂಡಿಯನ್ ಎರ್‌ಲೈನ್ಸ್ ಕಾರ್ಪೊರೇಶನ್ನನ್ನು ಸೇರಿಕೊಂಡ.

ತಪೋ ದಿಲ್ಲಿ ಮತ್ತು ಮುಂಬಯಿಗಳ ನಡುವೆ ನಿಯಮಿತವಾಗಿ ಡಕೋಟಾ ವಿಮಾನಗಳನ್ನು ನಡೆಸುತ್ತಿದ್ದ. ಆಗಾಗ ನಾಗಪುರ, ಹೈದರಾಬಾದ, ಮಂಗಳೂರು ಮುಂತಾದ ಸ್ಥಳಗಳಿಗೂ ಹೋಗುತ್ತಿದ್ದ. ನಾನು ದಿಲ್ಲಿಯಲ್ಲಿ ಮಂತ್ರಿಯಾಗಿದ್ದಾಗ ಮತ್ತು ನಂತರ ಮದ್ರಾಸಿನಲ್ಲಿ ರಾಜ್ಯಪಾಲನಾಗಿದ್ದಾಗ ಆ ಊರುಗಳಿಗೆ ಬಂದರೆ ರಾತ್ರಿ ನನ್ನೊಡನೆ ಇದ್ದು ಮುಂಜಾನೆ ಹೋಗುತ್ತಿದ್ದ.

ಒಮ್ಮೆ ಆತ ಹೀಗೆ ದಿಲ್ಲಿಯಲ್ಲಿ ನನ್ನೊಡನಿದ್ದಾಗ ಒಂದು ಸಂಗತಿ ನಡೆಯಿತು. ನಾನು ಅದೇ ಆಗ ನೈಸರ್ಗಿಕ ಸಂಪತ್ತು ಮತ್ತು ವೈಜ್ಞಾನಿಕ ಸಂಶೋಧನೆ ಶಾಖೆಯ ಮಂತ್ರಿಯಾಗಿ ನೇಮಕಗೊಂಡಿದ್ದೆ. ಇದಕ್ಕೂ ಮೊದಲು ಒಂದು ವರ್ಷ ಕಾಲ ವಾಣಿಜ್ಯ ಮಂತ್ರಿಯಾಗಿದ್ದೆ. ಹೊಸ ಮಂತ್ರಿಶಾಖೆಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ನನಗೆ ಏನೇನೂ ಗೊತ್ತಿರಲಿಲ್ಲ. ನಾನು ಲೋಕಸಭೆಯಲ್ಲಿ ಉತ್ತರ ಕೊಡಬೇಕಾಗಿದ್ದ ಮೊಟ್ಟಮೊದಲನೆಯ ಪ್ರಶ್ನೆ ತೀರ ತಾಂತ್ರಿಕ ಸ್ವರೂಪದ್ದಾಗಿತ್ತು. ನನ್ನ ಕಚೇರಿ ಸಿದ್ಧಪಡಿಸಿದ್ದ ಉತ್ತರ ನನ್ನ ಬಳಿ ಬಂದಿತ್ತು. ನಾನದನ್ನು ಮರುದಿನ ಸಭೆಯಲ್ಲಿ ಓದಲಿದ್ದೆ. ನಾನು ಅದನ್ನರಿತುಕೊಳ್ಳಲು ಮತ್ತು ಉದ್ಭವಿಸಬಹುದಾದ

ಪೂರಕ ಪ್ರಶ್ನೆಗಳಿಗೆ ಉತ್ತರದ ತಯಾರಿ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೆ. ಆದರೆ ನನಗೆ ವಿಷಯದ ಬುಡ-ತುದಿಯೆ ಕಲ್ಪನೆಗೆ ನಿಲುಕದಂತಾಗಿತ್ತು.

ಅರ್ಥಮಂತ್ರಿಯಾದಾಗ ರಂಡೋಲ್ಫ ಚರ್ಚಿಲ್ಲರು ತಮ್ಮ ಮುಂಗಡಪತ್ರಿಕೆ ಭಾಷಣ ಮಾಡುತ್ತಿದ್ದಾಗ ಅಂಕೆಗಳ ನಡುವಿನ ದಶಾಂಶ ಚಿಹ್ನಗಳ ಅರ್ಥವಾಗದೆ ಟ್ರೆಝುರಿ ಬೆಂಚಿನಲ್ಲಿ ತಮ್ಮ ಪಕ್ಕದಲ್ಲಿದ್ದ ಒಬ್ಬರಿಗೆ "ಈ ಸುಡುಗಾಡು ಚಿಹ್ನಗಳ ಅರ್ಥವೇನು?" ಎಂದು ಕೇಳಿದ್ದರಂತೆ. ನನ್ನ ಅವಸ್ಥೆಯೂ ಅದರಂತೆಯೆ ಆಗಿತ್ತು. ನನ್ನ ಮಗನಿಗೆ ಈ ವಿಷಯದ ಜ್ಞಾನವಿದೆಯೆಂದೇನೂ ನನಗೆ ಗೊತ್ತಿರಲಿಲ್ಲ. ನಾನು ಒದ್ದಾಡುತ್ತಿರುವುದನ್ನು ಕಂಡ ಅವನ ಕುತೂಹಲ ಕೆರಳಿ ಸಮಾಚಾರವೇನು ಎಂದು ಕೇಳಿದ. ಅವನಿಗೆ ಆ ವಿಷಯದ ಪೂರ್ಣ ಜ್ಞಾನವಿರುವುದನ್ನು ಕಂಡು ನಾನು ಆಶ್ಚರ್ಯಚಕಿತನಾಗಿ ಹೋದೆ. ಆತ ಪುಸ್ತಕವೊಂದನ್ನು ತಂದು ನನಗೆ ಅಟ್‌ಮೊಸಫಿಯರ್, ಸ್ಟ್ರಾಟೊಸ್ಫಿಯರ್, ಸ್ಟ್ರಾಟೊಸಾಜ್, ಅಯಾನೊಸ್ಫಿಯರ್ ಮುಂತಾದವುಗಳ ರಹಸ್ಯವನ್ನು ತಿಳಿಹೇಳಿ ಬೇಕಾದಂಥ ಪ್ರಶ್ನೆಗಳಿಗೆ ಉತ್ತರ ಹೇಳಲು ಬರುವಂತೆ ನನ್ನನ್ನು ಅಣಿ ಮಾಡಿದ. ಮರುದಿನ ಲೋಕಸಭೆಯ ಪರೀಕ್ಷೆಯಲ್ಲಿ ನಾನು ಉತ್ತೀರ್ಣನಾದೆ. ನನ್ನ ಕಠಿಣ ಸಮಯದಲ್ಲಿ ನನ್ನ ನೆರವಿಗೆ ಬರಲು ಅನುಕೂಲವಾಗುವಂತೆ ನನ್ನ ಮಗನಿಗೆ ಅವಕಾಶ ದೊರಕಿಸಿಕೊಟ್ಟಿದ್ದಕ್ಕಾಗಿ ಮರುದಿನ ನಾನು ರಫಿ ಅಹಮ್ಮದರನ್ನು ಅಭಿನಂದಿಸಿದೆ. ಪ್ರಶ್ನೋತ್ತರ ಕಾಲದಲ್ಲಿ ನಾನು ತೋರಿದ ಜ್ಞಾನಕ್ಕೆ ನನ್ನ ಕಚೇರಿ ಕಾರಣವಲ್ಲ, ನನ್ನ ಮಗ ಎಂಬುದನ್ನು ರಫಿ ಅಹಮ್ಮದರು ಪ್ರಧಾನಮಂತ್ರಿಗಳಿಗೆ ನಂತರ ಹೇಳಿದರು. ಆ ಶಾಖೆಯ ಮಂತ್ರಿಯಾಗಿ ನಾನು ಉತ್ತರಿಸಿದ ಮೊಟ್ಟಮೊದಲನೆಯ ಪ್ರಶ್ನೆಯೆ ಅದಾಗಿತ್ತು. ತನ್ನ ಕಾರ್ಯನಿರ್ವಹಣ ಸಮಯದಲ್ಲಿ ನನ್ನ ಮಗ ಆಕಾಶದ ಬಗ್ಗೆ ಸಕಲ ಮಾಹಿತಿಯನ್ನು ಸಂಗ್ರಹಿಸಿದ್ದ. ತನ್ನ ಸಾಹಸ, ತಾನೆದುರಿಸಿದ ಗಂಡಾಂತರಗಳನ್ನು ಆತ ನನಗೆ ಹೇಳಿದ್ದ. ಅವನ್ನು ಕೇಳಿ ನಾನು ಗಾಬರಿಗೊಳ್ಳುವಂತಾಗಿತ್ತು.

ತಪೋ ನಿಜವಾಗಿಯೂ ತುಂಬ ಧೈರ್ಯಶಾಲಿಯಾದ ತರುಣ. ಇನ್ನೂ ಬಾಲಕನಾಗಿದ್ದಾಗ ಆತ ವಾರಾಣಸಿಯ ನಮ್ಮ ಮನೆಯ ತೋಟದಲ್ಲಿ ಬೇವಿನ ಕಡ್ಡಿಯಿಂದ ಹಲ್ಲುಜ್ಜಿಕೊಳ್ಳುತ್ತ ನಿಂತಾಗ ಹಾವೊಂದು ಅವನ ಬರಿಗಾಲಿನ ಮೇಲೆ ಹರಿದುಹೋಯಿತು. ಆತ ಗಾಬರಿಯಾಗದೆ ನಿಶ್ಚಲನಾಗಿ ನಿಂತ. ಆತನೇನಾದರೂ ಚಲನವಲನ ಮಾಡಿದ್ದರೆ ಪ್ರಾಣಕ್ಕೇ ಸಂಚಕಾರವಿತ್ತು. ಆತ ನಿಶ್ಚಲನಾಗಿ ನಿಂತ, ಹಾವು ತನ್ನಷ್ಟಕ್ಕೆ ಹರಿದು ಹೋಯಿತು.

ಆತನಿಗೆ ಕಾಲೇಜು ಶಿಕ್ಷಣ ದೊರೆತಿರದಿದ್ದರೂ ಆತ ತುಂಬ ಜಾಣನಾಗಿದ್ದ. ಆತನ ದೇಹ ಮನಗಳೆರಡೂ ಅತ್ಯಂತ ಚುರುಕಾಗಿದ್ದವು. ಜ್ಞಾನವನ್ನು ಆತ ಶ್ರದ್ಧೆಯಿಂದ ಬಲು ಬೇಗ ಹಸ್ತಗತ ಮಾಡಿಕೊಳ್ಳುತ್ತಿದ್ದ.

ವಿಮಾನ ನಿಲ್ದಾಣದಲ್ಲಿ ಕೆಲಸ ಮಾಡುತ್ತಿದ್ದಾಗ ಒಂದು ಅಪಘಾತವಾಗಿ ಅವನ ಎಡಗೈ ಎಲುವು ಮುರಿದುಹೋಯಿತು. ಆತ ಆ ಕೈ ಕಟ್ಟಿಕೊಂಡು ರಾತ್ರಿಯ ವಿಮಾನದಲ್ಲಿ ಮದ್ರಾಸಿಗೆ ಬಂದ. ಅವನಿಗೆ ಅಪಾರವೇದನೆಯಾಗುತ್ತಿತ್ತು. ಪ್ರಸಿದ್ಧ ಅಸ್ಥಿಶಾಸ್ತ್ರಜ್ಞರಾದ ಡಾ. ತಯಾಮನಸ್ವಾಮಿಯವರು ಅವನ ಕೈ ನೆಟ್ಟಗೆ ಮಾಡಿದರು. ತಪೋ ದೀರ್ಘ ರಜೆ ಪಡೆಯಬೇಕಾಯಿತು. ಮುಂಜಾನೆ ನಾವು ಮದ್ರಾಸಿನ ಗಿಂಡಿ ರಾಜಭವನದ ಬಯಲಿನಲ್ಲಿ ಕುದುರೆ ಸವಾರಿ ಮಾಡುತ್ತಿದ್ದೆವು.

ಒಂದು ಮುಂಜಾನೆ ಒಂದು ತಾಸಿನ ಕುದುರೆ ಸವಾರಿ ಮಾಡಿ ದಣಿದ ನಾನು ಕುದುರೆಯಿಂದ ಕೆಳಗಿಳಿದರೂ ತಪೋ ಇನ್ನೂ ಸವಾರಿ ಮಾಡುತ್ತಲೇ ಇದ್ದ. ಅವನ ಕುದುರೆ ಒಮ್ಮಿಂದೊಮ್ಮೆ ಮುಂಗಾಲೆತ್ತಿ ನಿಂತಿದ್ದರಿಂದ ಆತ ಕೆಳಗೆ ಬಿದ್ದ

ಅವನ ಕಾಲು ರಿಕಾಪಿನಲ್ಲಿ ಸಿಕ್ಕಿಕೊಂಡಿದ್ದರಿಂದ ಅವನು ಒಂದಿಷ್ಟು ದೂರ ಎಳೆಯಲ್ಪಟ್ಟ. ಅವನ ಕಾಲಿನ ಅನೇಕ ಎಲುವುಗಳು ಮುರಿದವು. ಇದು ನಡೆದದ್ದು ೧೯೫೪ ರ ಆರಂಭದಲ್ಲಿ. ಇದೇ ಒಂದು ರೀತಿಯಲ್ಲಿ ಕಥೆಯ ಮುಕ್ತಾಯವಾಗಿತ್ತು.

ಇಲ್ಲಿ ಒಂದು ಮಾತು ಹೇಳಬೇಕು. ದೊಡ್ಡವನಾದ ಬಳಿಕ ಮುಂಬಯಿಯ ಅಪಘಾತದ ನಂತರ ಮದ್ರಾಸಿಗೆ ಬಂದು ನನ್ನೊಡನೆ ಆತ ನಿದ್ದ ಈ ಕೆಲವು ತಿಂಗಳುಗಳೇ ಆತ ನನ್ನೊಡನೆ ಒಂದೇ ಸವನೆ ಕಳೆದ ದೀರ್ಘ ಸಮಯವಾಗಿತ್ತು. ನಾವು ಅನೇಕ ವಿಷಯಗಳ ಬಗ್ಗೆ ಮಾತಾಡುತ್ತಿದ್ದೆವು. ಆತನಿಗಿದ್ದ ಬಹುವಿಧ ಜ್ಞಾನ, ವಿದೇಶ ವ್ಯವಹಾರಗಳ ಬಗೆಗಿದ್ದ ತಿಳುವಳಿಕೆಗಳನ್ನು ಕಂಡು ನಾನು ತುಂಬ ಪ್ರಭಾವಿತನಾದೆ. ನಿಜವಾಗಿಯೂ ತನಗೆ ನನಗಿಂತಲೂ ಹೆಚ್ಚು ಜ್ಞಾನವಿದೆಯೆಂಬ ಅವನ ಮಾತು ಸತ್ಯವಾಗಿತ್ತು. ಅವನೆದುರು ಅಪ್ರತಿಭನಾಗುವುದು ನನಗೆ ಆಶ್ಚರ್ಯಕರವಾಗಿದ್ದಂತೆ ಸಂತೋಷದಾಯಕವೂ ಆಗಿತ್ತು.

ಡಾ. ತಯಾಮನ ಸ್ವಾಮಿಯವರು ಮತ್ತೆ ನಮ್ಮ ಸಹಾಯಕ್ಕೆ ಬಂದರು. ಅದೊಂದು ಕಠಿಣ ಹೋರಾಟವಾಗಿತ್ತು. ತಪೋ ಆಸ್ಪತ್ರಿಯಲ್ಲಿ ವೇದನಾಪೂರ್ಣವಾದ ಅನೇಕ ವಾರಗಳನ್ನು ಕಳೆಯಬೇಕಾಯಿತು. ಆತ ತಿರುಗಿ ವೈಮಾನಿಕನಾಗಿ ಕೆಲಸಕ್ಕೆ ಹೋಗಲಿಲ್ಲ. ಆದರೆ ತನ್ನ ಸಹಕಾರಿಗಳ ಮೇಲೆ ತುಂಬ ಪ್ರಭಾವ ಬೀರಿದ್ದನೆಂದು ಕಾಣುತ್ತದೆ. ಆತನ ಮರಣದ ನಂತರ ಬಹುಕಾಲದ ವರೆಗೆ ನಾನು ವಿಮಾನ ಪ್ರಯಾಣ ಮಾಡಿದಾಗಲೆಲ್ಲ ಒಬ್ಬರಲ್ಲ ಒಬ್ಬರು ವೈಮಾನಿಕರು ನಾನಾರೆಂಬುದು ತಿಳಿದಾಗ ನನ್ನ ಬಳಿಗೆ ಬಂದು ತಾನು ನನ್ನ ಮಗನ ಸಹಪಾಠಿಯಾಗಿದ್ದನೆಂದೊ ಅಥವಾ ಸಹಕಾರಿಯಾಗಿದ್ದೆನೆಂದೊ ಹೇಳುತ್ತಿದ್ದ. ಅವರೆಲ್ಲ ಅವನ ಬಗ್ಗೆ ತುಂಬ ಪ್ರೀತಿಯಿಂದ ಮಾತಾಡುತ್ತಿದ್ದರು. ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅಂಥ ಕರ್ತೃತ್ವಶಾಲಿಗೆ ಇಷ್ಟು ಬೇಗನೆ ಮರಣ ಬಂದಿತಲ್ಲ ಎಂದು ಪರಿತಪಿಸುತ್ತಿದ್ದರು. ಪುತ್ರಶೋಕಪೀಡಿತನಾದ ನನ್ನಲ್ಲಿ ಅಪಾರ ಸಹಾನುಭೂತಿಯನ್ನು ತೋರುತ್ತಿದ್ದರು.

ಮದ್ರಾಸ್ ಆಸ್ಪತ್ರಿಯಲ್ಲಿ ಗುಣಹೊಂದಿದ ಬಳಿಕ ತಪೋ ವಾರಾಣಸಿಯಲ್ಲಿದ್ದ ನಮ್ಮ ಮನೆಗೆ ಮರಳಿದ. ಕೆಲಸವಿಲ್ಲದ ಆತ ವ್ಯವಹಾರದಲ್ಲಿ ಕೈಹಾಕಿ ಕೆಲವೇ ತಿಂಗಳಲ್ಲಿ ವ್ಯಾಪಾರದ ಗುಟ್ಟನ್ನೆಲ್ಲ ಅರಿತುಕೊಂಡು ತಜ್ಞನಾಗಿಬಿಟ್ಟ. ವಿಷಯಗ್ರಹಣ ಶಕ್ತಿ ಅವನಲ್ಲಿ ಅದ್ಭುತವಾಗಿತ್ತು. ನಮ್ಮ ದೇಶದಲ್ಲಿ ಅವನಂಥ ಎಷ್ಟೋ ಜನ ಅಜ್ಞಾತ ವೀರರೂ ಬುದ್ಧಿಶಾಲಿಗಳೂ ಇದ್ದಿರಬೇಕು. ತಾನು ಬಹಳ ಕಾಲ ಬದುಕುವುದಿಲ್ಲ ಎಂದು ಅವನಿಗೆ ತಿಳಿದಿದ್ದಿರಬೇಕು. ಏಕೆಂದರೆ ಅವನು ಹಾಗೆಂದು ತನ್ನ ಅಕ್ಕಂದಿರ ಬಳಿ ಆಡಿ ತೋರಿಸುತ್ತಿದ್ದ. ಆದ್ದರಿಂದಲೇ ಮದುವೆ ಮಾಡಿಕೊಳ್ಳಲು ಆತ ನಿರಾಕರಿಸಿದ.

೧೯೫೭ ಅಕ್ಟೋಬರ ತಿಂಗಳಲ್ಲಿ ಆತ ಕಾನಪುರಕ್ಕೆ ಹೋಗಿದ್ದಾಗ ಒಮ್ಮಿಂದೊಮ್ಮೆ ಅವನಿಗೆ ಹರ್ನಿಯಾ ಬಾಧೆಯಾಯಿತು. ಕೂಡಲೇ ಅವನಿಗೆ ಶಸ್ತ್ರಚಿಕಿತ್ಸೆ ನಡೆಯಿತು. ಕೆಲವೊಂದು ತೊಡಕುಗಳು- ಅವು ಕೂಡ ಮಾನಸಿಕವಾದವು- ಉದ್ಭವಿಸಿದವು. ನಮಗೆ ಡಾಕ್ಟರರು ಕೊಟ್ಟ ತಪ್ಪು ಸಲಹೆಯಿಂದ ಅವನನ್ನು ಅಂಥ ಸ್ಥಿತಿಯಲ್ಲಿ ಕಾನಪುರದಿಂದ ಬೆಂಗಳೂರಿಗೆ ಟ್ರೇನಿನಲ್ಲಿ ಕರೆತರಲಾಯಿತು. ರೋಗ ಮತ್ತಿಷ್ಟು ತೊಡಕಾಗಿ ಆತ ಕೆಲವೇ ದಿನಗಳಲ್ಲಿ ಸತ್ತ. ಮೃತ್ಯುವಿನ ಕರೆಬಂದಾಗ ಸಂಬಂಧಪಟ್ಟವರ ಬುದ್ಧಿ ಮಂಕಾಗಿ ಬಿಡುತ್ತದೆ. ಡಾಕ್ಟರರ ಆ ತಪ್ಪು ಸಲಹೆಯನ್ನು ನಾನು ಹೇಗೆ ಒಪ್ಪಿದೆನೋ ನನಗೇ ತಿಳಿಯದು. ಆಗಬೇಕಾದ್ದು ಆಗಿಹೋಯಿತು. ಧೀರನೂ ಕರ್ತೃತ್ವಶಾಲಿಯೂ ಆದವನೊಬ್ಬನ ಕಥೆ ಮುಗಿಯಿತು. ಆರು ವರ್ಷಗಳು ಕಳೆದಿದ್ದರೂ ಇಂದಿಗೂ ಗಾಯ ಮಾಯದೆ ನನ್ನಲ್ಲಿ ಉಳಿದಿದೆ.

ನನ್ನ ಮಗ ಕೇಳಿದ್ದ- ಇಲ್ಲಿ ಮೊದಲೇ ನಾನು

ಹೇಳಿರುವ-ಪ್ರಶ್ನೆಗಳಿಗೆ ಇನ್ನೂ ಉತ್ತರ ಸಿಕ್ಕಿಲ್ಲ. ಸ್ವಾತಂತ್ರ್ಯ ದಿನದಂದು ಅವನ್ನು ಜನ ಗಮನಿಸಬಹುದಾಗಿದೆ: "ಆ ಕಾಲದಲ್ಲಿ ಧುರೀಣರು ತಮ್ಮ ರಾಜಕೀಯ ಚಳುವಳಿಯಲ್ಲಿ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ಅವರ ಶಿಕ್ಷಣಕ್ಕೆ ಭಂಗ ತಂದಿದ್ದು ಸರಿಯೇ? ಶೈಕ್ಷಣಿಕ ಸಂಸ್ಥೆಗಳ ಕಾರ್ಯವನ್ನು ಹದಗೆಡಿಸಿದ್ದು ಯೋಗ್ಯವೆ? ಸ್ವರಾಜ್ಯ ಬಂದ ನಂತರ ಧುರೀಣರ ಮಾತಿನಂತೆ ನಡೆದುಕೊಂಡಿದ್ದವರನ್ನು ಅಲಕ್ಷಿಸಿ ಅವರ ಮಾತನ್ನು ಮೀರಿ ಅಧಿಕಾರ ಸ್ವೀಕರಿಸಿದ್ದವರು ಅಧಿಕಾರ ಸ್ಥಾನದಲ್ಲಿ ಭದ್ರವಾಗಿರುವಂತೆ ಬಿಟ್ಟಿದ್ದು ಸರಿಯೆ? ತಮ್ಮ ಮಕ್ಕಳು ಕಲಿತ ಶಾಲೆ ಅಥವಾ ಸಂಸ್ಥೆಗಳು ಭಾರತದ ಬ್ರಿಟಿಶ್ ಸರಕಾರದ ಸಹಾಯ ಪಡೆದವುಗಳಲ್ಲ, ಅಥವಾ ಅದರ ನಿಯಂತ್ರಣದಲ್ಲಿ ಇದ್ದವುಗಳಲ್ಲ ಎಂಬ ನೆಪ ಹೇಳಿ ತಮ್ಮ ಮಕ್ಕಳಿಗೆ ಸ್ವದೇಶ-ವಿದೇಶಗಳಲ್ಲಿ ಶಿಕ್ಷಣ ಕೊಡಿಸಿದವರದು ಯೋಗ್ಯ ಕಾರ್ಯವಾಯಿತೆ? ಕೌಟುಂಬಿಕ ಹೊಣೆಯುಳ್ಳವನು-ವಿಶೇಷತಃ ಮಾತೃಹೀನ ಮಕ್ಕಳಿದ್ದವನು ಅದನ್ನು ದುರ್ಲಕ್ಷಿಸಿ ತನ್ನ ಸಂತೋಷಕ್ಕಾಗಿಯೊ ಅಥವಾ ತಾನು ನಿಜವಾಗಿಯೂ ಒಂದು ಘನ ಉದ್ದೇಶಕ್ಕಾಗಿ ದುಡಿಯುತ್ತಿದ್ದೇನೆಯೆ ಎಂಬುದರ ನಂಬಿಕೆಯಿಲ್ಲದೆ ಸಾರ್ವಜನಿಕ ಚಳುವಳಿಗಳಲ್ಲಿ ಧುಮುಕಿದ್ದು ಸರಿಯೆ?"

ನನ್ನ ಮಗನನ್ನು ಕಾಡಿದಷ್ಟೇ ಈ ಪ್ರಶ್ನೆಗಳು ನನ್ನನ್ನೂ ಕಾಡುತ್ತಿವೆ. ಆತನಿಗೆ ಅವುಗಳ ಬೇಗೆ ತಟ್ಟಿತು, ನನಗೆ ತಟ್ಟಲಿಲ್ಲ ಅಷ್ಟೆ. ಯಾರ ಬಳಿಯಾದರೂ ಇವಕ್ಕೆ ಉತ್ತರವಿದ್ದರೆ ಅವನ್ನು ತಿಳಿಸಿದಲ್ಲಿ ನನಗೆ ಸಂತೋಷವಾದೀತು. ನನ್ನ ಮಗನಿಗಿಂತಲೂ ಹೆಚ್ಚು ಕಷ್ಟಪಟ್ಟ ತರುಣರಿದ್ದಾರೆ ಎಂದು ಬಲ್ಲೆ. ನನಗಿಂತಲೂ ಹೆಚ್ಚು ಹಾನಿಯನ್ನು ಹೊಂದಿದ ತಂದೆಯರೂ ಇದ್ದಾರೆ. ಈ ೧೫ ನೆಯ ಸ್ವಾತಂತ್ರ್ಯೋತ್ಸವವನ್ನು ಆಚರಿಸುವಾಗ ಸ್ವಾತಂತ್ರ್ಯ ಸಂಪಾದನೆಗೆ ಸಹಾಯ ಮಾಡಿದವರನ್ನು ಸ್ಮರಿಸೋಣ.

ದುಃಖದಿಂದ ತುಂಬಿದ ಹೃದಯದೊಂದಿಗೆ ನಾನು ನನ್ನ ಮಗನಿಗೆ ಮತ್ತು ತಮ್ಮ ತಂದೆ ತಾಯಿಗಳ ಮೌಢ್ಯದಿಂದ ಮತ್ತು ಆ ಕಾಲದ ವಿಶಿಷ್ಟ ವಾತಾವರಣದ ಮೂಲಕ ಕಷ್ಟಪಟ್ಟ ಎಲ್ಲರಿಗೆ ನನ್ನ ಅಭಿವಂದನೆಗಳನ್ನು ಸಲ್ಲಿಸುತ್ತೇನೆ. ಇನ್ನು ಮುಂದೂ ಕಠಿಣ ದಿನಗಳು ಇರಬಹುದು. ನಾವು ನಮ್ಮ ತಪ್ಪುಗಳನ್ನು ಮತ್ತೆ ಮಾಡಿ ನಮ್ಮ ಮಕ್ಕಳ ಮೇಲೆ ಅನ್ಯಾಯವನ್ನು ಹೇರುವುದು ಬೇಡ. *

"ಇಲಸ್ಟ್ರೇಟೆಡ್ ವೀಕ್ಲಿ" ಯಿಂದ



## ಗಜಗರ್ಭ

ಸಾರ್ವಜನಿಕ ಆರೋಗ್ಯ ಇಲಾಖೆಯಲ್ಲಿ ಕೆಲಸ ಮಾಡುವ ಒಬ್ಬ ಸೀಗೆ ಹೆರಿಗೆಗಾಗಿ ರಜೆ ಬೇಕಿತ್ತು. ಅವಳು ರಜೆಗೆ ಮೇಲಿನ ಅಧಿಕಾರಿಗಳಿಗೆ ಬರೆದುಕೊಂಡಳು. ಮಗುವಿಗೆ ಸರಿಯಾಗಿ ಹತ್ತು ತಿಂಗಳು ತುಂಬಿದಾಗ ರಜೆ ಮಂಜೂರಾಗಿ ಬಂತು. ಅದುಕೂಡಾ ಮುಖ್ಯ ಮಂತ್ರಿಗಳು ಆ ಖಾತೆಯ ಫೈಲನ್ನು ಪರಿಶೀಲಿಸಿದರೆಂದು. ಒಂದು ದಿನ ಮುಖ್ಯ ಮಂತ್ರಿಗಳು ಸಾರ್ವಜನಿಕ ಆರೋಗ್ಯ ಖಾತೆಯ ಫೈಲನ್ನು ತಿರುವುತ್ತಿರುವಾಗ್ಗೆ ಅವರಿಗೆ ಅದರಲ್ಲಿ ಒಂದು ವರ್ಷದ ಹಿಂದೆ ರಜೆಗಾಗಿ ಬರೆದುಕೊಂಡ ಅರ್ಜಿ ದೊರಕಿತ್ತು!

ಇದು ತಿರ್ವಾಂಕೂರಿನಲ್ಲಿ ಶ್ರೀ ಗೋವಿಂದ ಮೆನನ್ನರು ಮುಖ್ಯಮಂತ್ರಿಗಳಾಗಿದ್ದಾಗ ನಡೆದ ಸತ್ಯ ಘಟನೆ.

ಸಿ. ಎಚ್. ಕೃಷ್ಣಶಾಸ್ತ್ರಿ

ನವನಾಗರಿಕತೆಯ ಈ ಆಧಾರಸ್ತಂಭದ ಬಗ್ಗೆ ಅರಿತುಕೊಳ್ಳಬೇಕಾದ್ದು

# ಕಾಂಕ್ರೀಟನ್ನು ಹೇಗೆ ಬಳಗಿಸಬೇಕು?

ಎಚ್. ವಿ. ಸುಬ್ಬರಾವ್

ಈಗ್ಗೆ ಕೆಲ ದಿನಗಳ ಹಿಂದೆ ನನ್ನ ಹಳ್ಳಿಯ ಗೆಳೆಯರೊಬ್ಬರು ತಾವು ಹಳ್ಳಿಯಲ್ಲಿ ಕಟ್ಟಿಸಿದ ಮನೆಯ ಗೃಹಪ್ರವೇಶ ಸಮಾರಂಭಕ್ಕಾಗಿ ನನ್ನನ್ನು ಕರೆದಿದ್ದರು. ದೊಡ್ಡ ದೇಗುಲದಂತಹ ಮನೆ, ಅಲ್ಲಲ್ಲೇ ದಪ್ಪನಾದ ಆಧಾರ ಕಂಬಗಳು. ದೊಡ್ಡ ಚೌಕಟ್ಟನ್ನು ಪಡೆದರೂ ತಲೆಗೆ ತಾಗುವಷ್ಟು ಕಿರಿದಾದ ಬಾಗಿಲು, ಹೆಚ್ಚು ಬೆಳಕು ಬರದಂತಹ ಒಳ ಅಂಗಣಗಳು— ಈ ಲಕ್ಷಣಗಳನ್ನು ಪಡೆದ ಮನೆಯ ವೈಭವವನ್ನು ಒಳ್ಳೆ ಹೆಮ್ಮೆಯಿಂದ ಅವರು ಹೊಗಳುತ್ತಿದ್ದರು. ಉಳಿದ ಗೆಳೆಯರೆಲ್ಲಾ ಅವರನ್ನು ಸಮರ್ಥಿಸುತ್ತಿದ್ದರು. ಮನಸ್ಸು ತಡೆಯಲಾರದೇ ನಾನು ಕೇಳಿದೆ: "ಇದಕ್ಕಿಂತ ಸ್ವಲ್ಪ ಕಡಿಮೆ ಖರ್ಚಿನಲ್ಲೂ ಒಂದು ಕಾಂಕ್ರೀಟಿನ ಮನೆಯನ್ನು ಕಟ್ಟಬಹುದಾಗಿತ್ತಲ್ಲ, ಯಜಮಾನ್ರೆ! ಆಗ ನಿಮಗೆ ಒಳ್ಳೇ ಸೊಗಸಾದ, ಕಂಬಗಳಿಲ್ಲದ, ಗಾಳಿ ಬೆಳಕಾಡುವ ಮನೆ ದೊರೆಯುತ್ತಿತ್ತು!"

ಆ ಪ್ರಶ್ನೆಯಿಂದ ಅವರ ಆತ್ಮಗೌರವಕ್ಕೆ ಸ್ವಲ್ಪ ಧಕ್ಕೆಯಾದಂತಾಗಿ ಅವರು "ನಾವೂ ನಿಮ್ಮ ಕಾಂಕ್ರೀಟಿನ ಮನೆ ನೋಡಿದ್ದೇವೆ. ಅದು ಏನಿದ್ದರೂ ಮಳೆ ಕಡಿಮೆಯಾಗಿರುವ ಬಯಲ ಸೀಮೆಗೇ ಸರಿ ಹೊರತು ವರ್ಷಕ್ಕೆ ೧೫೦ ಇಂಚು ಮಳೆಯಾಗುವ ಇಲ್ಲಿಗೆ ಸರಿಯಾಗುವುದಿಲ್ಲ. ಎರಡು ವರ್ಷಗಳ ಹಿಂದೆ ಕಟ್ಟಿದ ಒಂದು ಬಂಗಲೆ ನೋಡಿದ್ದೀರೇನು ನೀವು? ಮಳೆಗಾಲದಲ್ಲಿ ಪರಸಿ ಎಲ್ಲ ಜರಡಿಯಾಗಿದೆ. ಬರಿ ಹಣ ವ್ಯಯ ಅಷ್ಟೇ" ಅಂದರು.

ಮೇಲಿನ ಅಭಿಪ್ರಾಯದ ಅನೇಕ ಜನ ನಮ್ಮಲ್ಲಿ ಇದ್ದಾರೆ. ಅವರ ತಿಳಿವಳಿಕೆ ಪೂರ್ಣ ಅಸತ್ಯವೂ ಅಲ್ಲ. ಅನೇಕ ಮನೆಗಳು ಮೇಲೆ ಹೇಳಿದಂತೆ ಸೋರುವುದು, ಅನೇಕ ಸೇತುವೆಗಳು ಒಡೆಯುವುದು, ಒಡ್ಡುಗಳು ಕೀಳುವುದು ಇವೆಲ್ಲ ಅವರ ವಾದವನ್ನು ಪುಷ್ಟಿಗೊಳಿಸುತ್ತವೆ. ಆದರೆ ಇಂದಿನ ನಾಗರಿಕತೆಯ ಮೂಲ ಆಧಾರಗಳಲ್ಲಿ ಕಾಂಕ್ರೀಟೂ ಒಂದೆಂಬುದನ್ನು ಮರೆಯಬಾರದು. ದೊಡ್ಡ ಕಟ್ಟಡಗಳು, ನೀರಾವರಿ ಯೋಜನೆಗಳು ರೈಲುಮಾರ್ಗಗಳು, ನೌಕಾಂಗಣಗಳು, ವಿಮಾನ ನಿಲ್ದಾಣಗಳು ಇವುಗಳೆಲ್ಲವೂ ಕಾಂಕ್ರೀಟನ್ನು ಅವಲಂಬಿಸಿವೆ. ಹಾಗಾದರೆ ಅವು ಕೆಲವು ಸಾರಿ ಕೆಟ್ಟು ಭಯಾನಕವಾದ ಅರ್ಥ, ಪ್ರಾಣ, ಧನ ಹಾನಿಯಾಗಲು ಕಾರಣವೇನು ?

ಕಾಂಕ್ರೀಟು ವಾಸ್ತವವಾಗಿ ಒಂದು ರೀತಿಯ ಮಾನವ ನಿರ್ಮಿತ, ಎರಕ ಹೊಯ್ದ ಕಲ್ಲು. ಮರಳು ಮತ್ತು ಕಲ್ಲಿನ ಹರಳು ಇವು ಅಧಿಕವಾಗಿದ್ದು ಜಿಗುಟಾದ ಸಿಮೆಂಟಿನಿಂದ ಆವೃತವಾಗಿರುತ್ತವೆ. ಸಿಮೆಂಟು ಉಳಿದ ಘಟಕಗಳನ್ನು ಬಿಗಿಹಿಡಿದು ಇಡೀ ವಸ್ತುವನ್ನೇ ಒಂದು ಕಲ್ಲಿನಂತೆ ಮಾಡುತ್ತದೆ. ಮೂಲತಃ ಸಿಮೆಂಟನ್ನೇ ಸುಣ್ಣದ ಹರಳು, ಜಿಗುಟು ಮಣ್ಣು ಮತ್ತು ಮರಳು ಇವುಗಳನ್ನು ಯೋಗ್ಯ ಪ್ರಮಾಣದಲ್ಲಿ ಬೆರೆಸಿ ಕಾಯಿಸಿ ಪುಡಿ ಮಾಡಿ ತಯಾರಿಸುತ್ತಾರೆ. ಇದು ಒಣಗಿದ್ದಾಗ ಅತಿ ಸೂಕ್ಷ್ಮವಾದ, ಭಾರವಾದ ಬೂದಿ ಬಣ್ಣದ ಧೂಳು. ನೀರು ಬೆರೆಸಿದಾಗ ಇದು ಒಂದು ನಯವಾದ ಅಂಟು ಆಗುವುದು. ಶಕ್ತಿಯುತವಾದಲ್ಲಿ ಸೂಕ್ಷ್ಮದರ್ಶಕ ಈ ಅಂಟಿನ ಕಣಗಳು ಒಂದಕ್ಕೊಂದು ಸರಪಳಿಯಂತೆ ಬಿಗಿದುಕೊಂಡಿರುವ ಒಂದರಮೇಲೊಂ-

ದು ಬಿದ್ದಿರುವ ಎಲೆ ಅಥವಾ ತಗಡಿನ ಚೂರುಗಳಂತೆ ಕಾಣುತ್ತವೆ. ಮತ್ತು ಈ ತಗಡುಗಳೆಲ್ಲಾ ನೀರಿನ ಮತ್ತು ಗಾಳಿಯ ಕಾಲುವೆಗಳಿಂದ ಮೇಲೆ ಬಂದಂತೆ ಕಾಣುತ್ತವೆ. ಅಂದರೆ ಹೊಸದಾಗಿ ತಯಾರಿಸಿದ ಕಾಂಕ್ರೀಟ್ ಮಿಶ್ರಣದಲ್ಲಿಯೂ ಇವು ಹೀಗೆಯೇ ಪೊಳ್ಳುಗಳನ್ನುಂಟುಮಾಡಿರುತ್ತವೆ. ಮಿಶ್ರಣದಲ್ಲಿನ ನೀರು ತೀವ್ರವಾಗಿ ಆರಿ ಹೋದರೆ ಅದರಲ್ಲಿ ರಾಸಾಯನಿಕ ಕ್ರಿಯೆ ನಡೆಯದೇ ಸಿಮೆಂಟು ಮೊದಲಿನಂತೆ ಧೂಳಿನ ಕಣಗಳಾಗಿಬಿಡುತ್ತದೆ. ಆಗ ಅದು ತನ್ನಲ್ಲಿ ಬರಬೇಕಾದ ಸಂಕೋಚನ ಮತ್ತು ಕಣಗಳ ಆಕರ್ಷಣ ಶಕ್ತಿಯನ್ನು ಪಡೆಯುವುದಿಲ್ಲ. ಆದ್ದರಿಂದ ಕಾಂಕ್ರೀಟಿನ ಮಿಶ್ರಣದ ಪೊಳ್ಳುಗಳು ಮುಚ್ಚಲ್ಪಡುವುದಿಲ್ಲ.

ಸಿಮೆಂಟು ಮತ್ತು ನೀರು ಬೆರೆಸಲ್ಪಟ್ಟ ಕೂಡಲೆ ನೀರಿನ ಪ್ರಾಣವಾಯು, ಹೈಡ್ರೋಜನ್ ಕಣಗಳು ಮತ್ತು ಸಿಮೆಂಟಿನ ಕ್ಯಾಲ್ಸಿಯಂ ಅಲ್ಯೂಮಿನಂಗಳ ಸಿಲಿಕೇಟುಗಳು ಇವುಗಳ ನಡುವೆ ಹೊಂದಾಣಿಕೆಯುಂಟಾಗಿ ಕ್ಯಾಲ್ಸಿಯಂ ಮತ್ತಿತರ ವಸ್ತುಗಳ ಹೈಡ್ರಾಕ್ಸೈಡುಗಳು ಉಂಟಾಗುತ್ತವೆ. ಇವು ಅತಿ ಗಟ್ಟಿಯಾದ ಪರೆಯಾಗಿ ಮೇಲೆ ಹೇಳಿದ ಪೊಳ್ಳುಗಳ ಬದಿಗಳನ್ನು ಮುಚ್ಚುತ್ತವೆ. ಆದ್ದರಿಂದ ಇಡೀ ಕಾಂಕ್ರೀಟ್ ಮಿಶ್ರಣವು ಒಂದೇ ಕಲ್ಲಾಗುತ್ತದೆ. ಈ ಕ್ರಿಯೆಗೆ 'ಹೈಡ್ರೇಶನ್' ಎನ್ನುತ್ತಾರೆ. ಈ ಕ್ರಿಯೆ ನಡೆಯುವಾಗ ಅಧಿಕ ಪ್ರಮಾಣದ ನೀರು ಬೇಕಾಗುತ್ತದೆ. ಮಿಶ್ರಣ ಮಾಡುವಾಗ ಹಾಕಿದ ನೀರೆಲ್ಲಾ ಈ ಕ್ರಿಯೆಗೆ ಉಪಯೋಗವಾಗುವುದಾದರೆ ಮಾತ್ರ ಕಾಂಕ್ರಿಟೀಗೆ ಶಕ್ತಿ ದೊರೆತು ಬೇಕಾದ ಕಾರ್ಯಗಳಿಗೆ ಉಪಯೋಗಿಸಬಹುದು. ಸಾಮಾನ್ಯವಾಗಿ ಮಿಶ್ರಣದಲ್ಲಿನ ನೀರು ಸಾಕಷ್ಟು ಪ್ರಮಾಣದಲ್ಲಿ ಸೂರ್ಯನ ಶಾಖದಿಂದು ಉಗಿಯಾಗುವುದರಿಂದ, ಮತ್ತು ಕೆಳಗಿನ ವಸ್ತುಗಳು ಹೀರಿಕೊಳ್ಳುವುದರಿಂದ 'ಹೈಡ್ರೇಶನ್' ಕ್ರಿಯೆ ಪೂರ್ಣ ನಡೆಯದೆ ಕಲ್ಪನಾತೀತ ಹಾನಿಯಾಗುತ್ತದೆ. ಇದರ ಬಗ್ಗೆ ನಾವು ಜಾಗರೂಕತೆ ವಹಿಸದೇ ಹೋದರೆ ಅಕಸ್ಮಾತ್ ಸಂಭವಿಸುವ ಮಳೆಯೋ, ಇಬ್ಬನಿಯೋ ನಮಗೆ ಸಹಾಯ ಮಾಡಬೇಕಷ್ಟೆ!

ಈ ರೀತಿ ಪ್ರಕೃತಿಯನ್ನವಲಂಬಿಸಿರುವುದರ ಬದಲು ಪೂರ್ವ ಯೋಜನೆಯಿಂದ ಕಾಂಕ್ರೀಟಿಗೆ ನಾವೇ 'ನೀರು ಕುಡಿಸಿ' ಜಯಶಾಲಿಗಳಾಗಬಹುದು. ಇದಕ್ಕೆ ಅನೇಕ ವಿಧಾನಗಳನ್ನು ವಿಜ್ಞಾನಿಗಳು ವಿಧಿಸಿದ್ದಾರೆ. ಮುಖ್ಯ ಅಂಶವೆಂದರೆ ಕಾಂಕ್ರೀಟನ್ನು ಹಾಕುವ ತಳವು ನೀರನ್ನು ಹೀರಿಕೊಳ್ಳುವ ಒಣ ನೆಲ ಅಥವಾ ಕಟ್ಟಿಗೆಯಾಗಿದ್ದರೆ ಮೇಲಿನಿಂದ ಎಷ್ಟು ನೀರು ಒದಗಿಸಿದರೂ ನಿರರ್ಥಕವೇ - ರಂಧ್ರವಿರುವ ಕೊಡದಲ್ಲಿ ನೀರು ಇಟ್ಟಂತೆ! ಆದ್ದರಿಂದ ಕಟ್ಟಿಗೆಗೆ ಎಣ್ಣೆ ಬಳಿಯುವುದರಿಂದ ಅಥವಾ ಇತರ ಕ್ರಮುಗಳಿಂದ ಅವು ನೀರು ಹೀರದಂತೆ ಮಾಡಬೇಕು. ನೆಲವನ್ನು ನೀರಿನಿಂದ ಸಂತೃಪ್ತ ಮಾಡಿ ಕೂಡಲೇ ಮಿಶ್ರಣ ಸುರುವಬೇಕು. ನೀರನ್ನು ತೀವ್ರ ಹೀರಿಕೊಳ್ಳುವ ಖಡಿ (ಕರಿಗಲ್ಲಿನ ಚೂರುಗಳು), ಒಣ ಮರಳು, ಕಟ್ಟಿಗೆಗಳಾದರೆ ಅವುಗಳನ್ನು ನೀರು ತಡೆ ಹಿಡಿಯುವ ಪಾಲಿಥಿಲಿನ್, ವಾಟರ್‌ಪ್ರೂಫ್ ಕಾಗದ, ಮೊದಲಾದವುಗಳಿಂದ ಮುಚ್ಚಬೇಕು. ಇದರ ನಂತರವೇ ನೀರು ಮೇಲಿಂದ ಉಗಿಯಾಗುವುದನ್ನು ತಪ್ಪಿಸಲು ಪ್ರಯತ್ನಿಸಬೇಕು.

ಮಿಶ್ರಣವು ಗಟ್ಟಿಯಾಗುವಾಗ ನೀರು ಪೂರೈಸುವ ಬಗೆಗೆ ಅನೇಕ ವಿಧಾನಗಳಿವೆ. ಬಹಳ ದಿನದಿಂದ ಬಂದ ಒಂದು ರೂಢಿ ಎಂದರೆ, ಅದರ ಮೇಲೆ ಆಗಾಗ್ಗೆ ನೀರು ಸುರಿಯುವುದು. ಆದರೆ ಅಲಕ್ಷ್ಯದಿಂದ ಮಿಶ್ರಣವು ಒಮ್ಮೆ ಒಣಗಿಬಿಟ್ಟರೆ ನಂತರ ಎಷ್ಟು ನೀರು ಸುರಿದರೂ ನಿರುಪಯೋಗವೇ! ಇದರ ಸಲುವಾಗಿ ಕೆಲವರು ನೀರು ನಿಲ್ಲಿಸುವ ವಿಧಾನ ಉಪಯೋಗಿಸುತ್ತಾರೆ. ಕಾಂಕ್ರೀಟಿನ ಸುತ್ತಲೂ ಮಣ್ಣು ಕಟ್ಟಿ ನೀರು ನಿಲ್ಲಿಸುವರು. ಕಟ್ಟೆ ಒಡೆದು ನೀರು ಹೊರಗೆ ಹರಿಯದಂತೆ ಜಾಗರೂಕತೆ ವಹಿಸಿದರೆ ಈ ಕ್ರಮ

# ಬಾಯಿಯ ದುರ್ಗಂಧವನ್ನು ಕಾಲ್ಗೇಟಿನಿಂದ ತೊಲಗಿಸಿರಿ

ಅದರೊಂದಿಗೆ ದಿನವಿಡೀ

# ದಂತಕ್ಷಯವನ್ನು ಇದಿರಿಸಿರಿ !




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲಾ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದಲೂ ಪಡೆಯಿರಿ... ಒಂದು ಡಬ್ಬಿ ಹಲವು ತಿಂಗಳುಗಳವರೆಗೆ ಸಾಕಾಗುವುದು !

ಏಕೆಂದರೆ : ಕಾಲ್ಗೇಟ್ ಡೆಂಟಲ್ ಕ್ರೀಮ್‌ನೊಂದಿಗೆ ಒಮ್ಮೆ ಹಲ್ಲುಜ್ಜುವುದರಿಂದ ಬಾಯಿಯಲ್ಲಿ ದುರ್ಗಂಧವನ್ನುಂಟುಮಾಡುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85ರಷ್ಟು ಕ್ರಿಮಿಗಳು ನಾಶವಾಗುತ್ತವೆ.

ಊಟವಾದೊಡನೆ ಕಾಲ್ಗೇಟ್‌ನಿಂದ ಹಲ್ಲುಜ್ಜುವುದರಿಂದ ದಂತಮಂಜನಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟಲು ಸಾಧ್ಯವಾಗುತ್ತದೆ. ಇದಲ್ಲದೆ ಕಾಲ್ಗೇಟ್‌ನಿಂದ 10ರಲ್ಲಿ 7 ಸಂದರ್ಭಗಳಲ್ಲಿ ಬಾಯಿಯ ದುರ್ಗಂಧವು ಕೂಡಲೇ ನಿವಾರಿಸಲ್ಪಡುತ್ತದೆ. ಈ ಎರಡು ಪ್ರಮಾಣಗಳನ್ನು ಕಾಲ್ಗೇಟ್ ವೈಜ್ಞಾನಿಕ ಪರೀಕ್ಷೆಗಳ ಮುಖೇನ ಸಿದ್ಧಗೊಳಿಸಿರುತ್ತದೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ!

ಊಟವಾದ ಮೇಲೆ ಬರೀ ಬಾಯಿ ಮುಕ್ಕಳಿಸುವುದರಿಂದ ಪ್ರಯೋಜನವಾಗಲಾರದು. ಪ್ರತಿ ಊಟದ ಮೇಲೆ ತಪ್ಪದೆ ನಿಮ್ಮ ಹಲ್ಲುಗಳನ್ನು ಕಾಲ್ಗೇಟಿನಿಂದ ಉಜ್ಜಿರಿ. ಇದರ ಪ್ರಬಲವಾದ, ಸಂದು ಸಂದುಗಳಿಗೆ ಒಳನುಗ್ಗುವ ನೊರೆಯು ಅಗೋಚರವಾದ ಹಲ್ಲುಗಳ ನಡುವಿನ ಸಂದುಗಳಿಗೆ ಹೊಕ್ಕು ನಿಮ್ಮ ಬಾಯಿಯ ದುರ್ಗಂಧಕ್ಕೂ, ಹಲ್ಲುಗಳ ಕ್ಷಯಿಸುವಿಕೆಗೂ ಕಾರಣವಾದ ■ ಕೊಳೆಯುತ್ತಿರುವ ಆಹಾರ ಕಣಗಳನ್ನು ನಿವಾರಿಸಿ ಸ್ವಚ್ಛಗೊಳಿಸುವುದು.




ಮಕ್ಕಳಿಗೆ ಕಾಲ್ಗೇಟಿನಿಂದ ಹಲ್ಲುಜ್ಜುವುದೆಂದರೆ ತುಂಬಾ ಪ್ರೀತಿ, ದೀರ್ಘಕಾಲ ಉಳಿಯುವ ಅದರ ಸ್ವಚ್ಛ ಪೆಪ್ಪರ್‌ಮಿಂಟ್ ಸ್ವಾದವು ಇದರಲ್ಲಿ ಕಾಣಿಸುತ್ತದೆ.

ಕಾಲ್ಗೇಟಿನಿಂದ ತಪ್ಪದೆ ಹಲ್ಲುಜ್ಜುವುದರಿಂದ

- ✔ ಬಾಯಿಯ ದುರ್ಗಂಧವು ನಿವಾರಿಸಲ್ಪಡುತ್ತದೆ
- ✔ ದಂತಕ್ಷಯವನ್ನು ವಿರೋಧಿಸಲಾಗುವುದು
- ✔ ಹಲ್ಲುಗಳು ಪರಿಶುಭ್ರವಾಗಿ ಉಳಿಯುವವು




ಬಾಯಿಯ ದುರ್ಗಂಧವನ್ನು ನಿವಾರಿಸಲು ಮತ್ತು ಹಲ್ಲುಗಳು ಶುಭ್ರವಾಗಿರಲು... ಹೆಚ್ಚಿನ ಜನರು ಪ್ರಪಂಚದ ಇನ್ನಿತರ ಡೆಂಟಲ್ ಕ್ರೀಮ್‌ಗಳಿಗಿಂತ ಅಧಿಕವಾಗಿ ಕಾಲ್ಗೇಟನ್ನೇ ಕೊಂಡುಕೊಳ್ಳುತ್ತಾರೆ

ಒಳ್ಳೆಯದು. ಆದರೆ ಇದು ಮನೆಯ ಮೇಲ್ಭಾಗದಲ್ಲಿ ಅಥವಾ ಭೂಮಿಗೆ ಸಮಾಂತರವಿರುವ ಮೇಲ್ಮೈಗಳಿಗೆ ಸಾಧ್ಯವೇ ಹೊರತು ಭೂಲಂಬವಾಗಿರುವ ಗೋಡೆ, ಕಂಬ ಇವುಗಳಿಗೆ ಸಾಧ್ಯವಿಲ್ಲ. ಇನ್ನು ಕೆಲವು ಸಾರಿ ಕಾಂಕ್ರೀಟಿನ ಭಾಗವನ್ನು ಒದ್ದೆ ಹುಲ್ಲು, ಗೋಣಿಚೀಲ ಮೊದಲಾದವುಗಳಿಂದ ಮುಚ್ಚಿ ಅವರ ಮೇಲೆ ನೀರನ್ನು ಆಗಿಂದಾಗ್ಗೆ ಚುಮುಕಿಸುತ್ತಾರೆ. ಈ ಕ್ರಮ ಉಪಯೋಗಿಸುವಾಗ ಗಾಳಿಯಿಂದ ಮೇಲು ಹೊದಿಕೆಗಳು ಹಾರಿಹೋಗಬಹುದು. ಇಲ್ಲವೇ ಕಾಂಕ್ರೀಟಿನ ಭಾಗಕ್ಕೆ ಇವು ತಮ್ಮ ಬಣ್ಣ ಬಿಡಬಹುದು ಎಂಬ ಅಂಶ ನೆನಪಿನಲ್ಲಿಡಬೇಕು.

ಕೆಳಗೆ ಇರುವ ನೀರು ಹೀರಬಹುದಾದ ಭಾಗವನ್ನು ನೀರು ತಡೆಯುವ ಕಾಗದಗಳಿಂದ ಹೇಗೆ ಮುಚ್ಚಬಹುದೋ ಕಾಂಕ್ರೀಟಿನ ಮೇಲ್ಭಾಗವನ್ನೂ ಅದರಂತೆ ಮುಚ್ಚಿ ಬಾಷ್ಪೀಭವನನ್ನು ತಡೆಯಬಹುದು. ಆದರೆ ಈ ಕಾಗದಗಳು ಕಾಂಕ್ರೀಟಿನ ಅಂಚನ್ನು ಬಿಗಿಹಿಡಿದಿರಬೇಕಲ್ಲದೆ ಅವುಗಳ ನಡುವೆ ತೂತಾಗಬಾರದು! ಇವೆಲ್ಲಕ್ಕಿಂತ ಈಚೆಗೆ ಉಪಯೋಗಿಸಲ್ಪಡುತ್ತಿರುವುವು ಒಂದು ಬಗೆಯ ದ್ರವಗಳು. ಇವು ಉಪಯುಕ್ತವಾಗಿರುವುವಲ್ಲದೇ ಸಾಧಾರಣ ವೆಚ್ಚದಲ್ಲಿ ಸಿಕ್ಕುವಂತಹವು. ಚದುರ ಅಡಿಗೆ ಸುಮಾರು ೫ ನ.ಪೈ. ಖರ್ಚು ಬೀಳುವ ಈ ದ್ರವಗಳನ್ನು ಸ್ಪ್ರೇ ಮಾಡಿ, ಅಥವಾ ಬಳಿದು (ಬಣ್ಣದಂತೆ) ಒಳಗಿನ ನೀರಿನ ಬಾಷ್ಪೀಭವನವನ್ನು ತಡೆಯಬಹುದು. ಇದರಲ್ಲೇ ವಿಶಿಷ್ಟ ಪ್ರಕಾರದವುಗಳನ್ನು ಕೆಲ ದಿನಗಳ ನಂತರ ಮಾಳಿಗೆ ನೆಲಗಳಿಗೂ ಉಪಯೋಗಿಸಬಹುದು.

ನಮ್ಮ ದೇಶದಲ್ಲಿ ಬಾಷ್ಪೀಭವನದ ಅಂಜಿಕೆ ಇರುವಂತೆಯೇ ಇನ್ನಿತರ ದೇಶಗಳಲ್ಲಿ ಅವು ಹೆಪ್ಪುಗಟ್ಟುವ ಅಂಜಿಕೆ ಇದೆ. ಅವರು ಕಪ್ಪು ಹೊದಿಕೆಗಳ ಸಹಾಯದಿಂದ ಅಥವಾ ಕ್ಯಾಲ್ಸಿಯಂ ಕ್ಲೋರೈಡಿನ ಸಹಾಯದಿಂದ ಈ ಆತಂಕವನ್ನು ದೂರ ಮಾಡುತ್ತಾರೆ. ಕಾಂಕ್ರೀಟಿನಲ್ಲಿ ನೀರಿನ ಉಳಿತಾಯಕ್ಕಾಗಿ ಉಪಯೋಗಿಸುವ ದ್ರವಗಳು ಅನೇಕ ಪ್ರಕಾರವಿವೆ. ಕೆಲವು ಮೇಣದ ಅಂಶವನ್ನು ಹೊಂದಿದ್ದು ಉಪಯೋಗದ ಮೊದಲು ಅದನ್ನು ತೆಗೆಯಬೇಕಾಗುತ್ತವೆ. ಕೆಲವು ಕೆಂಪು, ಹಸಿರು ಬಣ್ಣದವಿದ್ದು ಕೆಲ ದಿನಗಳ ನಂತರ ವರ್ಣರಹಿತವಾಗುತ್ತವೆ. ಇನ್ನು ಕೆಲವು ಶಾಶ್ವತ ಬಿಳಿ ಬಣ್ಣ ಪಡೆದಿರುತ್ತವೆ. ಇದರಂತೆಯೇ ಕಾರ್ಖಾನೆ, ಸೇತುವೆ ಮೊದಲಾದ ಹೆಚ್ಚಿನ ಭಾರ ಬೀಳುವ ಪ್ರದೇಶಗಳಿಗಾಗಿ ವಿಶೇಷ ರೀತಿಯಿಂದ ತಯಾರಿಸಲ್ಪಟ್ಟ ದ್ರವಗಳು ಸಿಕ್ಕುತ್ತವೆ. ಇವು ಅತಿ ತೀವ್ರವಾಗಿ ಕಾಂಕ್ರೀಟಿನ ಮೇಲ್ಭಾಗದಲ್ಲಿ ಗಟ್ಟಿಯಾದ ಪದರೆಯನ್ನು ಉಂಟುಮಾಡುತ್ತವೆ.

ಇತ್ತೀಚೆಗೆ ಉಪಯೋಗಿಸಲ್ಪಡುತ್ತಿರುವ ಆಂತರಿಕ ದ್ರವವು ಅತ್ಯಂತ ಉಪಯುಕ್ತವೆಂದು ಸಿದ್ಧವಾಗಿದೆ. ಉಳಿದವುಗಳಂತೆ ಇದನ್ನು ಮೇಲೆ ಬಳಿಯದೇ ಮಿಶ್ರಣಕ್ಕೆ ಕೂಡಿಸಿಬಿಡುತ್ತಾರೆ. ಆದ್ದರಿಂದ ಮೇಲ್ಭಾಗ ಮಾತ್ರವಲ್ಲದೇ ಇಡೀ ಮೈಯ್ಯಲ್ಲೂ ತೇವ ಉಳಿದು ಅತ್ಯುತ್ತಮ ಕಲ್ಲು ಆಗುತ್ತದೆ. ಇದರಿಂದ ಮಿಶ್ರಣಕ್ಕೆ ಬೇಕಾದ ನೀರಿನ ಅಂಶವೂ ಕಡಿಮೆಯಾಗಿ ಉತ್ತಮವಾದ ಎರಕ ಮಾಡಲು ಅನುಕೂಲ. ಸಾಧಾರಣ ದ್ರವಕ್ಕಿಂತ ಇದು ನಾಲ್ಕುಪಟ್ಟು ವೆಚ್ಚದ್ದಾದರೂ ಅದರ ಬೆಲೆ ಯೋಗ್ಯವಾಗಿದೆ.

"ಕಾಂಕ್ರೀಟಿನಲ್ಲಿ ನೀರು ಉಳಿಯಲು ನಾವು ಪ್ರಯತ್ನಿಸಬೇಕೆ?" ಎಂಬ ಪ್ರಶ್ನೆ ಇಲ್ಲವೇ ಇಲ್ಲ. "ಹೇಗೆ ಉಳಿಸಬೇಕು?" ಎಂಬುದೇ ಪ್ರಶ್ನೆ! ನಾವು ಕಟ್ಟುವ ಕಟ್ಟಡದ ಭದ್ರತೆ, ಖರ್ಚು ಮಾಡಲು ನಿರ್ಧರಿಸುವ ಹಣ ಇದರ ಮೇಲೆ ನಾವು ಅನುಸರಿಸುವ ರೀತಿ ತೀರ್ಮಾನಿಸಬೇಕು. ಲಕ್ಷಾಂತರ ರೂಪಾಯಿಗಳನ್ನು ಬಂಗಲೆಗಾಗಿ ಖರ್ಚು ಮಾಡುವಾಗ ಅದರ ಭದ್ರತೆಯ ಸಲುವಾಗಿ ಸಾವಿರಾರು ರೂಪಾಯಿಗಳನ್ನು ವೆಚ್ಚ ಮಾಡಲು ಹಿಂದೆಗೆಯಬಾರದು! *



ಭಾರತದ ಪ್ರಥಮ
ಶ್ರೇಣಿಯ ಚಿತ್ರ—
ಶಿಲ್ಪಕಲಾವಿದರೊಬ್ಬರ
ವೈಯಕ್ತಿಕ ಜೀವನ—
ಅವರ ಪತ್ನಿ ಕಂಡಂತೆ

# ಕಲಾವಿದನ ಹೆಂಡತಿ

ಶ್ರೀಮತಿ ದೇವೀಪ್ರಸಾದ
ರಾಯ ಚೌಧುರಿ

ಆ ದಿನ ನಿರುತ್ಸಾಹಕರವಾಗಿತ್ತು. ಮುಗಿಲು ಮೋಡಗಳಿಂದ ತುಂಬಿತ್ತು. ಮೋಡಗಳು ನಮ್ಮ ತಲೆಯಮೇಲೆ ದಪ್ಪನ್ನ ಛತ್ರಿಯಂತೆ ಹಬ್ಬಿಕೊಂಡಿದ್ದವು. ವಾರಾಂತ್ಯದ ರಜೆಯನ್ನು ನಮ್ಮವರೊಂದಿಗೆ ಕಳೆಯಲೆಂದು ಮನೆಗೆ ಬಂದೆ. ಯಾರೋ ಅತಿಥಿಗಳಿಗಾಗಿ ಎಂದು ಅಮ್ಮ ತಿಂಡಿಗಳನ್ನು ಮಾಡುವುದರಲ್ಲಿ ತೊಡಗಿದ್ದಳು. ಅವಳಿಗೆ ಒಂದಿಷ್ಟು ಸಹಾಯ ಮಾಡಿದೆ. ಮಧ್ಯಾಹ್ನದ ಹೊತ್ತಿಗೆ ಮಳೆ ಮುಸಲಧಾರೆಯಾಗಿ ಬೀಳಹತ್ತಿತು. ಒಂದ್ಹತ್ತು ನಿಮಿಷಗಳಲ್ಲಿ ನಮ್ಮ ಮನೆಯ ಮುಂದಿನ ರಸ್ತೆ ಒಂದು ಹಳ್ಳವಾಗಿ ಬಿಟ್ಟಿತು. ಮೊಣಕಾಲವರೆಗೆ ಧೋತರವನ್ನು ಎತ್ತಿ ಒಂದು ಕೈಯಲ್ಲಿ ಹಿಡಿದುಕೊಂಡು, ಇನ್ನೊಂದು ಕೈಯಲ್ಲಿ ಛತ್ರಿಯನ್ನು ಹಿಡಿದುಕೊಂಡು ಜನ ಕಷ್ಟದಿಂದ ಆ ನೀರಿನಲ್ಲಿ ನಡೆದು ಹೋಗುವ ದೃಶ್ಯ ಕಣ್ಣಿಗೊಂದು ಹಬ್ಬವೇ ಆಗಿತ್ತು. ಅಂಥ ಅಗತ್ಯವಿದ್ದ ಹೊರತು ಯಾರೂ ಈ ಕೆಟ್ಟ ಹವೆಯಲ್ಲಿ ಮನೆಯಿಂದ ಹೊರಗೆ ಬೀಳುವ ಸಾಹಸ ಮಾಡುವಂತಿರಲಿಲ್ಲ. ಅತಿಥಿಗಳು ಇನ್ನೇನು ಮಣ್ಣು ಬರುತ್ತಾರೆ ಎಂದುಕೊಂಡ ನಾವು ತಯಾರಿಸಿದ್ದ ಮಿಠಾಯಿ ತಿನ್ನಲು ಆತುರರಾಗಿದ್ದೆವು. ಆದರೆ ಅತಿಥಿಗಳು ಬರಬೇಕಾದ

“ಮಾಡರ್ನ್ ರಿವ್ಯೂ” ನಿಂದ

ಸಮಯ ಮೀರಿ ಹೋಗುವವರೆಗೂ ಕಾಯದೆ ವಿಧಿಯಿರಲಿಲ್ಲ. ಆಶ್ಚರ್ಯವೆಂದರೆ ಸರಿಯಾಗಿ ೩ ಗಂಟೆಗೆ ನಮ್ಮ ಮನೆಯ ಮುಂದೆ ನೀರನ್ನು ಅತ್ತಿತ್ತ ಹಾರಿಸುತ್ತ ಒಂದು ಟ್ಯಾಕ್ಸಿ ಬಂದು ನಿಂತಿತು. ಆಗ ಮಳೆ ನಿಂತಿತ್ತಾದರೂ ಕೂಡಿದ್ದ ನೀರು ಇಳಿದಿರಲಿಲ್ಲ. ಪಾದರಕ್ಷೆಗಳು ತೋಯದಿರಲೆಂದು ಅವನ್ನು ಕೈಲಿ ಹಿಡಿದುಕೊಂಡು ಮೂವರು ಗೃಹಸ್ಥರು ಟ್ಯಾಕ್ಸಿಯಿಂದ ಕೆಳಗಿಳಿದರು. ಹವೆ ಇಷ್ಟು ಘೋರವಾಗಿದ್ದರೂ ಅವರು ಪ್ರಸನ್ನಚಿತ್ತರಾಗಿರುವಂತೆ ಕಂಡಿತು. ನಮ್ಮನ್ನವರು ಮುಗುಳ್ನಗೆಯಿಂದ ಅಭಿನಂದಿಸಿದರು. "ನೀವು ನಮ್ಮ ನಿರೀಕ್ಷೆಯಲ್ಲಿರುತ್ತೀರೆಂದು ಗೊತ್ತಿತ್ತು ನಮಗೆ. ನಿಮ್ಮನ್ನು ನಿರಾಶೆಗೊಳಿಸಬಾರದೆಂದು ಬಂದೇಬಿಟ್ಟೆವು" ಎಂದು ಅವರಲ್ಲೊಬ್ಬರು ಹೇಳಿದರು.

ಅವರೆಲ್ಲರೂ ನನಗೆ ಹೊಸಬರಾದ್ದರಿಂದ ನಾನವರನ್ನು ಸೂಕ್ಷ್ಮವಾಗಿ ನೋಡತೊಡಗಿದೆ. ಅವರಲ್ಲಿಬ್ಬರು ಕಲಾವಿದರು ಎಂದು ನನಗೆ ಹೇಳಿದರು. ಒಬ್ಬ ಹೌದು ಎಂದು ನನಗನಿಸಿದರೂ ಇನ್ನೊಬ್ಬನ ಬಗ್ಗೆ ಸಂದೇಹವೇ ಉಂಟಾಯಿತು. ತೊಟ್ಟಿದ್ದ ಅಚ್ಚುಕಟ್ಟಾದ ಉಡುಪೊಂದನ್ನು ಬಿಟ್ಟರೆ ಕಲಾವಿದನ ಸ್ವರೂಪಕ್ಕೂ ಅವನಿಗೂ ಅಜಗಜಾಂತರವಿದ್ದಂತೆ ಕಂಡಿತು. ಸಾಮಾನ್ಯ ಭಾರತೀಯನಿಗಿಂತಲೂ ಧಷ್ಟಪುಷ್ಟವಾದ ಅವನ ಶರೀರ ಕಲಾವಿದನ ಶರೀರಕ್ಕಿಂತಲೂ ಪೈಲವಾನನ ಶರೀರವನ್ನೇ ಹೆಚ್ಚಾಗಿ ಪ್ರತಿನಿಧಿಸುತ್ತಿತ್ತು. ಆತ ಪೈಲವಾನನೊಬ್ಬನ ಬಳಿ ಕ್ರಮಬದ್ಧ ರೀತಿಯಲ್ಲಿ ಕುಸ್ತಿಯಾಡುವುದನ್ನು ಕಲಿತಿದ್ದ ಎಂದು ನನಗೆ ಹಿಂದಿನಿಂದ ತಿಳಿಯಿತು. ಅವನ ಕೂದಲು ಕಪ್ಪಾಗಿ ರೇಶಿಮೆಯಂತಿತ್ತು. ಕಣ್ಣುಗಳು ಚಿಕ್ಕವಾದರೂ ತೀಕ್ಷ್ಣವಾಗಿದ್ದವು. ನಿಮ್ಮನ್ನಾತ ನೋಡಿದಾಗ ಅವು ನಿಮ್ಮ ಅಂತರಂಗವನ್ನು ಹೊಕ್ಕು ಅದರ ರಹಸ್ಯವನ್ನೆಲ್ಲ ಓದಿಕೊಳ್ಳುತ್ತವೆ ಎಂದು ಅನಿಸುತ್ತಿತ್ತು. ಆದರೆ ಅವನ ಈ ಕಠಿಣ ಚರ್ಯೆಗೆ ಪರಿಹಾರವೋ ಎಂಬಂತೆ ಅವನ ಮುಖದಲ್ಲಿ ಮಿನುಗುತ್ತಿದ್ದ ಮಂದಹಾಸ ನಿಮ್ಮನ್ನು ರಮಿಸುತ್ತಿತ್ತು. ಈತನೆ ಸುಪ್ರಸಿದ್ಧ ಚಿತ್ರಕಾರ ಮತ್ತು ಶಿಲ್ಪಿ ದೇವೀಪ್ರಸಾದ ರಾಯ್ ಚೌಧರಿ ಎಂದು ನನಗೆ ಹೇಳಿದರು.

ನನಗೆ ಕಲೆಯಲ್ಲಿ ಪ್ರೀತಿಯಿತ್ತಾದರೂ ಕಲಾವಿದರಲ್ಲ ಆಸಕ್ತಿಯಿರಲಿಲ್ಲ. ಕಲಾವಿದನೆಂದರೆ ಅಸ್ಪಷ್ಟವಾದ ಕಲ್ಪನಾಲೋಕದಲ್ಲಿ ವಿಹರಿಸುವ ಬಡಕಲಾದ ಹುಂಬ ವ್ಯಕ್ತಿ ಎಂದು ನನ್ನ ಭಾವನೆ. ಆದರೆ ನನ್ನ ಈ ಭಾವನೆಗೆ ಈ ಮನುಷ್ಯ ಹೊಂದಿಕೆಯಾಗುತ್ತಿರಲಿಲ್ಲ. ಅಂತೇ ಅವನಲ್ಲಿ ನನ್ನ ಕುತೂಹಲ ಕೆರಳಿ ಅವನ ವಿಷಯವನ್ನು ಹೆಚ್ಚಾಗಿ ತಿಳಿದುಕೊಳ್ಳಲು ಅಪೇಕ್ಷಿಸಿದೆ. ಇದೇನೂ ನನಗೆ ಕಠಿಣವಾಗಲಿಲ್ಲ. ಏಕೆಂದರೆ ಈ ಮನುಷ್ಯನಿಗೆ ನಮ್ಮ ಮನೆಯವರಲ್ಲಿ ಏನೋ ಒಂದು ವಿಧವಾದ ಆಕರ್ಷಣೆಯೆನಿಸಿ ಆತ ಸಂಭಾವ್ಯವಾದುದಕ್ಕಿಂತಲೂ ಹೆಚ್ಚು ಸಾರಿ ನಮ್ಮ ಮನೆಗೆ ಬಂದು ಹೋಗತೊಡಗಿದ. ಇದರಲ್ಲೇನೂ ಉದ್ದೇಶವನ್ನು ಕಂಡುಕೊಳ್ಳದ ನಾನು ಅವನೊಂದಿಗೆ ನಿಸ್ಸಂಕೋಚವಾಗಿ ಮಾತನಾಡುತ್ತಿದ್ದೆ. ಇದರಿಂದ ತುಂಬಾ ಪ್ರೋತ್ಸಾಹದೊರೆತಂತಾದ ಆತನಿಗೆ ಒಂದು ದಿನ "ನನ್ನನ್ನು ಮದುವೆಯಾಗುವಿಯಾ ?" ಎಂದು ನನ್ನನ್ನು ಕೇಳುವಷ್ಟು ಧೈರ್ಯ ಬಂದುಬಿಟ್ಟಿತು. ಆತ ಕೇಳಿದ ರೀತಿ ತುಸು ಅನಾಗರಿಕವೇ ಆಗಿತ್ತಾದರೂ (ಹೀಗೆಂದರೆ ನನ್ನ ಪತಿಗೆ ಅಪಚಾರವಾಗಲಿಕ್ಕಿಲ್ಲವೆಂದು ತಿಳಿದಿದ್ದೇನೆ.) ನಮ್ಮಿಬ್ಬರಿಗೆ ಮಾತ್ರವೇ ಸಂಬಂಧಪಟ್ಟಿದ್ದ (ಆದ್ದರಿಂದಲೇ ಅವನ್ನು ಕುರಿತು ಇಲ್ಲಿ ಹೇಳಿಲ್ಲ) ಕೆಲ ವಿಷಯಗಳನ್ನು ಚರ್ಚಿಸಿದ ನಂತರ ನಾನು 'ಹೂಂ' ಎಂದೆ.

ನಮ್ಮ ಮದುವೆಯ ವಿಚಾರ ಬಹಿರಂಗವಾದ ನಂತರ ಕಲಾವಿದ ದೇವೀಪ್ರಸಾದರನ್ನು ಅಭಿನಂದಿಸುವ ಸಂದೇಶಗಳು ಬರತೊಡಗಿದವು. ಆದರೆ ಅಸಾಮಾನ್ಯವಾದೊಂದು ಜೀವಿಯ ಎದುರು

ಬಲಿ ಕೊಡಲ್ಪಡಲಿರುವ ಪ್ರಾಣಿಯೇನೋ ಎಂಬಂತೆ ನನ್ನ ವಿಷಯದಲ್ಲಿ ಮಾತ್ರ ಜನ ಒಂದಿಷ್ಟು ಕರುಣೆಯನ್ನೇ ತೋರುತ್ತಿದ್ದರೆನ್ನ ಬೇಕು. ಜನರ ಈ ರೀತಿ ನನ್ನನ್ನು ಗೊಂದಲ ದಲ್ಲಿ ಕೆಡವಿತು. ಕಲಾವಿದರೊಂದಿಗೆ ಸಂಪರ್ಕ ವಿದ್ದಿರದ ನನಗೆ ಅವರು ಇತರ ಜನರಿಗಿಂತ ಭಿನ್ನರಾಗಿರುತ್ತಾರೆ ಎಂಬ ಕಲ್ಪನೆಯೆ ಇರಲಿಲ್ಲ. ಹಿನ್ನಡೆ ಇನ್ನು ಸಾಧ್ಯವಿಲ್ಲ ಎಂದಾದ ಮೇಲೆಯೇ ನನಗೆ ಈ ಸತ್ಯದ ಅರಿವಾಗಲಿತ್ತು.

ಮದುವೆಯಾದ ಕೆಲ ಸಮಯದ ವರೆಗೆ ದೇವಿ ಪ್ರಸಾದರು ತಮ್ಮ ನಟನೆಯನ್ನು ನಿರ್ವಹಿಸಿದರು. ಆದರೆ ಲಗ್ನದ ಗಂಟು ಕಾಯದೆಯ ಬಲದಿಂದಲ್ಲ, ಆದರೆ ಪ್ರೇಮದ ಬಲದಿಂದ ಬ್ರಹ್ಮಗಂಟಾಯಿತು ಎಂಬ ನಂಬಿಗೆಯಾದ ಮರುನಿಮಿಷದಲ್ಲಿ ಅವರು ತಮ್ಮ ನಿಜರೂಪವನ್ನು ಪ್ರಕಟಿಸಿದರು. ಅವರ ಕಲಾಪೂರ್ಣ ಅಚ್ಚುಕಟ್ಟಾದ ಉಡುಪು ಮಾಯವಾಯಿತು. ಅದು ಅವರ ಕೆಲಸಕ್ಕೆ ಉಪಯುಕ್ತವಾಗಿರಲಿಲ್ಲವಂತೆ. ಅವರ ಮಿತ್ರ ನೊಬ್ಬ 'ಸುರಕ್ವಾಲುಂಗಿ' ಎಂದು ಹೆಸರಿಟ್ಟಿದ್ದ ಸಡಿಲಾದ ಪಾಯಜಾಮ ಮತ್ತು ಅಷ್ಟೇ ಸಡಿ ಲಾದ ಶರ್ಟು ಅವರ ಉಡುಪಾಯಿತು. ಇದ ರಿಂದ ಏನಾಯಿತೆಂದರೆ, ಮದ್ರಾಸ್ ಸ್ಕೂಲ್ ಆಫ್ ಆರ್ಟ್ಸ್ ಆ್ಯಂಡ್ ಕ್ರಾಫ್ಟ್ಸನ ಪ್ರಸಿದ್ಧ ಕಲಾವಿದ ಡಿ. ಪಿ. ರಾಯ ಚೌಧರಿಯವರನ್ನು ಕಾಣಲೆಂದು ಬಂದ ಜನರು ತಾನೇ ಆತ ಎಂದು ಹೇಳಿಕೊಳ್ಳುವ ಈ ವಿಚಿತ್ರ ಉಡುಪಿನ, ಕೈಗೆ ಅರಲು ಪ್ಲಾಸ್ಟರುಗಳನ್ನು ಮೆತ್ತಿಕೊಂಡ ಗೃಹಸ್ಥನನ್ನು ಕಂಡಾಗ "ಏನು ತಮಾಷೆ ಮಾಡುತ್ತೀರಾ? ಪ್ರಿನ್ಸಿಪಾಲರೆದುರು ದೂರು ಹೇಳುತ್ತೇವೆ" ಎಂದು ಗದರಿಸುವಂತಾಯಿತು. ದಿನದಲ್ಲಿ ಹೆಚ್ಚಿನ ಸಮಯವೆಲ್ಲ ಅವರು ಚಿತ್ರ ಬಿಡಿಸುವುದರಲ್ಲೋ, ಬಣ್ಣ ಹಾಕುವುದರಲ್ಲೋ, ಬರೆಯುವುದರಲ್ಲೋ ಮಗ್ನರಾಗಿರುತ್ತಾರೆಂಬುದು ನಿಜವಾದರೂ ಬಿಡುವಿದ್ದಾಗ ಕೂಡ ಅವರ ಈ ವೇಷದಲ್ಲಿ ಹೆಚ್ಚಿನ ಬದಲಾವಣೆಯಿರುವುದಿಲ್ಲ.

ನಮ್ಮ ಲಗ್ನವಾದಾಗ ಇವರು ಮದ್ಯ ಕುಡಿ ಯುತ್ತಿರಲಿಲ್ಲ. ಅವರದೇ ಶಬ್ದಗಳಲ್ಲಿ ಹೇಳಬೇ ಕಾದರೆ ಈಗವರು ಬುದ್ಧಿಯನ್ನು ಸ್ತಿಮಿತದ- ಲ್ಲಿಟ್ಟುಕೊಳ್ಳುವುದಕ್ಕಾಗಿ ಕುಡಿಯುತ್ತಾರೆ. ಮದ್ಯಪಾನವೇನೂ ಅವರಿಗೆ ಭೋಗವಿಲಾಸ ವಲ್ಲ. ಆದರೆ ಅವರನ್ನು ಉಲ್ಲಸಿತರನ್ನಾಗಿಟ್ಟು ನೂತನ ಕಲಾಕೃತಿಗಳ ನಿರ್ಮಾಣಕ್ಕೆ ಸ್ಫೂರ್ತಿ ಯನ್ನೊದಗಿಸಲು ಅದವರಿಗೆ ಅಗತ್ಯವಾಗಿದೆ. ಅದೂ ಅಲ್ಲದೆ ಅವರು ಮದ್ಯಪಾನವನ್ನು ಪೂರ್ತಿ ಯಾಗಿ ಬಿಟ್ಟರಾದರೆ ಅವರ ಆರೋಗ್ಯ ಸುಧಾರಿ ಸಲು ಬಾರದಮಟ್ಟಿಗೆ ಕೆಟ್ಟುಹೋದೀತು ಎಂದು ಅವರ ಡಾಕ್ಟರರು ಅಭಿಪ್ರಾಯಪಡು ತ್ತಾರೆ.

ಜೀವನವನ್ನು ಅವರು ನೋಡುವ ದೃಷ್ಟಿ ಅತಿ ಮುದ್ದಿನಿಂದ ತುಂಟನಾದ ಹುಡುಗನ ದೃಷ್ಟಿ ಯಂತಿದೆ. ಬೆಲೆ ಏನೇ ಇರಲಿ, ಅಯೋಗ್ಯವೇ ಇರಲಿ ಇದು ಬೇಕು ಎಂದರೆ ಅವರಿಗೆ ಬೇಕೇ ಬೇಕು.

ಈ ನಿಮಿಷದಲ್ಲಿ ಸುಖದ ಸ್ವರ್ಗದಲ್ಲಿ ಕುಳಿತಿ ದ್ದರೆ ಮರು ನಿಮಿಷದಲ್ಲಿ ಇವರು ದುಃಖದ ನಿಟ್ಟುಸಿರು ಬಿಡುವರು. ಮನಸ್ಸಿನ ವಿರುದ್ಧ ಏನಾದರೂ ನಡೆದರೆ ಕೋಪದಿಂದ ಉರಿದೇಳುವ ಇವರು ಇವರನ್ನು ಇವರಷ್ಟಕ್ಕೆ ಬಿಟ್ಟರೆ ತಣ್ಣ ಗಾಗುತ್ತಾರೆ.

ಸ್ವಭಾವದಲ್ಲಿ ಇಷ್ಟೆಲ್ಲ ವಿಪರೀತಗಳಿದ್ದರೂ ಇವರಿಗೆ ಹಲವಾರು ಒಳ್ಳೆಯ ಸ್ನೇಹಿತರಿದ್ದಾರೆ. ಸಾಮಾನ್ಯವಾಗಿ ಇವರ ಸ್ನೇಹ ಯಾವುದೊಂದು ತಪ್ಪು ತಿಳಿವಳಿಕೆಯಿಂದಲೆ ಆರಂಭವಾಗುತ್ತಿತ್ತು. ಇವರ ಎದುರಾಳಿಗಳು ಇವರ ವಿಪರೀತ ಸ್ವಭಾ ವವನ್ನು ಸಹಿಸಿಕೊಂಡು ಇವರಲ್ಲಿಯ ಒಳ್ಳೆಯ ತನವನ್ನೂ ಕಂಡುಕೊಂಡರಾದರೆ ಇವರು ಅಂಥ ವರ ದಾಸಾನುದಾಸರಾಗುತ್ತಿದ್ದರು.

ಬಾಲ್ಯದಲ್ಲಿ ಇವರು ಬಲು ತುಂಟರಾಗಿದ್ದು ಇವರ ತಂದೆ ತಾಯಿಗಳಿಗೆ ಒಂದು ತಲೆನೋವೇ ಆಗಿದ್ದರು. ಇದನ್ನು ಇವರ ತಂದೆಯ ಬಾಯಿಂ-

ದಲೇ ಕೇಳಿದ್ದೇನೆ. ಈ ನಿರ್ಭೀತ ಹುಡುಗನಿಗೆ ಯಾವುದೇ ಸಾಹಸವೆಂದರೆ ಬಲು ಹಿಗ್ಗು. ಸೈಕಲ್ ಕಸರತ್ತುಗಳನ್ನು ತೋರಿಸಲೆಂದು ಇವರು ಸರ್ಕಸ್ ಕಂಪನಿಯನ್ನು ಸೇರಿದರು. ಮುಳುಗುತ್ತಿದ್ದವರನ್ನು ಬದುಕಿಸಲು ತನ್ನ ಜೀವವನ್ನು ಗಂಡಾಂತರಕ್ಕೆ ನೂಕಿದರು. ತಾನೊಬ್ಬ ಅಸಮಾನ ಕುದುರೆ ಸವಾರ ಎಂದು ಸಿದ್ಧಪಡಿಸಲು ಮೊಂಡು ಕುದುರೆಗಳನ್ನೇರಿದರು- ಇದಾವುದೂ ಸಾಲದೆಂಬಂತೆ ತನ್ನ ಸಿಗರೇಟುಗಳಿಗಾಗಿ ಹಣ ಕೂಡಿಸಲೆಂದು ಒಂದು ಮರದ ಕೆಳಗೆ ಮುಂದೊಂದು ವಸ್ತ್ರವನ್ನು ಹಾಸಿಕೊಂಡು ಕುಳಿತು ಕೊಳಲು ಬಾರಿಸುತ್ತಿದ್ದರು. ಮಗನ ಈ ಮಹಾಸಾಹಸಗಳೆಲ್ಲ ತಂದೆ- ತಾಯಿಗಳಿಗೆ ಗೊತ್ತಿಲ್ಲದಂತೆಯೆ ನಡೆಯುತ್ತಿದ್ದವಾದ್ದರಿಂದ ಮನೆಯಿಂದ ಹೊರಗೆ ಹೊರಟ ಮಗ ತಿರುಗಿ ಮನೆ ಸೇರುವವರೆಗೂ ಅವರಿಗೆ ಜೀವದಲ್ಲಿ ಜೀವವಿರುತ್ತಿರಲಿಲ್ಲ. ನನ್ನ ಪತಿಯ ಇಂಥ ಅಸಂಖ್ಯ ವಿಚಾರಗಳನ್ನು ಹೇಳುತ್ತ ಹೊರಟರೆ ಓದುಗರಿಗೆ ಬೇಸರವಾದೀತು. ನನ್ನ ಪತಿ ಯಾವ ಎರಕ ಎಂದು ಈಗ ಹೇಳಿರುವಷ್ಟೇ ವಿಚಾರಗಳಿಂದ ತಿಳಿದುಬರುವಂತಿದೆ.

ಚಿತ್ರಕಲೆಯನ್ನು ಬಿಟ್ಟರೆ ಅದಕ್ಕೆ ತೀರ ವಿರುದ್ಧವಾದ ಬೇಟೆ ಮತ್ತು ಸಂಗೀತ ನನ್ನ ಪತಿಯ ಮೆಚ್ಚಿನ ವಿಷಯಗಳು. ಅವಕಾಶ ಸಿಕ್ಕಾಗಲೆಲ್ಲ ಅಡವಿಗೆ ಓಡುತ್ತಾರೆ. ಮೃಗಬೇಟೆಯಂತೂ ಸರಿಯೆ, ಅಡವಿಯೂ ಅವರನ್ನು ಬಲವಾಗಿ ಆಕರ್ಷಿಸುತ್ತದೆ.

ವಾದದಲ್ಲಿ ಬಲು ಗಟ್ಟಿ ಇವರು. ಸಂಭಾಷಣೆಯಲ್ಲಿ ಇವರೆತ್ತುವ ಮುಖ್ಯ ವಿಷಯವೆಂದರೆ ಕಲೆ ಮತ್ತು ಲೈಂಗಿಕ ಮನೋವಿಜ್ಞಾನ. ಮದ್ಯದ ಅಮಲಿನಲ್ಲಿರುವಾಗ ಇವರ ವಾದಕ್ಕೆ ಹೆಚ್ಚು ಪ್ರಖರತೆ ಬರುತ್ತದೆ, ವೇದಾಂತದ ಸ್ವರೂಪ ಬರುತ್ತದೆ ಎಂದು ಕಂಡುಕೊಂಡಿದ್ದೇನೆ. ತನ್ನದೇ ನಿಜ ಎಂಬ ವಿಶ್ವಾಸ ಇವರದು. ಯಾರೇ ಇರಲಿ, ಹೆಂಡತಿಯೆ ಆಗಿರಲಿ ತನ್ನ ನಂಬಿಗೆಗೆ ಇದಿರಾಡುವುದನ್ನು ಸಹಿಸಲಾರರು.

ಹಿಂದೂ ಧರ್ಮತತ್ತ್ವವನ್ನು ತುಂಬಾ ಗೌರವಿಸುತ್ತಾರಾದರೂ ಇವರು ಸನಾತನಿಗಳಲ್ಲ. ಧರ್ಮಾಂಧತೆಯನ್ನು ಇವರು ಮೆಚ್ಚುವುದಿಲ್ಲ.

ದೇವೀಪ್ರಸಾದರು ಮತ್ಸರಿಯಾದ ಪತಿಎಂದೇ ಹೇಳಬಹುದಾದರೂ ಅತಿರೇಕಕ್ಕೆ ಹೋಗುವುದಿಲ್ಲ. ಅವರ ಅಂತರಂಗ ಮೃದುವಾಗಿದ್ದು ಸ್ನೇಹಶೀಲವಾಗಿದೆ. ಆದರೆ ಅವರು ತುಂಬಾ ಭಾವನಾಪ್ರಧಾನರಾಗಿದ್ದಾರೆ. ಅವರನ್ನು ಅವರಷ್ಟಕ್ಕೆ ಬಿಟ್ಟರೆ ನಿಮ್ಮ ವ್ಯವಹಾರದಲ್ಲೆಂದೂ ಕೈಹಾಕುವುದಿಲ್ಲ. ಆದರೆ ಅದೇ ಅವರನ್ನು ಚುಚ್ಚಿದಿರೋ ಹಸಿದ ಹುಲಿಯಂತೆ ಮೈಮೇಲೆರಗುವರು. ಸಾರಾಂಶ, ಅವರೊಂದು ಅತಿ ಪ್ರಭಾವಶಾಲಿ ವ್ಯಕ್ತಿ.

ಇಪ್ಪತ್ತು ವರ್ಷಗಳಿಗಿಂತಲೂ ಹೆಚ್ಚುಕಾಲ ಒಬ್ಬ ಕಲಾವಿದನೊಡನೆ ಸಂಸಾರ ಮಾಡಿ ಬಂದ ಅನುಭವದಿಂದ ಇದನ್ನೆಲ್ಲ ಬರೆಯುತ್ತಿದ್ದೇನೆ. ಈ ಅವಧಿಯಲ್ಲಿ ಇದೇ ಬೀಜದ ಇನ್ನೊಂದು ಸಸಿ ಮನೆಯಲ್ಲಿ ಚಿಗುರಿದೆ. ನನ್ನ ಮಗ ನೃತ್ಯವನ್ನು ತನ್ನ ಜೀವನದ ಪಥವನ್ನಾಗಿ ಆಯ್ದುಕೊಂಡಿದ್ದಾನೆ.

ನನ್ನ ಭಾಗ್ಯಕ್ಕಾಗಿ ನೀವು ಕರುಬಬಹುದು, ಇಲ್ಲವೇ ದುರ್ದೈವಕ್ಕಾಗಿ ಮರುಗಬಹುದು. ದೇವೀಪ್ರಸಾದರನ್ನು ನಾನರಿತುಕೊಂಡ ಬಗೆಯಲ್ಲಿ ಚಿತ್ರಿಸಲು ನಾನಿಲ್ಲಿ ಪ್ರಯತ್ನಿಸಿದ್ದೇನೆ.

ದೀರ್ಘಕಾಲ ಕಲಾವಿದನೊಂದಿಗೆ ಬಾಳುವೆ ಸಾಗಿಸದೆ ಇದ್ದವರಿಗೆ ಕಲಾವಿದನ ಹೆಂಡತಿ ಮತ್ತು ಸಾಮಾನ್ಯನೊಬ್ಬನ ಹೆಂಡತಿಯ ಜೀವನಗಳಲ್ಲಿರುವ ವ್ಯತ್ಯಾಸದ ಕಲ್ಪನೆ ಬಾರದು. ಕಲಾವಿದನ ಹೆಂಡತಿಗೆ ಗಂಡನ ತಾಪತ್ರಯವೆನಿಸದಿದ್ದರೂ ಅವಳಿಗೆ ಅವಳದೇ ಎಂದುಕೊಳ್ಳಬಹುದಾದ ಸಮಯ ಸಿಗುವುದೂ ಅಷ್ಟಕ್ಕಷ್ಟೇ ಆಗಿದೆ. ಅವಳು ಮನೆ ಯಜಮಾನಿಯ ಪಾತ್ರದ ಜೊತೆಗೆ ಯಜಮಾನನ ಪಾತ್ರವನ್ನೂ ನಿರ್ವಹಿಸ

ಬೇಕಾಗುವುದು. ಸೃಷ್ಟಿಕರ್ತನಾದ ಕಲಾವಿದ ತನ್ನದೇ ಆದ ವಿಚಾರ ಕಲ್ಪನೆಗಳ ಜಗತ್ತಿನಲ್ಲಿ ಇರುತ್ತಿದ್ದು ನಿತ್ಯ ವ್ಯವಹಾರಗಳಲ್ಲಿ ತಲೆಹಾಕಲು ಅವನಿಗೆ ಸಮಯವೇ ಇರುವುದಿಲ್ಲ. ಆತ ತನ್ನ ಮಕ್ಕಳ ತಂದೆಯೇನೊ ನಿಜ; ಆತ ಅವರನ್ನು ಪ್ರೀತಿಸುತ್ತಾನೆ, ಅವರಿಗಾಗಿ ಸಂಪಾದಿಸುತ್ತಾನೆ ನಿಜ. ಆದರೆ ಅಲ್ಲಿಗೆ ಅವನ ಕರ್ತವ್ಯ ಮುಗಿಯಿತು. ಅವರ ಪಾಲನೆ ಪೋಷಣೆ, ಯೋಗ ಕ್ಷೇಮ, ವಿದ್ಯಾಭ್ಯಾಸ, ಅವರನ್ನು ಸಮಾಜ ಯೋಗ್ಯ ಸ್ತ್ರೀಪುರುಷರನ್ನಾಗಿ ಮಾಡುವುದು—ಇವೆಲ್ಲ ತಾಯಿಯ ಪಾಲಿಗೆ ಬರುವ ಕರ್ತವ್ಯವಾಗಿವೆ.

ಕಲಾವಿದನದು ಮರೆವಿನ ಸ್ವಭಾವ. ಆದರೆ ಅದಕ್ಕಾಗಿ ನೀವಾತನನ್ನು ದೂಷಿಸಲಾರಿರಿ. ತನ್ನ ನಂತರವೂ ಬಾಳುವಂಥ ಯಾವುದಾದರೊಂದು ಹೊಸತನ್ನು ನಿರ್ಮಿಸುವುದಕ್ಕಾಗಿ ಆತನ ಮನಸ್ಸು ಸದಾ ಚಡಪಡಿಸುತ್ತಿರುತ್ತದೆ. ಹಾಗಿರುವಾಗ ದಿನನಿತ್ಯದ ಕ್ಷುಲ್ಲಕ ವ್ಯವಹಾರಗಳನ್ನು ಆತ ಗಮನಿಸುವುದು ಹೇಗೆ ಸಾಧ್ಯ? ಆತ ಮನೆಗೆ ಅತಿಥಿಗಳನ್ನು ಆಮಂತ್ರಿಸುತ್ತಾನೆ, ಆದರೆ ಮರೆತುಬಿಡುತ್ತಾನೆ. ಅತಿಥಿಗಳು ಬಂದಾಗ ಯಜಮಾನಿ ತನ್ನಿಂದ ಸಾಧ್ಯವಾದಷ್ಟು ಮಟ್ಟಿಗೆ ಅವರ ಆದರೋಪಚಾರವನ್ನು ಮಾಡಬೇಕಾಗುವುದು. ಆತ ಎಲ್ಲಿಯೊ ಯಾರನ್ನೊ ಭೆಟ್ಟಿಯಾಗಬೇಕು. ಆದರೆ ಆ ವಿಷಯದ ವಿವರ, ಅಂದರೆ ವೇಳೆ ದಿನ, ಅವನಿಗೆ ನೆನಪಿರುವುದೇ ಇಲ್ಲ. ಅವನ ಹೆಂಡತಿ ಇಂಥ ವಿಷಯಗಳನ್ನೆಲ್ಲ ಜ್ಞಾಪಕದಲ್ಲಿಟ್ಟುಕೊಂಡು ಸಮಯಕ್ಕೆ ಸರಿಯಾಗಿ ಆತನನ್ನು ಎಚ್ಚರಿಸಬೇಕು. ಆದರೆ ಆ ಸಮಯದಲ್ಲೇನಾದರೂ ಆತ ಸ್ಫೂರ್ತಿಯಿಂದ ಕಾರ್ಯಮಗ್ನನಾಗಿದ್ದರೆ ಅವನನ್ನು ತೊಂದರೆಗೊಳಿಸಬಾರದು.

ಕಲಾವಿದನ ಉಡುಪಿನ ಮೇಲೆ ಹಲವಾರು ಬಣ್ಣಗಳ ಕಲೆಗಳಿರುತ್ತನೆ. ಆತ ಸರ್ಕಸ್ಸಿನ ವಿದೂಷಕನಂತೆ ಕಾಣಿಸುತ್ತಾನೆ. ಸರಿ, ಆದರೆ ಅದು ಯಾರ ತಪ್ಪು? ಬಟ್ಟೆ ಬದಲಾಯಿಸಬೇಕೆಂದು ಯಾರಾದರೂ ಅವನನ್ನು ಎಚ್ಚರಿಸುವುದು ಬೇಡವೆ?

ಆತನಿಗೆ ಹಸಿವಾಗಿರುತ್ತದೆ, ಆದರೆ ಊಟದ ಹೊತ್ತಾಗಿದೆಯೆಂಬ ಅರಿವಿರುವುದಿಲ್ಲ. ಆತನಿಗೆ ಅಸ್ವಸ್ಥತೆಯೆನಿಸಿ ಆತ ಕುರುಕುರು ಮಾಡುತ್ತಾನೆ. ಕಾರಣವೇನು ಎಂದು ಮಾತ್ರ ಆತನಿಗೆ ತಿಳಿದಿರುವುದಿಲ್ಲ. ಉಂಡು ಹೊಟ್ಟೆ ತುಂಬಿದ ಮೇಲೆ ಮುಗುಳ್ನಗುತ್ತ, “ಓ! ನನಗೆ ಹಸಿವೆಯಾಗಿತ್ತು” ಎನ್ನುತ್ತಾನೆ.

ಕಲಾವಿದನಿಗೆ ಅವನ ಚಿತ್ರಕ್ಕಾಗಿ ಒಂದು ರೇಶಿಮೆ ಬಟ್ಟೆಯ ತುಂಡು ಬೇಕಾಗಿರುತ್ತದೆ. ಅವನ ಹೆಂಡತಿಯೇನಾದರೂ ಹೊಸತಾಗಲಿ ಹಳೆಯದಾಗಲಿ ರೇಶಿಮೆ ಬಟ್ಟೆಯ ಚೂರನ್ನು ಕೊಡಲಾರಳೆ?

ಆತ ತಂದ ಸೀರೆಯನ್ನುಟ್ಟು ಯಾವುದೊ ಸಮಾರಂಭಕ್ಕೆ ಹೊರಡಲು ಹೆಂಡತಿ ಸಿದ್ಧಳಾಗಿರುತ್ತಾಳೆ. ಆದರೆ ಸೀರೆಯ ಬಣ್ಣ ಅವಳಿಗೊಪ್ಪುವುದಿಲ್ಲ. ಅವಳದನ್ನು ಬಿಚ್ಚಿಟ್ಟು ಬೇರೆ ಉಡಬೇಕು. ಈ ಭಾರಿ ಬೆಲೆಯ ಸೀರೆಯನ್ನೇನು ಮಾಡಬೇಕು? ಅದಕ್ಕೇನಂತೆ? ಬಾಗಿಲ ಪಡದೆಯಾಗಿ ಅದು ಚಂದ ಕಂಡೀತು!

ಕಲಾವಿದನ ಕೋಣೆಯೊ ಒಂದು ವರ್ಕ್‌ಶಾಪಿನಂತಿರುತ್ತದೆ. ಕಾಗದ, ಅರಿವೆ, ಬ್ರಶ್ ಬಣ್ಣ ಎಲ್ಲಿ ಬೇಕಲ್ಲಿ ಬಿದ್ದಿರುತ್ತವೆ. ಎಲ್ಲಿ ಯಾತರ ಮೇಲೆ ಕಾಲು ಬಿದ್ದೀತೋ ಎಂದು ಎಚ್ಚರಿಕೆಯಿಂದ ಹೆಜ್ಜೆಯಿಡಬೇಕು. ಕೋಣೆಯನ್ನು ವ್ಯವಸ್ಥಿತವಾಗಿಡಲು ಹೆಂಡತಿ ಮುಂದೆ ಬಂದಾಗ ಆತ ಬಲು ಹಿಗ್ಗುತ್ತಾನೆ. ಅವಳ ಉಪಕಾರ ಬಹಳವಾಯಿತು ಎನ್ನುತ್ತಾನೆ. ಆದರೆ ಕೋಣೆ ವ್ಯವಸ್ಥಿತವಾದಾಗ ಎಷ್ಟೊ ಸಾಮಾನುಗಳು ಕಾಣುವುದಿಲ್ಲ. ಯಾರಾದರೂ ಅವುಗಳನ್ನು ತೆಗೆದುಕೊಂಡರೇ ಹೇಗೆ? ಅವನಿಗೆ ಯಾವುದೂ ತಿಳಿಯುವುದಿಲ್ಲ. ಆದರೆ ಆಗಿರುವುದಿಷ್ಟೇ, ಒಪ್ಪ ಓರಣಗಳಿಗೆ ಅಭ್ಯಸ್ತವಾಗಿರದ ಅವನ ಕಣ್ಣುಗಳಿಗೆ ಅಲ್ಲಿ ಅವನ

ಮೂಗಿನ ನೇರಕ್ಕೇ ಇದ್ದ ಆ ಕಾಣುವುದಿಲ್ಲವೆಂದಾದ ವಸ್ತುಗಳು ಕಾಣಿಸುತ್ತಿರುವುದಿಲ್ಲ.

ಈ ಪ್ರಸಿದ್ಧ ಪುರುಷನನ್ನು ಕಾಣಲು ಜನ ಬರುತ್ತಾರೆ. ತನ್ನ ಚಿತ್ರಕ್ಕೆ ಕೊನೆಯ ಗೆರೆ ಎಳೆಯುತ್ತಿರುವ ಆತನಿಗೆ ಅವರನ್ನು ಕಾಣಲು ಸುತರಾಂ ಸಮಯವಿರುವುದಿಲ್ಲ. ಅವನ ಕೈ ಬಿಡುವಾಗುವವರೆಗೆ ಹೆಂಡತಿ ಅತಿಥಿಗಳ ಯೋಗ ಕ್ಷೇಮ ನೋಡಿಕೊಳ್ಳಲಾರಳೆ! ಹೆಂಡತಿಗೂ ಕೆಲಸವಿದ್ದರೇನಾಯಿತು, ಅದೇನೂ ಅಷ್ಟು ಮಹತ್ವದ್ದಲ್ಲ. ಆದರೆ ಹೀಗೆ ಅವಳು ತನ್ನ ಕೆಲಸ ಮಾಡಲಾರದೆ ಹೋಗಿದ್ದರಿಂದ ಮನೆಯಲ್ಲೇನಾದರೂ ಅವ್ಯವಸ್ಥೆಯಾಯಿತೋ ಅದರ ಹೊಣೆ ಮಾತ್ರ ಅವಳದ್ದೇ; ಅವಳು ಯೋಗ್ಯ ಗೃಹಿಣಿಯಲ್ಲ!

ಇಂಥ ಅನೇಕಾನೇಕ ಸಮಸ್ಯೆಗಳನ್ನು ದಿನ ನಿತ್ಯ ಕಲಾವಿದನ ಹೆಂಡತಿ ಎದುರಿಸಬೇಕಾಗುವುದು. ಒಂದು ಕ್ಲಿಷ್ಟ ಗಣಿತ ಪ್ರಶ್ನೆಯನ್ನು ಬಿಡಿಸುವಷ್ಟೇ ಇದೂ ಕಠಿಣವಾಗಿದೆ. ಇವೆರಡರ ನಡುವಿನ ಅಂತರವೆಂದರೆ ಸಮಸ್ಯೆಯನ್ನು ಬಿಡಿಸುವವನನ್ನು ಲೋಕ ಕಾಣುವ ರೀತಿ. ವಿಜ್ಞಾನಿ ತನ್ನ ಸಮಸ್ಯೆಯನ್ನು ಬಿಡಿಸಿದಾಗ ಜಗತ್ತು ಅವನನ್ನು ಗೌರವಿಸುತ್ತದೆ. ಆದರೆ ಕಲಾವಿದನ ಹೆಂಡತಿ ಮಾತ್ರ ಅವಳು ಅಸಾಧಾರಣ ಯೋಗ್ಯತೆಯಿಂದ ಕಲಾವಿದನ ಸಂಸಾರವನ್ನು ತೂಗಿಸಿಕೊಂಡು ಹೋಗಿದ್ದರೂ ಜನರಿಗೆ ಅಪರಿಚಿತಳಾಗಿಯೆ ಉಳಿದು ಸಾಯುತ್ತಾಳೆ. *



## ಪೌರುಷ

ಗೆಳೆಯರಿಬ್ಬರು ಮಾತನಾಡುತ್ತಿದ್ದರು. ಅವರಲ್ಲೊಬ್ಬ ನುಡಿದ: "ನಾನು ಇನ್ನೂವರೆಗೂ ಒಂದೂ ನಿಜವಾದ ಮಾತನಾಡಿಲ್ಲವಯ್ಯಾ. ಬರೀ ಸುಳ್ಳಿನ ಕಂತೆಯಿಂದಲೇ ನಾನೀ ವರೆಗೆ ಬದುಕಿದ್ದು."

"ಸರಿ. ಆದರೆ ನೀನೀಗ ಒಂದು ನಿಜವಾದ ಮಾತನ್ನಾಡಿ ಈ ವರೆಗೂ ಗಳಿಸಿಟ್ಟದ್ದ ನಿನ್ನ ಪೌರುಷವನ್ನೇ ಹಾಳು ಮಾಡಿಕೊಂಡೆಯಲ್ಲಾ" ಇನ್ನೊಬ್ಬ ಗೆಳೆಯ ಹೇಳಿದ.

—ಅರವಿಂದ ಹರ್ವತೀಕರ

* * *

ದುಃಖವನ್ನು ಸ್ವಾಗತಿಸಲು ನೈತಿಕ ಸಾಹಸ ಬೇಕು; ಆನಂದವನ್ನು ಸ್ವಾಗತಿಸಲು ಧಾರ್ಮಿಕ ಸಾಹಸ ಬೇಕು. ಅನಿಷ್ಟ ವಿಷಯಗಳಲ್ಲಿ ಅವಿಸ್ವಾಸ ತಾಳುವುದೂ ಸಾಹಸವೇ. ಆದರಂತೆ ಒಳ್ಳೆಯ ವಿಷಯಗಳ ಬಗ್ಗೆ ಆಶಿಸುವುದೂ ಸಾಹಸವೇ ಸರಿ. ಆದರೆ ಇವೆರಡರಲ್ಲಿ ಆಕಾಶಪಾತಾಳಗಳಷ್ಟು ಅಂತರವಿದೆ. ಮೊದಲನೆಯ ಸಾಹಸ ಅಹಂಕಾರದ್ದಾಗಿದ್ದರೆ ಎರಡನೆಯದು ನಮ್ರತನದ್ದಾಗಿದೆ.

* * *

ಕ್ರಿಯಾರಹಿತ ಜ್ಞಾನ ಮತ್ತು ಜ್ಞಾನರಹಿತ ಕ್ರಿಯೆ ಎರಡೂ ಸರ್ವಥಾ ನಷ್ಟವಾಗಿ ಹೋಗುವುವು. ಅಡವಿಗೆ ಬೆಂಕಿ ಹತ್ತಿದಾಗ ಸುಮ್ಮನೆ ನೋಡುತ್ತ ನಿಲ್ಲುವ ಕುಂಟ ಮತ್ತು ಓಡಿಹೋಗಲೆತ್ನಿಸುವ ಕುರುಡ ಇಬ್ಬರೂ ಸುಟ್ಟು ಸತ್ತುಹೋಗುತ್ತಾರೆ.



ಚಲಚ್ಚಿತ್ರ ರಂಗದ ಹೆಸರಾಂತ ಕಥಾಲೇಖಕನ ಒಂದು ಹಿಂದೀ ಕಥೆ

# ದಿಲ್ಲಿಯ ಕೊನೆಯ ದೀಪ

ಸುದರ್ಶನ

೧೮೮೦ ರಲ್ಲಿ ದಿಲ್ಲಿಯ ಚಾಂದನಿಚೌಕನ್ನು ನೋಡಿದವರೆಲ್ಲ ಸುಭಾಗಿಯ ಅವಲಕ್ಕಿಭಟ್ಟಿಯನ್ನು ನೋಡಿರಲೇಬೇಕು. ಇಂದು ಅದನ್ನು ಕಾಣುವಂತಿಲ್ಲ. ಆ ಪ್ರದೇಶದ ಬಡಜನರ ವಸತಿ, ಮಕ್ಕಳ ಕೋಲಾಹಲ ಎಲ್ಲವೂ ಕಾಲ ಗರ್ಭದಲ್ಲಿ ಅಡಗಿ ಹೋಗಿದೆ. ಆ ಸ್ಥಳದಲ್ಲಿಂದು ಒಂದು ಅತ್ಯಾಧುನಿಕ ಅಂಗಡಿ ತಲೆಯೆತ್ತಿನಿಂತಿದೆ.

ಸುಭಾಗಿ ಕುರೂಪಿ ಸ್ತ್ರೀ. ವಯಸ್ಸೂ ನಲುವತ್ತಕ್ಕೆ ಮಿಕ್ಕಿಹೋಗಿತ್ತು. ಅವಳ ಸ್ವರವೂ ಕರ್ಕಶ. ರಾತ್ರಿಯ ಕತ್ತಲಲ್ಲಿ ದರ್ಶನವಾದರೆ ದೆವ್ವವೇ ಎದುರಿಗೆ ಬಂದಿದೆಯೇನೊ ಎಂಬ ಸಂಶಯ ಬರುವಂತಿತ್ತು. ಅವಳು ಬಡ ಹೆಂಗಸು. ಇಷ್ಟಿದ್ದರೂ ಅವಳು ಚಾಂದನಿ ಚೌಕಿನಲ್ಲಿ ಅರಮನೆಯ ರಾಣಿಯರಿಗೂ ದುರ್ಲಭವಾದ ಶಾಂತಿ-ಸಂತೋಷಗಳಿಂದ ಕಾಲ ಹಾಕುತ್ತಿದ್ದಳು. ಅವಳ ಹತ್ತಿರ ಯಾವ ರಾಜನೂ ಕಸಿದುಕೊಳ್ಳಲಾರದ, ಯಾವ ಕಳ್ಳನೂ ಕದ್ದೊಯ್ಯಲಾರದ ಹೃದಯದ ಸಂತೋಷ, ಶಾಂತಿಯ ನಿದ್ರೆ ಇದ್ದವು. ಅವಳು ತನ್ನ ಜೀವನದ ನಲುವತ್ತು ವರ್ಷಗಳನ್ನು ಇದೇ ಗುಡಿಸಲಿನಲ್ಲಿ ಕಳೆದಿದ್ದಳು. ತನ್ನ ಗುಡಿಸಲನ್ನು ಕಂಡು ಅವಳ ಹೃದಯನವಿಲು ಕುಣಿಯುತ್ತಿತ್ತು. ದಿಲ್ಲಿ ಬದಲಾಯಿಸಿತು, ಚಾಂದನಿಚೌಕ ಬದಲಾಯಿಸಿತು, ದಿಲ್ಲಿಯ ಪ್ರಾಚೀನ ನಾಗರಿಕತೆ ಕೂಡ ಬದಲಾಯಿಸಿತು. ಆದರೆ ಸುಭಾಗಿ, ಅವಳ ಗುಡಿಸಲು, ಅವಳ ಭಟ್ಟಿ ಮಾತ್ರ ಮೊದಲಿನಂತೆಯೆ ಇದ್ದವು. ಹೊಸ ರೂಪವನ್ನು ಕಂಡು ಇದು ದಿಲ್ಲಿಯೆ ಎಂದು ಬಂದ ಸಂದೇಹ

* "ಸುದರ್ಶನ ಸುಮನ" ದಿಂದ

ಸುಭಾಗಿಯ ಗುಡಿಸಲನ್ನು ಕಂಡೊಡನೆ ಇಲ್ಲದಂತಾಗಿ ದಿಲ್ಲಿಯ ಪರಿಚಯ ಹತ್ತುತ್ತಿತ್ತು. ನಿಜವಾಗಿಯೆಂದರೆ ಇದು ಸುಭಾಗಿಯ ಗುಡಿಸಲಾಗಿರದೆ ಹೊಸದಿಲ್ಲಿಯ ಶರೀರದಲ್ಲಿಯ ಪ್ರಾಚೀನ ದಿಲ್ಲಿಯ ಆತ್ಮವಾಗಿತ್ತು. ದಿಲ್ಲಿಯ ಕತ್ತಲಿನಲ್ಲಿ ಪುರಾತನ ಭಾರತವರ್ಷದ ದೀಪ ಉರಿಯುತ್ತಲಿತ್ತು.

ಅಹಂಕಾರ ಅಭಿಮಾನಗಳ ನಡುವೆ ನಿಜ ಆನಂದವು ನಿಂತು ಮುಗುಳ್ನಗುತ್ತಿರುವಂತೆ ಆಕಾಶಚುಂಬಿ ಕಟ್ಟಡಗಳ ನಡುವೆ ಸುಭಾಗಿಯ ಗುಡಿಸಲು ನಿಂತಿತ್ತು. ಸುಭಾಗಿಗೆ ಆ ಕಟ್ಟಡ, ವೈಭವಗಳನ್ನು ಕಂಡು ಅಸೂಯೆಯೆನಿಸುತ್ತಿರಲಿಲ್ಲ. ಅವಳ ಗುಡಿಸಲು ಅವಳಿಗೆ ಇಹದ ಸರ್ವಸ್ವವಾಗಿತ್ತು. ನಲ:ವತ್ತು ವರ್ಷಗಳ ಹಿಂದೆ ಅವಲಕ್ಕಿಭಟ್ಟಿಯಾತ ಅವಳನ್ನು ಲಗ್ನವಾಗಿ ಇಲ್ಲಿಗೆ ಕರೆತಂದಂದಿನಿಂದಲೂ ಅವಳಿಲ್ಲೇ ಇದ್ದಳು. ಸಾಯುವಾಗ ಆತ "ನಿನ್ನನ್ನು ಕರೆದೊಯ್ಯಲು ನಾನು ಬರುತ್ತೇನೆ" ಎಂದಿದ್ದ. ಮಾತೇನೊ ಸಾಮಾನ್ಯವಾಗಿತ್ತಾದರೂ ಅದು ಸುಭಾಗಿಯ ಹೃದಯದಲ್ಲಿ ಬೇರೂರಿತ್ತು. ಇಂದಿನ ಸ್ತ್ರೀಯರು ಇಂಥ ಮಾತುಗಳು ಅರ್ಥವಿಲ್ಲದವು ಎಂದು ಮರೆತುಬಿಡಬಹುದು. ಆದರೆ ಸುಭಾಗಿ ಹಳೆಯ ಕಾಲದ ಹೆಂಗಸು. ಅವಳು ತನ್ನ ಗಂಡನ ಮಾತನ್ನು ಹೇಗೆ ಮರೆತಾಳು ? ಪತಿ ವಚನವಿತ್ತಿದ್ದ. ಯಾವಾಗ ಬರುತ್ತಾನೊ ಯಾರು ಬಲ್ಲರು. ಅವನ ಆತ್ಮ ಬಂದಾಗ ಈ ಗುಡಿಸಲನ್ನು, ಈ ಭಟ್ಟಿಯನ್ನು ಹುಡುಕೀತು. ನನ್ನ ಹೆಸರನ್ನು ಕೂಗೀತು ಎಂದೆಲ್ಲ ಯೋಚಿಸಿ ನಂಬಿದ್ದ ಸುಭಾಗಿ ಗುಡಿಸಲನ್ನೆ ತನ್ನ ಜೀವವೆಂದು ಭಾವಿಸಿದ್ದೇನಾಶ್ಚರ್ಯ! ಈ ವಿಶ್ವಾಸ ಬಲದಿಂದಲೇ ದರಿದ್ರ ಸ್ತ್ರೀಯಾಗಿಯೂ ಸುಭಾಗಿ ಗಂಡಸರಂತೆ ಜೀವನದ ಕಷ್ಟಗಳನ್ನು ಎದುರಿಸಿದ್ದಳು. ಅವಳ ದೇಹ ಹೊಲಸಾಗಿತ್ತು, ಆದರೆ ಹೃದಯ ಮನೋಹರವಾಗಿತ್ತು. ಕಬ್ಬಿಣದ ಖಾನೆಯಲ್ಲಿ ಬಂಗಾರದ ಗಟ್ಟಿ ಇತ್ತು.

ಹೀಗೆಯೆ ವರ್ಷಗಳು ಕಳೆದವು. ಬದಲಾಗುತ್ತಿರುವ ಜಗತ್ತಿನಲ್ಲಿ ಬದಲಾಗದಿರುವ ಸುಭಾಗಿ ತನ್ನ ಪ್ರಿಯತಮನ ಹಾದಿಯನ್ನು ಕಾಯುತ್ತಲಿದ್ದಳು. ಆದರೆ ಚಾಂದನಿಚೌಕಿನ ಲೋಭಿ ವ್ಯಾಪಾರಿಗಳ ಕಣ್ಣು ಅವಳ ಗುಡಿಸಲಿನ ಮೇಲೆ ಬೀಳತೊಡಗಿತು. ಅವರ ಆ ದೃಷ್ಟಿಯಲ್ಲಿ ಮೋಹದ ಅತಿರೇಕವಿರುತ್ತಿತ್ತು. ತಮ್ಮ ಹೆಂಡಂದಿರನ್ನು ಕೂಡ ಅವರು ಅಷ್ಟೊಂದು ಮೋಹದೃಷ್ಟಿಯಿಂದ ನೋಡುತ್ತಿರಲಿಕ್ಕಿಲ್ಲ. ಅವರು ಸುಭಾಗಿಗೆ ದುಡ್ಡಿನ ಆಶೆ ತೋರಿದರು, ಸಾಮ-ದಾನ-ಭೇದೋಪಾಯಗಳನ್ನು ಯೋಜಿಸಿದರು. ಆದರೆ ಸುಭಾಗಿ ತಿರಸ್ಕಾರದಿಂದ ಅವರನ್ನು ದೂರವಿಟ್ಟಳು. "ನಾನು ಈ ನೆಲವನ್ನು ಮಾರುವುದಿಲ್ಲ. ನನ್ನ ಸ್ವಾಮಿ ನನ್ನನ್ನಿಲ್ಲಿ ಇಟ್ಟುಹೋಗಿದ್ದಾನೆ. ಆತ ನನ್ನನ್ನು ಕರೆದೊಯ್ಯಲು ಬಂದಾಗ ಆತ ನನ್ನನ್ನು ಇನ್ನೆಲ್ಲಿ ಹುಡುಕಬೇಕು? ಇದು ಗುಡಿಸಲಲ್ಲ. ಪವಿತ್ರ ಕ್ಷೇತ್ರ. ಇದನ್ನು ಮಾರಿದರೆ ಜನ್ಮಜನ್ಮಾಂತರದಲ್ಲೂ ನನಗೆ ಸುಖ ಸಿಗದು" ಎನ್ನುತ್ತಿದ್ದಳಾಕೆ. ವ್ಯಾಪಾರಿಗಳೆಲ್ಲ ಕೈ ಚೆಲ್ಲಿ ಕುಳಿತರು ಅವಳ ಮುಂದೆ.

ಆದರೆ ಸೇಠ ಜಾನಕಿದಾಸರು ಮಾತ್ರ ಕಂಗೆಡಲಿಲ್ಲ. ಅವರ ಎರಡು ಅಂಗಡಿಗಳ ನಟ್ಟನಡುವೆ ಸುಭಾಗಿಯ ಗುಡಿಸಲಿತ್ತು. ಈ ಗುಡಿಸಲಿನ ಜಾಗವಷ್ಟು ಸಿಕ್ಕರೆ ತನ್ನ ಅಂಗಡಿಗಳ ಕಲಂಕ ಮುಚ್ಚೀತು ಎಂದು ತಿಳಿದಿದ್ದ ಅವರು "ಸಾವಿರಾರು ಜನ ಸಾಯುತ್ತಾರೆ. ಈ ದರಿದ್ರ ಮುದುಕಿ ಮಾತ್ರ ಸಾಯುವುದಿಲ್ಲವಲ್ಲ" ಎಂದು ಒಳಗೊಳಗೇ ಉರಿಯುತ್ತಿದ್ದರು. ಸುಭಾಗಿಯನ್ನು ಕಂಡಾಗ ಮಾತ್ರ ಒಳ್ಳೆಯ ಮಾತುಗಳಿಂದ ಮಾತಾಡಿಸುತ್ತಿದ್ದರು.

ಒಂದು ದಿನ ಗಿಡದಿಂದ ಉದುರಿಬಿದ್ದ ಒಣ ಸೊಪ್ಪು ಕಡ್ಡಿಗಳನ್ನು ಆರಿಸಿ ತರಲೆಂದು ಸುಭಾಗಿ ಹೋದಳು. ಮಧ್ಯಾಹ್ನದ ಸಮಯ. ಸೂರ್ಯ ಪ್ರಕಾಶಿಸುತ್ತಲಿದ್ದ. ಸುಭಾಗಿ ನಿಶ್ಚಿಂತಳಾಗಿ ಕಡ್ಡಿ ಸೊಪ್ಪುಗಳನ್ನಾರಿಸುತ್ತಿದ್ದಳು. ಅಷ್ಟರಲ್ಲಿ

ಅಕಸ್ಮಾತ್ತಾಗಿ ಆಕಾಶದಲ್ಲಿ ಮೋಡ ಮುಸುಕಿತು. ತಂಪು ಗಾಳಿ ಬೀಸತೊಡಗಿತು. ಸುಭಾಗಿ ಸೊಪ್ಪು ಕಡ್ಡಿಗಳ ಗಂಟನ್ನೆತ್ತಿಕೊಂಡು ಮನೆಗೆ ಹೊರಟಳು. ಆದರೆ ಅವಳ ಮನೆ ಮೂರು ಮೈಲು ದೂರದಲ್ಲಿತ್ತು. ಮುದುಕಿಯಾದ ಅವಳು ವೇಗವಾಗಿ ಹೇಗೆ ನಡೆಯಬಲ್ಲಳು?

ಮಳೆ ಅವಳನ್ನು ಮುತ್ತಿತು, ಅವಳ ಜೀವನದ ಪರಮ ದುರ್ಭಾಗ್ಯವಾಗಿ ಅವಳ ಮೇಲೆ ಬೀಳತೊಡಗಿತು. ಒಂದು ಗಿಡದಡಿ ನಿಂತು ಅವಳು ಇನ್ನೇನು ಗತಿ ಎಂದು ಯೋಚಿಸತೊಡಗಿದಳು. ಕಡ್ಡಿ ಸೊಪ್ಪು ಎಲ್ಲ ತೊಯ್ದುಹೋದ ಮೇಲೆ ಭಟ್ಟಿಯನ್ನು ಉರಿಸುವುದು ಹೇಗೆ? ಭಟ್ಟಿ ಉರಿಯದಿದ್ದರೆ ಹೊಟ್ಟೆಯ ಗತಿ? ಅವಳು ಕೈಯೆತ್ತಿ "ದೇವರೇ, ಮಳೆ ನಿಲ್ಲಲಿ" ಎಂದು ಪ್ರಾರ್ಥಿಸಿದಳು. ಆದರೆ ಮೋಡಗಳಿಗೆ ದಯೆ ಬರಲಿಲ್ಲ. ಆಕಾಶವಾಸಿಗಳಾದ ಅವಕ್ಕೆ ಈ ಭೂವಾಸಿಗಳ ಸ್ಥಿತಿ ಏನಾದರೇನು? ಮಳೆ ಮುಸಲಧಾರೆಯಾಗಿ ಬೀಳತೊಡಗಿತು. ಅಂದಿನ ಮಳೆ ಮಳೆಯಾಗಿರದೆ ಪರಮಾತ್ಮನ ಕೋಪವಾಗಿತ್ತು. ಎಂಟು ತಾಸುಗಳ ವರೆಗೆ ಮಳೆ ಅವ್ಯಾಹತವಾಗಿ ಜಡಿಯಿತು. ಕೋಲಾಹಲವುಂಟಾಯಿತು. ಯಮುನೆಗೆ ನೆರೆ ಬಂದು ಸಾವಿರಾರು ಬಡವರ ಮನೆಗಳು ಉರುಳಿದವು. ದನಕರುಗಳು ನೂರಾರು ಸಂಖ್ಯೆಯಲ್ಲಿ ತೇಲಿಹೋದವು.

ಸುಭಾಗಿ ಒಂದು ಗಿಡವನ್ನೇರಿ ಕುಳಿತು ಈ ಅಂತಕನ ಕೋಲಾಹಲವನ್ನು ನೋಡುತ್ತಿದ್ದಳು. ನಿರಾಶೆಯಿಂದ ಅವಳ ಮನಸ್ಸು ಹತಾಶವಾಗಿತ್ತು. ಚಳಿಯಿಂದ ಮೈನಡುಗುತ್ತಿತ್ತು. ಸಮೀಪದಲ್ಲೆಲ್ಲೂ ಮನುಷ್ಯರ ಅಥವಾ ಪ್ರಾಣಿಗಳ ಸುಳಿವಿರಲಿಲ್ಲ. ಗುಡಿಸಲಿಗೆ ಹೋಗೋಣವೆಂದರೆ ಅವಳು ಕುಳಿತಿದ್ದ ಮರದ ಅರ್ಧಭಾಗ ಇನ್ನೂ ನೀರಲ್ಲಿಯೇ ನಿಂತಿತ್ತು. ತನ್ನ ಗುಡಿಸಲಿನ ಹಣೆಬರಹ ಏನಾಗಿರಬಹುದು ಎಂಬ ವಿಚಾರದಿಂದ ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. ಅವಳ ಕಣ್ಣೀರಿನ ಹನಿಗಳು ಕೆಳಗಿನ ಅಪಾರ ಜಲರಾಶಿಯಲ್ಲಿ ಬಿದ್ದು ಕರಗಿ ಹೋದವು.

ಮರುದಿನ ಪ್ರಾತಃಕಾಲ ಸುಭಾಗಿ ಗಿಡದಿಂ ಕೆಳಗಿಳಿದು ಗುಡಿಸಲಿನತ್ತ ಹೊರಟಳು. ಮಳೆಯೀಗ ನಿಂತಿತ್ತಾದರೂ ಆಕಾಶದಲ್ಲಿ ಮೋಡ ತುಂಬಿಕೊಂಡೇ ಇದ್ದವು. ಸುಭಾಗಿಯ ದೇಹ ನಡುಗುತ್ತಿತ್ತು, ಕಣ್ಣು ಕೆಂಪಾಗಿತ್ತು, ಕಾಲುಗಳಲ್ಲಿ ಶಕ್ತಿಯಿರಲಿಲ್ಲ. ಆದರೂ ಅವಳು ಸಂಜೆಯ ಹೊತ್ತಿನಲ್ಲಿ ಆಕಳು ತನ್ನ ಕರುವಿನತ್ತ ಧಾವಿಸುವಂತೆ ಗುಡಿಸಲಿನತ್ತ ಧಾವಿಸಿದಳು.

ಸುಭಾಗಿ ಚಾಂದನಿಚೌಕನ್ನು ತಲುಪಿದಾಗ ಅಲ್ಲಿಯ ದೃಶ್ಯವನ್ನು ಕಂಡು ನೆಲಕ್ಕೆ ಕುಸಿದಳು. ಅವಳ ಗುಡಿಸಲು, ಭಟ್ಟಿ ಮಾಯವಾಗಿದ್ದವು. ಅವುಗಳ ಸ್ಥಳದಲ್ಲಿ ಮಣ್ಣಿನ ರಾಶಿ, ಮಾಡಿಗೆ ಹೊದಿಸಿದ್ದ ಹುಲ್ಲಿನ ಚೂರುಗಳು ಬಿದ್ದಿದ್ದವು. ಅವಳ ಇದ್ದುಬಿದ್ದ ಆಸ್ತಿಯೆಲ್ಲ ಆ ರಾಶಿಯ ಬುಡದಲ್ಲಿ ಹೂತುಹೋಗಿತ್ತು. ಸುಭಾಗಿಯ ಅಂತರಂಗ ಕಾದ ಕಬ್ಬಿಣದ ಬರೆಯಿಟ್ಟಂತೆ ಗಾಸಿಗೊಂಡಿತು. ಆದರೆ ಅವಳು ಧೃತಿಗೆಡಲಿಲ್ಲ. ತುಸು ಹೊತ್ತಿನ ಮೇಲೆ ಜನ ಬಂದು ನೋಡುವಾಗ ಅವಳು ತನ್ನ ಗುಡಿಸಲನ್ನು ಮತ್ತೆ ಕಟ್ಟತೊಡಗಿದ್ದಳು. ಎರಡು ಮೂರು ದಿನಗಳಲ್ಲಿ ಅವಳ ಗುಡಿಸಲು ಮತ್ತು ಭಟ್ಟಿ ಮೊದಲಿನಂತೆ ತಯಾರಾದವು. ಸುಭಾಗಿಗಾದ ಆನಂದ, ತೃಪ್ತಿ ಹೇಳಲಾಸಲ್ಲ. ತೊಳೆದು ಹೋದ ತನ್ನ ಮನೆಯನ್ನು ಅವಳು ಮತ್ತೆ ಕಟ್ಟಿಕೊಂಡಿದ್ದಳು.

ಭಟ್ಟಿಯೇನೋ ತಯಾರಾಯಿತು. ಆದರೆ ಅದರ ಭಾಗ್ಯದಲ್ಲಿ ಬೆಂಕಿ ಕಾಣುವುದು ಬರೆದಿರಲಿಲ್ಲ. ಸುಭಾಗಿ ಜ್ವರದಿಂದ ಮಲಗಿದಳು. ಸೇಠ ಜಾನಕಿದಾಸರು ಬಂದು "ಸುಭಾಗಿ, ನಿನಗೇನಾಗಿದೆ?" ಎಂದು ಆತ್ಮೀಯರಂತೆ ವಿಚಾರಿಸಿದರು.

"ಮಳೆಯಲ್ಲಿ ನೆನೆದು ಜ್ವರ ಬಂದಿದೆ."

"ಹೀಗಿದ್ದರೂ ಗುಡಿಸಲು ಕಟ್ಟಿ ಶ್ರಮತೆಗೆದುಕೊಂಡೆಯಲ್ಲ? ಕಟ್ಟದಿದ್ದರೆ ಏನು ಮುಳುಗಿ ಹೋಗುತ್ತಿತ್ತು?"

ಸುಭಾಗಿ ಆಶ್ಚರ್ಯದಿಂದ ಅವರನ್ನು ನೋಡುತ್ತ "ಹಾಗೆಂದರೆ ಹೇಗೆ? ನನಗೆ ಇರಲು ಮನೆ ಬೇಡವೆ?" ಎಂದಳು.

"ನಾನು ನಿನ್ನ ನೆರೆಯವ. ನನ್ನಲ್ಲಿ ಬಂದು ಇರಬಹುದಿತ್ತು. ಹೋಗಲಿ ಬಿಡು. ಈಗಲಾದರೂ ನನ್ನ ಮನೆಗೆ ನಡೆ."

"ಹೋಗಬಹುದಲ್ಲ, ಹೋದರೆ ಈ ಮುಪ್ಪಿನ ಕಾಲದಲ್ಲಿ ನಾಲ್ಕು ದಿನ ಸುಖವಾಗಿ ಕಳೆದೀತು" ಎಂಬ ವಿಚಾರದೊಂದಿಗೆ ಸುಭಾಗಿಯ ಮನಸ್ಸಿನಲ್ಲಿ ಗಂಡನ ಕೊನೆಯ ಮಾತುಗಳೂ ನೆನಪಿಗೆ ಬಂದವು. ಅವಳು "ಸೇಠಜಿ, ಈ ಗುಡಿಸಲಿನ ಹೊರಗೆ ಹೋಗುವುದು ನಾನಲ್ಲ, ನನ್ನ ಹೆಣ" ಎಂದಳು.

"ಅಂದರೆ, ಸಾಯಲು ನಿರ್ಧರಿಸಿರುವಿಯಾ?"

"ಹಣೆಯಲ್ಲಿ ಬರೆದಿದ್ದರೆ ತಪ್ಪಿಸುವವರಾರು?"

ಕೆಲ ಕಾಲ ಸುಮ್ಮನಿದ್ದು ಬಳಿಕ ಸೇಠಜಿ ನುಡಿದರು, "ಆಗಲಿ. ನಿನ್ನಂತೆಯೆ ಆಗಲಿ. ಆದರೆ ಊಟ-ಉಪಚಾರ, ಔಷಧಿಗಳ ವ್ಯವಸ್ಥೆಯನ್ನಾದರೂ ಮಾಡಲು ಅನುಮತಿ ಕೊಡು. ಇಲ್ಲವಾದರೆ ನೆರೆಯವನಾದ ನನ್ನ ಕರ್ತವ್ಯಕ್ಕೆ ಚ್ಯುತಿ ಬಂದೀತು?"

ಸುಭಾಗಿ ಸರಳ ಹೆಂಗಸು. ಅವಳಿಗೆ ನಾಗರಿಕತೆಯ ಕಪಟ-ಮೋಸಗಳು ತಿಳಿದಿರಲಿಲ್ಲ. ಪಾಪ! ಎಂಥ ಸದ್ಗೃಹಸ್ಥರಿವರು ಎಂದುಕೊಂಡಳು ಅವಳು ತನ್ನಷ್ಟಕ್ಕೆ. ಸೇಠಜಿಯ ಮೃದು ವಚನಗಳು ಅವಳನ್ನು ಬಲೆಯಲ್ಲಿ ಕೆಡವಿದವು. ಅವಳು ಹೂಂ ಎಂದಳು. ಆದರೆ ಹೂವಿನ ರಾಶಿಯಡಿ ಮಲಗಿರುವ ಸರ್ಪದಂತೆ ಸೇಠಜಿಯ ಮೃದು ನುಡಿಗಳ ಮರೆಯಲ್ಲಿದ್ದ ಕರಾಳ ಹೃದಯ ಅವಳಿಗೆ ಕಾಣಿಸಲಿಲ್ಲ.

ಸುಭಾಗಿಯ ಆರೈಕೆ ಬಲು ಚೆನ್ನಾಗಿ ನಡೆಯಿತು. ಊಟ-ಔಷಧ ಶ್ರೀಮಂತರಂತೆ ಸಾಗಿದವು. ಸೇಠಜಿ ಆಗಾಗ ಸ್ವತಃ ಬಂದು ನೋಡಿಕೊಂಡು ಹೋಗುತ್ತಿದ್ದರು. ಹಣವನ್ನು ಧಾರಾಳವಾಗಿ ವೆಚ್ಚ ಮಾಡಿದರು. ಮುದುಕಿ ಬದುಕುಳಿದರೆ ಗುಡಿಸಲಿನ ಜಾಗವನ್ನು ತಾನಾಗಿಯೇ ಕೊಟ್ಟಾಳು, ಕೊಡದಿದ್ದರೆ ಖರ್ಚು ಮಾಡಿದ ಹಣ ಕೊಡು ಎಂದರಾಯಿತು. ಹಣವಿಲ್ಲದ ಮುದುಕಿ ಆಗ ಗತಿಯಿಲ್ಲದೆ ಕೊಡಲೇಬೇಕಾಗುವುದು ಎಂದು ಅವರು ಯೋಚಿಸಿದ್ದರು.

ಆರು ತಿಂಗಳ ನಂತರ ಸುಭಾಗಿಯ ಆರೋಗ್ಯ ಮೊದಲಿನಂತಾದಾಗ ಅವಳ ರೋಮ ರೋಮವೂ ಸೇಠಜಿಗೆ ಋಣಿಯಾಗಿತ್ತು. ಹಣ ಕೊಟ್ಟು ಅವಳ ಗುಡಿಸಲನ್ನು ಕೊಳ್ಳಲಾರದ ಸೇಠಜಿಯವರೀಗ ಅವಳನ್ನೇ ಸಹಾನುಭೂತಿಯಿಂದ ಕೊಂಡುಕೊಂಡಿದ್ದರು. ಸುಭಾಗಿ ಈಗ ಮೊದಲಿನ ನಿಶ್ಚಿಂತ, ಪ್ರಸನ್ನವದನದ ಸುಭಾಗಿಯಾಗಿರದೆ ಕೊಂಡುಕೊಂಡ ದಾಸಿಯಂತಾಗಿದ್ದಳು.

ಯಾವ ಸೇಠಜಿಯ ಎದುರು ಅವಳು ಆತ್ಮಸಮ್ಮಾನದಿಂದ ತಲೆಯೆತ್ತಿ ನಡೆಯುತ್ತಿದ್ದಳೊ ಆ ಸೇಠಜಿಯನ್ನು ಕಣ್ಣೆತ್ತಿ ಕೂಡ ಅವಳಿಂದ ಈಗ ನೋಡಲಾಗುತ್ತಿರಲಿಲ್ಲ.

ಸುಭಾಗಿ ತನ್ನ ಗುಡಿಸಲನ್ನು ಸೇಠ ಜಾನಕಿದಾಸರಿಗೆ ಮಾರಿಬಿಟ್ಟಳು ಎಂಬ ಸುದ್ದಿಯನ್ನು ಜನ ನಂಬಲಿಲ್ಲ. ಆದರೆ ಗುಡಿಸಲನ್ನು ಕಿತ್ತೆಸೆದು ಅಲ್ಲಿ ನೂತನ ಕಟ್ಟಡದ ಕೆಲಸ ಆರಂಭವಾದಾಗ ಸೇಠಜಿ ಮುದುಕಿಯನ್ನು ಗೆದ್ದರು ಎಂದು ಜನಕ್ಕೆ ತಿಳಿಯಿತು.

ಸುಭಾಗಿ ಸರಳ ಸ್ವಭಾವದವಳಾದರೂ ಮೂರ್ಖಳಾಗಿರಲಿಲ್ಲ. ಸೇಠಜಿಯ ಮಾತುಗಳಲ್ಲಿ ಇತ್ತೀಚೆಗೆ ಅವಳಿಗೆ ಸಂದೇಹವುಂಟಾಗಹತ್ತಿತು. ಏನೇ ಆಗಲಿ ಸೇಠಜಿಯ ಋಣದಿಂದ ಮುಕ್ತಳಾಗಬೇಕೆಂದು ನಿಶ್ಚಯಿಸಿ ಅವಳು ಒಂದು ದಿನ ಸೇಠಜಿಯ ಬಳಿಗೆ ಹೋಗಿ "ಸೇಠಜಿ, ನನ್ನ ಮೇಲೆ ತುಂಬ ಕೃಪೆ ಮಾಡಿದ್ದೀರಿ. ನನ್ನ ರೋಮ ರೋಮವೂ ನಿಮ್ಮನ್ನು ಆಶೀರ್ವದಿಸುತ್ತಿದೆ. ಬಡವಿಯಾದ ನಾನು ನಿಮ್ಮ ಋಣ ತೀರಿಸಲಾರೆ. ಆದರೆ ನನಗಾಗಿ ಎಷ್ಟು ಖರ್ಚು ಮಾಡಿದ್ದೀರಿ ಎಂದು ತಿಳಿದರೆ ಅಷ್ಟಷ್ಟಾಗಿ ಮುಟ್ಟಿಸಿಕೊಂಡ

ತ್ತಾದರೂ ಋಣಭಾರ ಕಡಿಮೆ ಮಾಡಿಕೊಳ್ಳ ಬೇಕೆನ್ನುತ್ತೇನೆ" ಎಂದಳು.

ಸೇಠಜಿ ತುಸು ಗಡಿಬಿಡಿಗೆ ಬಿದ್ದರು. ಆದರೆ ಮರುಕ್ಷಣದಲ್ಲೆ ಚೇತರಿಸಿಕೊಂಡು ಲೆಕ್ಕದ ಪುಸ್ತಕ ತಿರುವಿಹಾಕಿ "ನಾಲ್ಕುಪರೆನೂರು ರೂಪಾಯಿ" ಎಂದರು.

"ಆಂ?" ಸುಭಾಗಿಯ ಮುಖ ಬಿಳುಪೇರಿತು. "ಇಷ್ಟು ಖರ್ಚಾಯಿತೆ?" ಎಂದು ಅವಳು ತೊದಲುತ್ತಲೆ ಕೇಳಿದಳು.

ಮುಖ ಕೆಳಗೆ ಮಾಡಿಕೊಂಡೇ ಸೇಠಜಿ "[illegible]ಮ ಪ[illegible]ಕಿಸಿತ, ಪಾಕ್ಸ್[illegible]ಪು ಬಂದುಹೋಗುತ್ತಿದ್ದರು" ಎ[illegible]

ಆಕಾಶವೇ ಕಳಚಿ [illegible]ಸಿಸಿತು ಸುಭಾಗಿಗೆ. ದಿಙ್ಮೂಢಳಾದ ಅವಳು "ಇಂಥ ದೊಡ್ಡ ಸಾಲ ತೀರಿಸಲಾರೆ" ಎಂದಳು.

ಸ್ವಾರ್ಥದ ನಾಲಿಗೆ ಯಾವಾಗಲೂ ಮೃದುವಾಗಿರುತ್ತದೆ. ಸೇಠಜಿ ಕೋಮಲಸ್ವರದಿಂದ "ನಿನ್ನ ಗುಡಿಸಲನ್ನು ಮಾರಿಬಿಡಲ್ಲ. ಸಾಲ ತೀರುವುದು" ಎಂದರು.

ಈಗ ಸುಭಾಗಿಯ ಕಣ್ಣು ನಿಚ್ಚಳವಾಗಿ ತೆರೆಯಿತು. ಹೂವಿನ ರಾಶಿಯ ಅಡಿಯಲ್ಲಿದ್ದ ಸರ್ಪ ಅವಳಿಗೆ ಕಾಣಿಸಿತು. "ಸ್ವಲ್ಪ ನಾಲಿಗೆ ಬಿಗಿ ಹಿಡಿದು ಮಾತಾಡಿ" ಎಂದಳಾಕೆ.

ಸೇಠಜಿ ನಕ್ಕರು. ಕಟುಕರ ಹೃದಯದಲ್ಲಿಯೂ ಇರದ ನಿರ್ದಯತೆಯ ಭಾವ ಈ ನಗುವಿನಲ್ಲಡಗಿತ್ತು. ಅವರು "ಸರಿ. ನನ್ನ ಹಣ ಕೊಟ್ಟುಬಿಡು. ನನಗೇನು ಗುಡಿಸಲು ಬೇಡ" ಎಂದರು.

"ಆಗಲಿ, ನಿಮ್ಮ ಚಿಕ್ಕಾಸನ್ನೂ ಮುಟ್ಟಿಸುತ್ತೇನೆ. ಆದರೆ ಎಂದೆಂದಿಗೂ ನನ್ನ ಗುಡಿಸಲನ್ನು ನಿಮಗೆ ಮಾರುವುದಿಲ್ಲ" ಎಂದಳು ಸುಭಾಗಿ.

ಈಗ ಸೇಠಜಿಯ ಸಹನೆ ತಪ್ಪಿತು. ಅವರು ಬಿರುಸಾಗಿ "ಒಳ್ಳೇದು ನೋಡೋಣ. ಯಾವ ತಾಯಿಯ ಮಗ ನನ್ನ ಕೈ ಹಿಡಿಯುತ್ತಾನೆಂದು. ಒಂದು ತಿಂಗಳೊಳಗಾಗಿ ನಿನ್ನ ಗುಡಿಸಲಿನ ಗುರುತು ಕೂಡ ಇರುವುದಿಲ್ಲ, ತಿಳಿದುಕೊ" ಎಂದರು.

ಕೈ ನಡೆಯದವನ ಬಾಯಿ ಜೋರಾಗಿ ನಡೆಯುತ್ತದೆ. ಸುಭಾಗಿ ತನ್ನ ಶಬ್ದಕೋಶವನ್ನೆಲ್ಲ ವ್ಯಯಿಸಿ ಸೇಠಜಿಯನ್ನು ದೂರಿ ಬಯ್ದು ಹೋದಳು.

ಇದಾದ ನಾಲ್ಕನೆಯ ದಿನ ಶಂಭೂನಾಥ ಎಂಬಾತ ಬಂದು ಅವಳ ಸ್ಥಿತಿಯ ಬಗ್ಗೆ ಮರುಕ ತೋರಿಸಿದ. ಸೇಠಜಿಯ ಅನ್ಯಾಯವನ್ನು ಖಂಡಿಸಿದ.

ಅವನ ಮಾತುಗಳಿಗೆ ಮರುಳಾದ ಸುಭಾಗಿ "ನೀವೇ ತೆಗೆದುಕೊಂಡು ಬಿಡಿ. ಇಂದೇ ನಿಮಗೆ ಮಾರುತ್ತೇನೆ. ಸೇಠಜಿಯ ಋಣದಿಂದ ಮುಕ್ತಳಾಗುತ್ತೇನೆ" ಎಂದಳು.

ಆಮೇಲೆ ಬೆಲೆಯ ಚೌಕಾಸಿ ನಡೆಯಿತು. ಎಂಟು ನೂರು ರೂಪಾಯಿಗಳಿಗೆ ವ್ಯಾಪಾರ ಹೊಂದಿತು. ಸುಭಾಗಿಯ ತಲೆಯ ಮೇಲಿನ ಭಾರ ಇಳಿಯಿತು. ಆದರೂ ಅವಳ ಮನದಲ್ಲಿ ಅಪಾರ ವೇದನೆ ಮೂಡಿತು.

ಅಂದು ರಾತ್ರಿ ಅವಳಿಗೆ ನಿದ್ದೆಯೆ ಬರಲಿಲ್ಲ. ಮಾರನೆಯ ದಿನ ಅವಳು ಕಚೇರಿಗೆ ಹೋಗಿ ಕಾಗದಪತ್ರಗಳಿಗೆ ಹೆಬ್ಬೆರಳೊತ್ತಿ ಬಂದಳು.

ಅಂದು ಸಂಜೆ ಅವಳು ಸೇಠಜಿಯ ಅಂಗಡಿಗೆ ಹೋಗಿ ದೂರದಲ್ಲಿ ಭಿಕ್ಷುಕಿಯಂತೆ ನಿಂತಳು. ಅವಳೀಗ ಜೀವನ್ಮೃತಳಾಗಿ ಬಿಟ್ಟಿದ್ದಳು. ಮುಂಜಾನೆ ಅವಳೊಂದು ಮನೆಯ ಒಡತಿಯಾಗಿದ್ದಳು. ಈಗ ಈ ಜಗತ್ತಿನಲ್ಲಿ ಮನೆಯಿಲ್ಲದ, ಯಾವ ಬಂಧುವೂ ಇಲ್ಲದ ಅನಾಥಳಾಗಿದ್ದಳು. ಅವಳನ್ನು ಕಂಡ ಸೇಠಜಿಯ ಕಣ್ಣಲ್ಲಿ ನೀರು ಬಂತು. ಅಹಂಕಾರಕ್ಕೆ ಸಾವಿರಗಟ್ಟಲೆ ಶತ್ರುಗಳಿರುತ್ತಾರೆ. ಆದರೆ ನಮ್ರತೆಗೆ ಒಬ್ಬ ಶತ್ರುವೂ ಇರುವುದಿಲ್ಲ. ಗುಬ್ಬಿಯ ಮೇಲೆ ಯಾರಾದರೂ ಬ್ರಹ್ಮಾಸ್ತ್ರ ಪ್ರಯೋಗಿಸುತ್ತಾರೆಯೆ? ಸೇಠಜಿ

ಲೋಭಿಯಾಗಿದ್ದರು ನಿಜ. ಆದರೆ ಅಂಥ ಪತಿತರೂ ಅಧಮರೂ ಆಗಿರಲಿಲ್ಲ. ಅವರು 'ಸುಭಾಗಿ' ಎಂದು ಕರೆದರು.

ಸುಭಾಗಿ ಬಗಲಲ್ಲಿದ್ದ ಚೀಲವನ್ನು ಅವರ ಕಾಲಬಳಿ ಸುರುವಿ "ತೆಗೆದುಕೊಳ್ಳಿ ನಿಮ್ಮ ಹಣ. ೪೫೦ ಎಂದಿದ್ದಿರಿ, ೮೦೦ ರೂಪಾಯಿಗಳಿವೆ. ಹೆಚ್ಚಿನದನ್ನು ನಿಮ್ಮ ಹಣದ ಬಡ್ಡಿ ಎಂದು ತಿಳಿದುಕೊಳ್ಳಿರಿ" ಎಂದಳು.

ಎಂಥ ವಿಪರೀತವಿದು ! ಸೇಠಜಿ ಲಕ್ಷಾಧೀಶರು. ನಾಲ್ಕು ನೂರು ಐವತ್ತು ರೂಪಾಯಿಗಳನ್ನು ಬಿಡಲಾರದೆ ಹೋದರು. ಸುಭಾಗಿ ದರಿದ್ರಳು, ಗಡಿಗೆಯ ಚೂರುಗಳೋ ಎನ್ನುವಂತೆ ಮೂರುನೂರು ಐವತ್ತು ರೂಪಾಯಿಗಳನ್ನು ಹೆಚ್ಚಾಗಿ ಎಸೆದಿದ್ದಾಳೆ. ತಮ್ಮ ಪತನದ ಅನುಭವವಾದ ಸೇಠಜಿಯ ಮುಖ ಲಜ್ಜೆಯಿಂದ ಕೆಂಪಾಗಿ ಹೋಯಿತು. ಸುಭಾಗಿಯ ಚರಣಗಳನ್ನು ಮುಟ್ಟಿ ಕ್ಷಮೆ ಕೇಳಲೆಂದು ಅವರೆದ್ದರು. ಆದರೆ ಸುಭಾಗಿ ಅಲ್ಲಿರಲಿಲ್ಲ. ಅವಳು ತಂದಿದ್ದ ರೂಪಾಯಿಗಳು ಮಾತ್ರ ಅಲ್ಲಿ ಹರಡಿಬಿದ್ದಿದ್ದವು.

ಮಧ್ಯರಾತ್ರಿಯ ಹೊತ್ತಿಗೆ ಸುಭಾಗಿ ಕಳ್ಳನಂತೆ ತನ್ನ ಗುಡಿಸಲನ್ನು ಹೊಕ್ಕಳು. ರಾಣಿಯಂತೆ ಪ್ರವೇಶಿಸುತ್ತಿದ್ದ ಗುಡಿಸಲನ್ನು ಈಗವಳು ಪರದೇಶಿಯಂತೆ ಹೊಕ್ಕಿದ್ದಳು. ಅವಳು ದೀಪ ಹಚ್ಚಿ ಗುಡಿಸಲಿನಲ್ಲಿದ್ದ ಒಂದು ಮಡಿಕೆ, ಒಂದು ತಟ್ಟೆ, ಹರಕು ಕಂಬಳಿಗಳನ್ನು ಎದೆಗವಚಿಕೊಂಡು ಅತ್ತಳು.

ಮುಂಜಾನೆ ಜನ ನೋಡಿದಾಗ ಗುಡಿಸಲು ಇತ್ತು. ಅದರಲ್ಲಿಯ ಸಾಮಾನುಗಳು ಇದ್ದವು. ಆದರೆ ಸುಭಾಗಿ ಮಾತ್ರ ಇರಲಿಲ್ಲ. ಶಂಭುನಾಥನ ಮೂಲಕ ಗುಡಿಸಲನ್ನು ಕೊಂಡನಂತರ ಪಶ್ಚಾತ್ತಾಪದಿಂದ ದಗ್ಧರಾಗಿದ್ದ ಸೇಠಜಿ ಅವಳನ್ನು ಹುಡುಕಿದರು. ಈ ಗುಡಿಸಲು ತನಗೊಂದು ಕಲಂಕ ಎಂದು ಅವರಿಗೆ ಅನಿಸತೊಡಗಿತ್ತು. ಆದರೆ ಅವರ ಯತ್ನ ವ್ಯರ್ಥವಾಯಿತು, ಸುಭಾಗಿಯ ಪತ್ತೆ ಹತ್ತಲಿಲ್ಲ.

ಸುಭಾಗಿ ಅಡವಿಗೆ ಓಡಿದ್ದಳು. ಗೃಹ ಸ್ವಾಮಿಯಾಗಿ ವರ್ಷಗಟ್ಟಲೆ ಕಳೆದ ಸ್ಥಳದಲ್ಲಿ ಅನಾಥಳಂತೆ ಇರಲಾಗದೆ ಅವಳು ಅಡವಿಗೆ ಓಡಿ ಬಂದಿದ್ದಳು. ಅವಳ ಹೃದಯ ಭಗ್ನವಾಗಿತ್ತು. ಮನುಷ್ಯ ಸಂಪರ್ಕವೇ ಅವಳಿಗೆ ಬೇಡವಾಗಿತ್ತು.

ತನ್ನ ದುರ್ದೈವವನ್ನೂ ಮನುಷ್ಯಸ್ವಭಾವದ ಕ್ರೌರ್ಯವನ್ನೂ ಕುರಿತು ಯೋಚಿಸುತ್ತ ಅಳುತ್ತ ನಡೆದ ಸುಭಾಗಿಗೆ ಅಡವಿಯಲ್ಲೊಂದು ಜೀರ್ಣ ಗುಡಿಸಲು ಸಿಕ್ಕಿತು. ಕಂದಮೂಲಗಳನ್ನು ತಿನ್ನುತ್ತಾ ಅವಳಲ್ಲಿ ಒಂದು ತಿಂಗಳ ಕಾಲವನ್ನು ನೂಕಿದಳು. ಇಲ್ಲಿ ಅವಳಿಗೆ ಯಾರ ತಾಪವೂ ಇರಲಿಲ್ಲವಾದರೂ ಮನೆಯ ಮೋಹ ಇನ್ನೂ ಕಾಡಿಸುತ್ತಲೇ ಇತ್ತು.

ಕೊನೆಗೊಮ್ಮೆ ಮೋಹವನ್ನು ಜಯಿಸಲಾರದೆ ಅವಳು ರಾತ್ರಿಯ ಹೊತ್ತಿನಲ್ಲಿ ದಿಲ್ಲಿಗೆ ಮರಳಿದಳು. ಯಾರೂ ತನ್ನನ್ನು ನೋಡದಿರಲಿ ಎಂದು ಮಧ್ಯರಾತ್ರಿಯ ನಂತರ ತನ್ನ ಗುಡಿಸಲಿನ ಬಳಿ ಬಂದಳು.

ಆದರೆ- ಅಲ್ಲಿ ಅವಳ ಗುಡಿಸಲಿರಲಿಲ್ಲ. ಅಲ್ಲಿ ಹೊಸ ಕಟ್ಟಡವೊಂದರ ಗೋಡೆಗಳು ಎದ್ದು ನಿಂತಿದ್ದವು. ಅದು ಕಟ್ಟಡವಾಗದೆ ಅವಳ ಸುಖದ ಸಮಾಧಿಯಾಗಲಿತ್ತು. ಸುಭಾಗಿ ಒಮ್ಮೆ ಚೀರಿದವಳೆ ನೆಲಕ್ಕುರುಳಿದಳು.

ಮಾರನೆಯ ದಿನ ಆ ಗೋಡೆಗಳ ಬಳಿ ಅವಳ ಹೆಣ ಬಿದ್ದಿತ್ತು. ಅವಳ ಪ್ರತಿಜ್ಞೆ ಸಾಂಗವಾಗಿತ್ತು. ಅವಳು ಈ ಲೋಕವನ್ನು ಬಿಟ್ಟಳೇ ಹೊರತು ತನ್ನ ಗುಡಿಸಲನ್ನು ಬಿಡಲಿಲ್ಲ.

ಅವಳೀಗ ತನ್ನ ಗಂಡ, ತನ್ನ ಗುಡಿಸಲು, ತನ್ನ ಭಟ್ಟಿ ಹೋದ ಲೋಕಕ್ಕೆ ಹೋಗಿದ್ದಳು.

ಹೊಸ ದಿಲ್ಲಿಯಲ್ಲಿ ಉರಿಯುತ್ತಿದ್ದ ಹಳೆ ದಿಲ್ಲಿಯ ಕೊನೆಯ ದೀಪ ನಂದಿಹೋಯಿತು.

ಮುಂದೆ ಎಷ್ಟೊ ದಿನಗಳ ವರೆಗೆ ಸೇಠ ಜಾನಕಿದಾಸರು ಮನೆಯ ಹೊರಗೆ ಬರಲೇ ಇಲ್ಲ. *



ದೀಪಾವಳಿಗಾಗಿ ಒಂದು ಪುರಾಣ ಕಥೆ

# ಮಹಾದೇವ ಪಗಡೆ ಆಡಿದಾಗ

ಸೋಮದೇವ.

ಕೌರವರ ಮಾವ ಶಕುನಿಯ ತಂತ್ರದಿಂದ ಮೋಸದ ಲೆತ್ತ (ಪಗಡೆ) ದಾಟದಲ್ಲಿ ಪಾಂಡವರು ಸೋತು ವನವಾಸ, ಅಜ್ಞಾತವಾಸಗಳಿಗೆ ಹೋಗಬೇಕಾಗಿ ಬಂದ ಕಥೆ ಎಲ್ಲರಿಗೂ ಗೊತ್ತಿದೆ. ಈ ಮೋಸದ ಆಟದ ಕಾರಣದಿಂದಲೇ ನಾನಾವಿಧವಾದ ಕಷ್ಟನಷ್ಟಗಳಿಗೆ ಗುರಿಯಾದ ನಳ-ದಮಯಂತಿಯರ ಕಥೆಯೂ ಸುಪರಿಚಿತವಾಗಿದೆ. ಸನತ್ಕುಮಾರ ಸಂಹಿತೆಯಲ್ಲಿ ಕೈಲಾಸಪತಿ ಶಂಕರ ಮತ್ತು ಅವನ ಪತ್ನಿ ಪಾರ್ವತಿಯರಲ್ಲಿ ನಡೆದ ಲೆತ್ತದಾಟದ ಕುತೂಹಲಕಾರಿಯಾದ ಕಥೆಯೊಂದಿದೆ. ಇಂದಿಗೂ ಕೂಡ ಕರ್ನಾಟಕ, ರಾಜಸ್ಥಾನ ಮತ್ತು ಇನ್ನೂ ಅನೇಕ ಕಡೆಗಳಲ್ಲಿ ದೀಪಾವಳಿಯ ನಂತರ ಕಾರ್ತಿಕ ಪ್ರತಿಪದೆಯ ದಿನ ಲೆತ್ತದಾಟ ಆಡುವುದು ಶುಭದಾಯಕ ಎಂದು ತಿಳಿಯುತ್ತಾರೆನ್ನುವುದರಲ್ಲಿಯೆ ಈ ಕಥೆಯ ವಿಶೇಷತೆಯಿದೆ. ಈ ಕಥೆ ಇಂತಿದೆ:-

ದೇವಾಧಿದೇವ ಶಂಕರನು ಸುಂದರವಾದೊಂದು ಲೆತ್ತದ ದಾಳವನ್ನು ತಯಾರಿಸಿ ಪಾರ್ವ

ತಿಗೆ ಹೇಳಿದ: "ಬಾ ಪ್ರಿಯೆ, ಒಂದೆರಡು ಆಟಗಳನ್ನಾಡೋಣ. ಒಂದು ಇಡೀ ಜಗತ್ತನ್ನೆ ಪಣವಾಗಿಡುತ್ತಿದ್ದೇನೆ."

'ಹೂಂ' ಎಂದು ಪಾರ್ವತಿ ಆಡಿ ಗೆದ್ದಳು. ಶಂಕರ ಇನ್ನೊಂದು ಜಗತ್ತನ್ನು ಪಣವಾಗಿಟ್ಟ. ಅದನ್ನೂ ಪಾರ್ವತಿ ಗೆದ್ದಳು. ಮೂರನೆಯ ಜಗತ್ತನ್ನೂ ಶಂಕರ ಸೋತ. ಆ ಮೇಲೆ ಕೈಲಾಸನಾಥ ತನ್ನ ಪ್ರೀತಿಯ ನಂದಿ, ಸರ್ಪ, ತಲೆಯಲ್ಲಿ ಧರಿಸಿದ್ದ ಚಂದ್ರ —ಎಲ್ಲರನ್ನೂ ತನ್ನ ಬಳಿ ಇದ್ದ ಎಲ್ಲವನ್ನೂ ಒಂದೊಂದಾಗಿ ಸೋತ. ಪೂರ್ಣ ಪರಾಜಿತನಾದ ಶಿವನು ಗಂಗಾ ತೀರಕ್ಕೆ ಬಂದು ವಿಚಾರಮಗ್ನನಾಗಿ ಕುಳಿತ.

ಅಷ್ಟರಲ್ಲಿ ಆ ಮಾರ್ಗವಾಗಿ ಬಂದ ಆತನ ಎರಡನೆಯ ಮಗ ಕಾರ್ತಿಕೇಯನು ತಂದೆಯ ವಿಚಾರಮಗ್ನ ಮುಖವನ್ನು ಕಂಡು ವಿಷಯವೇನೆಂದು ಆಗ್ರಹದಿಂದ ವಿಚಾರಿಸಿದ. ಶಿವ ಪ್ರೇಮದಿಂದ ಆತನನ್ನಾಲಿಂಗಿಸಿಕೊಂಡು "ಮಗು, ನಿನ್ನ ತಾಯಿಯಿಂದ ನಾನು ಸೋತೆ. ಆದ್ದರಿಂದ ಈಗ ಅರಣ್ಯಕ್ಕೆ ಹೊರಟಿದ್ದೇನೆ" ಎಂದ.

"ಅಂ! ಅಮ್ಮನಿಂದ ಸೋತೆಯಾ? ಯಾವಾಗ? ಹೇಗೆ?" ಆಶ್ಚರ್ಯದಿಂದ ಕಾರ್ತಿಕೇಯ ಕೇಳಿದ.

"ಮಗು, ನಿನ್ನ ತಾಯಿ ಲೆತ್ತದಾಟದಲ್ಲಿ ನನ್ನನ್ನು ಸೋಲಿಸಿದ್ದಾಳೆ. ಅದಕ್ಕಾಗಿಯೇ ಸಂಸಾರವನ್ನು ತ್ಯಜಿಸಿ ಅಡವಿಗೆ ಹೋಗುತ್ತಿದ್ದೇನೆ."

ಕಾರ್ತಿಕೇಯ, "ನಾನೂ ಬರುತ್ತೇನೆ, ಅಡವಿಯಲ್ಲಿ ನಿಮಗೆ ಏನಾದರೂ ಸಹಾಯ ಮಾಡಲು" ಎಂದು ಬೇಡಿಕೊಂಡ. ಶಿವ ಬೇಡವೆಂದ. ಆಗ ಕಾರ್ತಿಕೇಯ "ಹಾಗಾದರೆ ನನಗೆ ಲೆತ್ತದಾಟ ಕಲಿಸಿ" ಎಂದು ಕೇಳಿಕೊಂಡ.

ಶಂಕರ ಆತನಿಗೆ ಲೆತ್ತದಾಟ ಕಲಿಸಿದ. ಆ ಮೇಲೆ ಕಾರ್ತಿಕೇಯ ತಾಯಿಯ ಬಳಿಗೆ ಹೋಗಿ ಏನೂ ಗೊತ್ತಿಲ್ಲದವನಂತೆ "ಅಮ್ಮಾ, ಅಪ್ಪ ಎಲ್ಲಿ? ನಂದಿ, ಸರ್ಪ ಮುಂತಾದವುಗಳೆಲ್ಲ ಅವನನ್ನು ಬಿಟ್ಟು ಇಲ್ಲೇಕೆ?" ಎಂದು ಕೇಳಿದ.

ಪಾರ್ವತಿ ಅವನಿಗೆ ನಡೆದದ್ದನ್ನೆಲ್ಲ ಹೇಳಿ ಖಿನ್ನ ಸ್ವರದಲ್ಲಿ ತಾನು ಶಿವನನ್ನು ತಡೆಯಲಾರದೆ ಹೋದೆ ಎಂದಳು.

ಆಗ ಮಗ, "ಅಮ್ಮಾ, ನಾವೂ ಆಡೋಣ" ಎಂದ. ಲೆತ್ತದಾಟದಲ್ಲಿ ಅದೃಷ್ಟ ಅವನಿಗೆ ಒಲಿಯಿತು. ಆತ ತಂದೆ ಸೋತದ್ದನ್ನೆಲ್ಲ ಗೆದ್ದದ್ದಲ್ಲದೆ ಪಾರ್ವತಿಯ ಕೆಲ ವಸ್ತುಗಳನ್ನೂ ಗೆದ್ದುಕೊಂಡ. ಆತ ಅವನ್ನೆಲ್ಲ ಶಿವನಿಗೊಯ್ದು ಕೊಟ್ಟ. ಶಿವ ತುಂಬಾ ಪ್ರೀತನಾದ

ಈಗ ಪಾರ್ವತಿ ದುಃಖಿತಳಾದಳು. ತನ್ನ ಪ್ರೀತಿಯ ಕುವರ ಗಣೇಶನ ಬಳಿಗೆ ಹೋಗಿ ಅವಳು ಅವನಿಗೆ ಎಲ್ಲವನ್ನೂ ಹೇಳಿ, ಶಂಕರ ತಿರುಗಿ ಬರುವ ನಂಬಿಕೆಯಿರದ್ದರಿಂದ ತನ್ನ ಸಂದಿಗ್ಧ ಪರಿಸ್ಥಿತಿಯನ್ನು ವಿವರಿಸಿದಳು.

"ಅಮ್ಮಾ, ನನಗೆ ಈ ಲೆತ್ತದಾಟ ಕಲಿಸು. ನಾನು ನಿಜವಾಗಿಯೂ ನಿನ್ನ ಆಜ್ಞಾಧಾರಕ ಮಗನೇ ಆಗಿದ್ದರೆ ಅಪ್ಪ ಮತ್ತು ತಮ್ಮನಿಂದ ಎಲ್ಲವನ್ನೂ ಗೆದ್ದುಕೊಂಡು ನಿನಗೆ ತಂದೊಪ್ಪಿಸುವೆ" ಎಂದು ಗಣೇಶ ಹೇಳಿದ.

ಪಾರ್ವತಿ ಅವನಿಗೆ ಆಟವನ್ನು ಕಲಿಸಿದಳು. ಗಣಪತಿ ಹೋಗಿ ತಂದೆ ಮತ್ತು ತಮ್ಮನಿಗೆ ತನ್ನ ಮನೋಗತವನ್ನು ತಿಳಿಸಿದ.

ಶಂಕರ ಮತ್ತು ಕಾರ್ತಿಕೇಯ ಅವನ ಆಹ್ವಾನವನ್ನು ಸ್ವೀಕರಿಸಿದರು. ಆದರೆ ದುರ್ದೈವದಿಂದ ಅವರಿಬ್ಬರೂ ಆಟದಲ್ಲಿ ಸೋತರು. ಗಣಪತಿ ಎಲ್ಲವನ್ನೂ ತಾಯಿಗೆ ತಂದೊಪ್ಪಿಸಿದ. ಅದರಿಂದ ಪಾರ್ವತಿಗೆ ಸಂತೋಷವಾದರೂ ಅವಳು, "ಹೋಗಿ ಶಿವನನ್ನು ಸಮಾಧಾನಪಡಿಸಿ ಅವನನ್ನು ಕೈಲಾಸಕ್ಕೆ ಕರೆದುಕೊಂಡು ಬಾ" ಎಂದಳು.

ಗಣಪತಿ ತನ್ನ ವಾಹನವಾದ ಮೂಷಕವನ್ನೇರಿ ಗಂಗಾತೀರಕ್ಕೆ ನಡೆದ.

ಅಷ್ಟರಲ್ಲಿ ಆ ಕಾಲದ ಸಂಚಾರಿ ಪತ್ರಿಕೆಯಾಗಿದ್ದ ನಾರದಮುನಿ ಈ ಕಥೆಯನ್ನೆಲ್ಲ ದೇವಾಧಿದೇವ ವಿಷ್ಣುವಿಗೆ ಹೇಳಿದ್ದ. ವಿಷ್ಣು ಶಿವನ ಬಳಿಗೆ ಬಂದು ಮೂರನೆಯ ದಾಳವೊಂದನ್ನು ಸೃಷ್ಟಿಸಿ ಲೆತ್ತದಾಟದ ಹೊಸ ಮಾದರಿಯನ್ನು

ತಯಾರಿಸಲು ಸೂಚಿಸಿದ. ಈ ಮೂರನೆಯ ದಾಳದಲ್ಲಿ ತಾನಿರುವೆನೆಂದೂ ಆಟ ಯಾವಾಗಲೂ ಶಂಕರನಿಗೆ ಅನುಕೂಲವಾಗಿರುವಂತೆ ನೋಡಿಕೊಳ್ಳುವೆನೆಂದೂ ಹೇಳಿದ. ಅದೇ ಸಮಯದಲ್ಲಿ ಗಣೇಶನ ವಾಹನವಾದ ಮೂಷಕವನ್ನು ಅಂಜಿಸಲು ನಾರದ ರಾವಣನಿಗೆ ಹೇಳಿದ. ರಾವಣ ಹೋಗಿ ಬೆಕ್ಕಿನಂತೆ ಮಿಯಾವ್ ಎಂದು ಕೂಗಿದ. ಮೂಷಕ ಅಂಜಿ ಓಡಿತು. ಆದರೆ ಗಣೇಶ ಕಂಗೆಡದೆ ವಿಷ್ಣು ಮತ್ತು ಶಂಕರನ ಕಾರಸ್ಥಾನದ ತಾಣಕ್ಕೆ ಬಂದ. ವಿಷ್ಣು ಲೆತ್ತದ ಮೂರನೆಯ ದಾಳದಲ್ಲಿ ಲೀನವಾಗುವುದನ್ನಾತ ಕಂಡ. ತಂದೆಗೆ ನಮಸ್ಕರಿಸಿ "ಕೈಲಾಸದಲ್ಲಿ ಅಮ್ಮ ನಿಮ್ಮ ಹಾದಿ ಕಾಯುತ್ತಿದ್ದಾಳೆ" ಎಂದ. "ನೀವು ಬಾರದೆಹೋದರೆ ಅವಳು ಪ್ರಾಣ ತ್ಯಜಿಸಲೂಬಹುದು" ಎಂದು ತಿಳಿಸಿದ.

"ಸರಿ. ನನ್ನ ಗಣಗಳು ಮೂರು ದಾಳಗಳಿರುವ ಹೊಸ ಆಟವನ್ನು ಹುಡುಕಿದ್ದಾರೆ. ನಿನ್ನ ಅಮ್ಮ ನನ್ನೊಡನೆ ಆಡಲಿ" ಎಂದ ಶಂಕರ.

"ಆಗಲಿ. ಅಮ್ಮ ಖಂಡಿತವಾಗಿಯೂ ಆಡುತ್ತಾಳೆ. ದಯವಿಟ್ಟು ಕೈಲಾಸಕ್ಕೆ ಬನ್ನಿ."

ಎಲ್ಲರೂ ಕೈಲಾಸಕ್ಕೆ ಬಂದರು. ಪಾಪ! ಗಣೇಶ ಮಾತ್ರ ಬಲು ನಿಧಾನವಾಗಿ ನಡೆಯುವವನಾದ್ದರಿಂದ ಹಿಂದೆ ಉಳಿದ.

"ದೇವಾ, ಈಗ ನನ್ನ ಪಣಕ್ಕೆ ಏನಿಡುತ್ತೀರಿ? ನಿಮ್ಮದೆಲ್ಲವನ್ನೂ ನಾನು ಮೊದಲೇ ಗೆದ್ದಿದ್ದೇನೆ" ಪಾರ್ವತಿ ನಗುತ್ತಲೇ ಹೇಳಿದಳು.

ನಾರದ ಶಿವನ ಸಹಾಯಕ್ಕೆ ಬಂದ. ತನ್ನ ಕೌಪೀನ ಮತ್ತು ವೀಣೆಗಳನ್ನು ಶಂಕರನ ಕೈಗಿತ್ತು ಅವನ್ನೆ ಪಣವಾಗಿಡಲು ಹೇಳಿದ.

ಆಟ ಶುರುವಾಯಿತು. ವಿಷ್ಣು ತನ್ನ ತಂತ್ರ ಹೂಡಿದ. ಶಿವ ತನ್ನದೆಲ್ಲವನ್ನೂ ಗೆದ್ದುಕೊಂಡ.

ಇಷ್ಟರಲ್ಲಿ ಗಣೇಶ ಅಲ್ಲಿಗೆ ಬಂದು ತಲುಪಿದ. "ಅಮ್ಮ, ಆಡಬೇಡ. ಈ ದಾಳದಲ್ಲಿ ವಿಷ್ಣು ಅಡಗಿದ್ದಾನೆ" ಎಂದು ಕೂಗಿದ.

ಪಾರ್ವತಿಗೆ ಸಿಟ್ಟು ಬಂತು. ಅವಳು ಎಲ್ಲರನ್ನೂ ಶಪಿಸಿದಳು. ಶಂಕರನಿಗೆ, "ದೇವಾ, ನೀನು ಅರಿಯದ ಸ್ತ್ರೀಯನ್ನು ವಂಚಿಸಲು ಪ್ರಯತ್ನಿಸಿದೆಯಾದ್ದರಿಂದ ನಿನ್ನ ಜಡೆಗಟ್ಟಿದ ಕೂದಲು ಒಬ್ಬ ಸ್ತ್ರೀಯನ್ನು ಧರಿಸುವಂತಾಗಲಿ. ಅವಳ ಭಾರದಿಂದ ನಿನ್ನ ತಲೆ ಯಾವಾಗಲೂ ಬಾಗಿರುವಂತಾಗಲಿ" ಎಂದು ಶಾಪವಿತ್ತಳು. ನಾರದನಿಗೆ "ನೀನು ಎಲ್ಲೆಡೆಯಲ್ಲಿಯೂ ಗತ್ತುಗಾರಿಕೆ ನಡೆಸುತ್ತ ಸಂಚರಿಸುವಿ. ನಿನಗೆ ಸ್ತ್ರೀಸೌಖ್ಯ ಎಂದೆಂದಿಗೂ ಸಿಗದಿರಲಿ" ಎಂದು ಶಾಪವಿತ್ತಳು. "ನಿನಗೆ ಪತ್ನೀವಿಯೋಗವಾಗಲಿ" ಎಂದು ವಿಷ್ಣುವನ್ನು ಶಪಿಸಿದಳು. ಯಾವಾಗಲೂ ಬಾಲಕನಾಗಿಯೆ ಇರುವ ಶಾಪ ಕಾರ್ತಿಕೇಯನ ಪಾಲಿಗೆ ಬಂತು. ಗಣೇಶನ ವಾಹನವನ್ನು ಬೆದರಿಸಿ ಓಡಿಸಿದ್ದಕ್ಕಾಗಿ ರಾವಣನಿಗೆ ವಿಷ್ಣುವಿನ ಕೈಯಿಂದ ಮರಣಹೊಂದಬೇಕಾದ ಶಾಪ ತಟ್ಟಿತು.

ಆದರೆ ನಾರದ ಹೇಗೊ ಪಾರ್ವತಿಯನ್ನು ಸಂತಯಿಸಿದ. "ದೇವಿ, ನಿನ್ನ ಶಾಪಗಳು ನಿಜವಾಗಿಯೂ ವರಗಳೇ ಆಗಿವೆ. ನೀನು ಎಲ್ಲರನ್ನೂ ಅನುಗ್ರಹಿಸಬೇಕು ಎಂದು ನನ್ನ ನಮ್ರ ವಿನಂತಿ" ಎಂದು ಬೇಡಿಕೊಂಡ.

ದೇವಿ ಎಲ್ಲರನ್ನೂ ಅನುಗ್ರಹಿಸಿದಳು. ವೇದ, ಸ್ಮೃತಿ ಮೊದಲಾದ ಪವಿತ್ರ ಗ್ರಂಥಗಳಲ್ಲಿ ಲೆತ್ತದಾಟವನ್ನು ನಿಷೇಧಿಸಿದ್ದರೂ ಕಾರ್ತಿಕ ಪ್ರತಿಪದೆಯ ದಿನ ಲೆತ್ತದಾಟದಲ್ಲಿ ಗೆದ್ದವರಿಗೆಲ್ಲ ಇಡೀ ವರ್ಷ ಶುಭದಾಯಕವಾಗಲಿ ಎಂದು ನುಡಿದು ಅವಳು ಮಾನವ ಜಾತಿಯನ್ನು ಅನುಗ್ರಹಿಸಿದಳು. *





ಪ್ರಾಣಿಗಳ ಶೀತನಿದ್ರೆಯು ವಿಜ್ಞಾನಿಗಳಿಗೆ ಹೊಸ ಸಂಗತಿಗಳನ್ನು ಕಲಿಸುತ್ತಿದೆ

# ಕುಂಭಕರ್ಣ ಸಮಸ್ಯೆ

ಗಂಗಾಧರ

ವರ್ಷಕ್ಕಾರು ತಿಂಗಳು ನಿದ್ದೆ ಮಾಡುತ್ತಿದ್ದ ಕುಂಭಕರ್ಣನು ವಾಲ್ಮೀಕಿಯ ಕಲ್ಪನಾ ವಿಲಾಸವೆಂದು ಹೇಳಲಾಗದು. ಮಾನವರಲ್ಲಿ ಅಲ್ಲದಿದ್ದರೂ ಚಳಿ ದೇಶಗಳ ಪ್ರಾಣಿಗಳಲ್ಲಿ ಹಲವು ಜಾತಿಗಳು ಇಂಥ ದೀರ್ಘ ನಿದ್ರೆಯಲ್ಲಿ ಮಗ್ನವಾಗಿರುತ್ತವೆ. ಕರಡಿ, ಅಳಿಲಿಲಿ, ಗಬ್ಬಿಲ, ಹ್ಯಾಮ್‌ಸ್ಟರ್ ಮುಂತಾದವು ಚಳಿಗಾಲದ ದೀರ್ಘ ಮಾಸಗಳನ್ನು ನಿದ್ದೆಯಲ್ಲಿ ಕಳೆಯುತ್ತವೆ. ಫ್ರಾನ್ಸಿನ ಸಂಶೋಧಕರಾದ ಕೈಸರ್ ಎಂಬವರು ೧೧೪ ದಿನಗಳ ವರೆಗೆ ನಿರಂತರವಾಗಿ ನಿದ್ರಿಸಿದ ಒಂದು ಅಳಿಲಿಲಿಯ ಉದಾಹರಣೆಯನ್ನು ವರದಿ ಮಾಡಿದ್ದಾರೆ.

ಪ್ರಾಣಿ ವಿಜ್ಞಾನಿಗಳಷ್ಟೇ ಅಲ್ಲ, ವೈದ್ಯ ವಿಜ್ಞಾನಿಗಳೂ ಹೀಗೆ ದೀರ್ಘ ನಿದ್ರೆ ಮಾಡುವ ಪ್ರಾಣಿಗಳನ್ನು ಕುತೂಹಲದಿಂದ ಅಭ್ಯಸಿಸುತ್ತಿದ್ದಾರೆ. ಶರೀರದ ವರ್ತನೆಯ ಅನೇಕ ರಹಸ್ಯಗಳಿಗೆ ಇದರಲ್ಲಿ ಉತ್ತರವನ್ನು ಕಾಣಬಹುದೆಂಬ ಆಶೆ ಅವರಿಗಿದೆ. ಏಕೆಂದರೆ ಈ ದೀರ್ಘ ನಿದ್ರೆ ಬರಿ ನಿದ್ರೆಯಲ್ಲ. ಆ ಕಾಲದಲ್ಲಿ ಈ ಪ್ರಾಣಿಗಳ ಶರೀರ ವ್ಯಾಪಾರಗಳಲ್ಲಿ ಸಂಪೂರ್ಣ ಬದಲಾವಣೆಯಾಗುತ್ತದೆ. ಈ ಅವಧಿಯಲ್ಲಿ ಅವು

ಏನನ್ನೂ ತಿನ್ನುವುದಿಲ್ಲ; ಅವುಗಳ ಶರೀರ ತಣ್ಣಗಾಗಿ ಹೊರಗಿನ ವಾತಾವರಣದ ಉಷ್ಣತಾಮಾನಕ್ಕಿಳಿದುಬಿಡುತ್ತದೆ; ಅವು ಉಸಿರಾಡಿಸುವುದನ್ನು ಹೆಚ್ಚುಕಡಿಮೆ ನಿಲ್ಲಿಸಿಯೇಬಿಡುತ್ತವೆ; ಅವುಗಳ ಹೃದಯದ ಬಡಿತವೂ ನಿಂತುಹೋದಂತಾಗುತ್ತದೆ. ಒಂದು ಮಾತಿನಲ್ಲಿ, ಅವು ಸಾಯದೆನೇ ಸಾವಿಗೆ ಅತಿ ಹತ್ತಿರವಾಗುತ್ತವೆ.

ಅದೊಂದು ತರಹದ 'ಯೋಗನಿದ್ರೆ'. ಅದರಲ್ಲಿ ಮಗ್ನವಾದ ಪ್ರಾಣಿಗಳ ಮೇಲೆ ಪ್ರಯೋಗ ಮಾಡಿದ ವಿಜ್ಞಾನಿಗಳು ಆಶ್ಚರ್ಯಕರ ವರದಿಗಳನ್ನು ಮಾಡಿದ್ದಾರೆ. ಜಾಗೃತಾವಸ್ಥೆಯಲ್ಲಿದ್ದಾಗ ಅಂಗಾರಾಮ್ಲ ವಾಯುವು ಇತರ ಪ್ರಾಣಿಗಳಂತೆ ಈ ಪ್ರಾಣಿಗಳಿಗೂ ಮಾರಕವಾಗುತ್ತದೆ. ಆದರೆ ತಮ್ಮ ಚಳಿಗಾಲದ ನಿದ್ರೆಯಲ್ಲಿ ಮಗ್ನವಾದ ಗಬ್ಬಿಲ (ತೊಗಲಬಾವಲಿ) ಗಳನ್ನೂ ಮಾರ್ಮೊಟ್ ಗಳನ್ನೂ (ಅಳಿಲಿನ ಜಾತಿಯ ಒಂದು ಪ್ರಾಣಿ) ಶುದ್ಧ ಅಂಗಾರಾಮ್ಲವಾಯು ತುಂಬಿದ ಕೋಣೆಯಲ್ಲಿಟ್ಟು ನಾಲ್ಕು ತಾಸುಗಳ ಮೇಲೆ ಹೊರ ತೆಗೆದಾಗ ಅವುಗಳಿಗೆ ಏನೇನೂ ಆಗಲಿಲ್ಲ.

ನೀರಲ್ಲಿ ಮುಳುಗಿಸಿದರೂ ಅವುಗಳಿಗೇನೂ ಆಗುವುದಿಲ್ಲ. ನಿದ್ರಾಮಗ್ನವಾದ ಮುಳ್ಳುಹಂದಿಗಳನ್ನು ಅರ್ಧಗಂಟೆ ಕಾಲ ನೀರಲ್ಲಿ ಮುಳುಗಿಸಿದಾಗ ಏನೂ ಅಪಾಯವಾಗಲಿಲ್ಲ

ಕಾರಣವಿಷ್ಟೇ. ಅವು ಆ ಕಾಲದಲ್ಲಿ ಉಸಿರಾಡಿಸುವುದೇ ಇಲ್ಲ. ನೀರಲ್ಲಿ ಮುಳುಗಿದ ಪ್ರಾಣಿಗಳು ಉಸಿರುಗಟ್ಟಿ ತಾನೆ ಸಾಯುವುದು. ಉಸಿರುಗಟ್ಟುವುದೆಂದರೆ ಪ್ರಾಣವಾಯು (ಅಮ್ಲಜನಕ) ದೊರೆಯದಿರುವುದು. ಉಸಿರನ್ನೇ ಆಡಿಸದಿರುವಾಗ ಪ್ರಾಣವಾಯು ಬೇಕೇ ಇಲ್ಲವಲ್ಲ.

ಪ್ರಾಣಿಗಳೇಕೆ ಹೀಗೆ ನಿಶ್ಚೇಷ್ಟಿತವಾಗಿ ನಿದ್ದೆ ಮಾಡುತ್ತವೆ? ಚಳಿಗಾಲದಲ್ಲಿ ಆಹಾರ ದುರ್ಲಭವಾಗಿರುತ್ತದೆ. ವಿಶೇಷವಾಗಿ ಸಸ್ಯಾಹಾರಿ ಮತ್ತು ಕ್ರಿಮಿಕೀಟಗಳನ್ನು ತಿಂದು ಬದುಕುವ ಪ್ರಾಣಿಗಳಿಗೆ ಈ ಆಹಾರ ಕೊರತೆ ಹೆಚ್ಚು ತೀವ್ರವಾಗುತ್ತದೆ. ಮಾನವರಾದರೆ ತಮಗೆ ಬೇಕಾದ ಆಹಾರ ಕೂಡಿಸಿಡುವರು. ಪ್ರಾಣಿಗಳು ಹಾಗಲ್ಲ, ಅವು ಸಿಕ್ಕಿದ ಆಹಾರದಿಂದಲೇ ತೃಪ್ತರಾಗಬೇಕು.

ಪ್ರಾಣಿಗಳಲ್ಲಿ ಆಹಾರವು ದೇಹಪೋಷಣೆಗೆ ಬೇಕಾದಷ್ಟೇ ದೇಹವನ್ನು ಬೆಚ್ಚಗಾಗಿಡುವುದಕ್ಕೂ ಬೇಕಾಗುತ್ತದೆ. ವಾಸ್ತವಿಕವಾಗಿ ನಾವು ತಿನ್ನುವ ಆಹಾರದಲ್ಲಿ ಬಹುಭಾಗವು ನಮ್ಮೊಳಗಿರುವ 'ಒಲೆ'ಯನ್ನು ಉರಿಸಲಿಕ್ಕೇ ಹೋಗುತ್ತದೆ. ಚಳಿಗಾಲದಲ್ಲಿ ಹೊರಗಿನ ವಾತಾವರಣ ತಣ್ಣಗಾದಾಗ ನಮ್ಮ ಶರೀರದ ಉಷ್ಣತೆಯನ್ನು ಕಾಪಾಡಲು ಬೆಚ್ಚನ್ನ ಬಟ್ಟೆಗಳಲ್ಲದೆ ಹೆಚ್ಚು ಆಹಾರವೂ ಬೇಕಾಗುತ್ತದೆ. ಆದರೆ ಚಳಿಗಾಲದಲ್ಲಿ ಪ್ರಾಣಿಗಳಿಗೆ ಬೆಚ್ಚನ್ನ ಬಟ್ಟೆಯಂತೂ ಇಲ್ಲ, ಆಹಾರ ದೊರಕುವುದು ಕೂಡ ಕಷ್ಟವಾಗುತ್ತದೆ.

ಈ ಸಮಸ್ಯೆ ಬಿಸಿ ರಕ್ತದ ಪ್ರಾಣಿಗಳನ್ನು ಮಾತ್ರ ವಿಶೇಷವಾಗಿ ಪೀಡಿಸುವಂಥದು. ಹಾವಿನಂಥ ತಂಪು ರಕ್ತದ ಪ್ರಾಣಿಯ ಮೈ ಸುತ್ತಲ ಪರಿಸರದಷ್ಟೆ ತಂಪಾಗಿರುತ್ತದೆ. ಆದ್ದರಿಂದ ಅವುಗಳಿಗೆ ಕಡಿಮೆ ಆಹಾರ ಸಾಲುತ್ತದೆ. ಚಳಿಗಾಲದಲ್ಲಿ ಅವು ಚಟುವಟಿಕೆಗಳನ್ನೂ ಕಡಿಮೆಮಾಡಿಕೊಳ್ಳುತ್ತವೆ. ನಾವೂ ತಂಪು ರಕ್ತದ ಪ್ರಾಣಿಗಳಾಗಿದ್ದರೆ ದೀರ್ಘಕಾಲದ ವರೆಗೆ ತೀರ ಕಡಿಮೆ ಆಹಾರದಿಂದ, ಅಥವಾ ಅನೇಕ ದಿನಗಳ ವರೆಗೆ ಆಹಾರವೇ ಇಲ್ಲದೆ ಬದುಕಬಹುದಾಗಿತ್ತು.

ಚಳಿಗಾಲದಲ್ಲಿ ಆಹಾರ ಕೊರತೆಯಾಗುವಾಗ ಕೆಲ ಸಸ್ತನಿಗಳು ಹೆಚ್ಚು ಬಿಸಿ ಪ್ರದೇಶಗಳಿಗೆ ವಲಸೆ ಹೋಗುತ್ತವೆ. ಕೆಲವು ಶೀತ ನಿದ್ರೆಯ ತಂತ್ರವನ್ನು ಅನುಸರಿಸುತ್ತವೆ. ಅರ್ಥಾತ್ ತಾತ್ಕಾಲಿಕವಾಗಿ ಅವು ಉರಗಗಳ ಹಾಗೆ ತಮ್ಮನ್ನು ತಂಪು ರಕ್ತದ ಪ್ರಾಣಿಗಳಾಗಿ ಮಾರ್ಪಡಿಸಿಕೊಳ್ಳುತ್ತವೆನ್ನಬಹುದು.

ಆದರೂ ಅವುಗಳಿಗೆ ಸ್ವಲ್ಪವಲ್ಲ ಸ್ವಲ್ಪ ಆಹಾರ ಬೇಕೇಬೇಕು. ಇಲ್ಲದಿದ್ದರೆ ಅವುಗಳ ಚರ್ಮ

ಒಣಗಿ ಅವು ಉಪವಾಸ ಸಾಯಬೇಕಾದೀತು. ಅದಕ್ಕಾಗಿ ಶೀತ ನಿದ್ರೆ ಮಾಡುವ ಪ್ರಾಣಿಗಳು ಶರತ್ಕಾಲದಲ್ಲಿ ಸಾಧ್ಯವಾದಷ್ಟು ತಿಂದು ಶರೀರ ವನ್ನು ಕೊಬ್ಬಿಸಿಕೊಂಡು ಆಮೇಲೆ ನಿದ್ರೆ ಹೋಗುತ್ತವೆ. ಕರಡಿಗಳೂ ಅಳಿಲಿಲಿಗಳೂ ಇದಕ್ಕೆ ಉದಾಹರಣೆ. ನಿದ್ರಾಕಾಲದಲ್ಲಿ ಅವು ಈ ಶೇಖರಗೊಂಡ ಕೊಬ್ಬನ್ನು ವಿನಿಯೋಗಿಸಿ ಕೊಂಡು ಜೀವಂತವಾಗಿರುತ್ತವೆ.

ಆಹಾರ ಕೊರತೆಯನ್ನು ನಿದ್ರೆಯಿಂದ ನೀಗಿಸಿ ಕೊಳ್ಳುವ ಮಾನವರೂ ಇದ್ದಾರೆಂಬುದು ಆಶ್ಚರ್ಯ ಕರವಾದರೂ ಸತ್ಯ. ಸೈಬೀರಿಯಾದ ಕಲ ಪ್ರದೇಶಗಳಲ್ಲಿ ಚಳಿಗಾಲದ ನಿದ್ದೆಗಾಗಿ ಒಂದು ಸಾರ್ವಜನಿಕ ಶಾಲೆಯೆ ಇದೆ. ತಮ್ಮ ಹತ್ತಿರ ಇದ್ದಬಿದ್ದ ರೊಟ್ಟಿಯನ್ನೂ ಕಟ್ಟಿಗೆಯನ್ನೂ ಹಿಡಿದುಕೊಂಡು ಚಳಿಗಾಲದ ಆರಂಭದಲ್ಲಿ ಹಳ್ಳಿಗರೆಲ್ಲ ಹೋಗಿ ಸೇರಿಕೊಳ್ಳುತ್ತಾರೆ. ಅಲ್ಲಿ ಒಬ್ಬನ ಹೊರತು ಎಲ್ಲರೂ ನಿದ್ದೆ ಹೋಗುತ್ತಾರೆ. ಆ ಒಬ್ಬ ಅಗ್ಗಿಷ್ಟಿಗೆ ಉರಿಸುತ್ತಿರುತ್ತಾನೆ.

ಇಪ್ಪತ್ತನಾಲ್ಕು ತಾಸುಗಳ ನಂತರ ಆತ ಅವ ರನ್ನು ಎಬ್ಬಿಸುತ್ತಾನೆ. ಅವರೆಲ್ಲ ತಾವು ತಂದ ರೊಟ್ಟಿಯಲ್ಲಿ ಒಂದು ತುಣುಕನ್ನು ತಿಂದು ಪುನಃ ನಿದ್ದೆಹೋಗುತ್ತಾರೆ. ಮಾತ್ರ ಅಂದು ಜಾಗರಣೆ ಯನ್ನು ಮತ್ತೊಬ್ಬ ವಹಿಸಿಕೊಳ್ಳುತ್ತಾನೆ. ಹೀಗೆ ಅವರು ಅತಿ ಕಡಿಮೆ ಆಹಾರದಿಂದ ಚಳಿಗಾಲ ವನ್ನು ನೂಕುತ್ತಾರೆ.

ಇದು ನಿಜವಾದ ಶೀತನಿದ್ರೆಯಲ್ಲ. ಶೀತ ನಿದ್ರೆ ಮಾಡುವ ಪ್ರಾಣಿಗಳು ಬಾಹ್ಯ ಚಟುವಟಿ ಕೆಗಳನ್ನಷ್ಟೇ ಅಲ್ಲ, ಒಳಗಿನ ಚಟುವಟಿಕೆಗ ಳನ್ನೂ ಶೂನ್ಯಪ್ರಾಯವಾಗಿ ಮಾಡಿಕೊಳ್ಳು ತ್ತವೆ. ಈ ವರ್ಗದಲ್ಲಿ ಮುಳ್ಳುಹಂದಿ, ಕೆಲ ಜಾತಿಯ ಇಲಿಗಳು, ಗಬ್ಬಿಲಗಳು, ಕೆಲಮಟ್ಟಿಗೆ ಕರಡಿಗಳು, ಹಮಿಂಗ್‌ಬರ್ಡ್ ಮತ್ತು ಬ್ಲಿಪರ್ ವಿಲ್ ಪಕ್ಷಿಗಳು ಸೇರುತ್ತವೆ.

ಶೀತನಿದ್ರಾಸಕ್ತ ಪ್ರಾಣಿಗಳ ಉಸಿರಾಟ ನಿಲ್ಲು ತ್ತದೆ. ಹೃದಯದ ಬಡಿತ ತೀರ ಮಂದವಾಗು ತ್ತದೆ. ಪಚನಕ್ರಿಯೆಯೂ ಸ್ಥಗಿತವಾಗುತ್ತದೆ. ಜೀವಂತವಾಗಿರಲು ಅವು ಆಗಲೇ ಶರೀರದಲ್ಲಿ ಶೇಖರಿಸಿಟ್ಟ ಕೊಬ್ಬನ್ನು ವಿನಿಯೋಗಿಸುವುದ ರಿಂದ ಪಚನಕ್ರಿಯೆಯ ಪ್ರಶ್ನೆಯೇ ಉದ್ಭವಿಸುವು ದಿಲ್ಲವಲ್ಲ.

ಪ್ರಜ್ಞಾವಸ್ಥೆಯಿಂದ ಶೀತನಿದ್ರಾವಸ್ಥೆಗೆ ಪ್ರಾಣಿಯು ಸಾಗುವ ಕ್ರಮ ನಾಟಕೀಯವಾ ಗಿದೆ. ಹ್ಯಾಮ್‌ಸ್ಟರ್ ತನ್ನ ಶರೀರದ ಉಷ್ಣತೆ ಯನ್ನು ಸುಮಾರಾಗಿ ನೀರು ಹೆಪ್ಪುಗಟ್ಟುವಷ್ಟು ತಣ್ಣಗಾಗಿ ಮಾಡಿಕೊಂಡುಬಿಡುತ್ತದೆ. ಅದರ ಹೃದಯದ ಬಡಿತ ಮಿನಿಟಿಗೆ ೩೫೦-೫೫೦ ಇದ್ದುದು ಬರಬರುತ್ತ ೪-೧೦ ರಷ್ಟಕ್ಕಿಳಿದು ಹೋಗುತ್ತದೆ. ಉಸಿರಾಟ ಮಿನಿಟಿಗೆ ೧೦ ಕ್ಕಿಂತ ಕಡಿಮೆಯಾಗಿ ಹೋಗುತ್ತದೆ. ಆದರೆ ವಾತಾ ವರಣದ ಉಷ್ಣತೆ ಹೆಪ್ಪುಗಟ್ಟುವ ಬಿಂದುವಿಗಿಂ ತಲೂ ಕೆಳಗಿಳಿದರೆ ಅವರ ಆಂತರಿಕ ಶರೀರ ಕ್ರಿಯೆ ಒಮ್ಮೆಲೆ ಇಮ್ಮಡಿ ಮುಮ್ಮಡಿಯಾಗುವು ದಲ್ಲದೆ ಅದು ಎಚ್ಚರಗೊಳ್ಳುವುದೂ ಉಂಟು.

ಶೀತನಿದ್ರೆಗಳೆಯುವ ಪ್ರಾಣಿ ಮುದುಡಿ ಕೊಂಡು ತನ್ನ ಮುಖವನ್ನು ಬಾಲದಡಿ ತುರು ಕಿ ಚಂಡಿನಂತೆ ಬಿದ್ದಿರುತ್ತದೆ. ಅದರ ರೋಮು ಗಳು ನಿಗುರಿಕೊಂಡು ಶರೀರದ ಉಷ್ಣತೆ ಹೊರಹೋಗುವುದನ್ನು ತಡೆಗಟ್ಟುತ್ತವೆ.

ಈ ಅಚೇತನಾವಸ್ಥೆಯಲ್ಲಿ ಪ್ರಾಣಿಗೆ ರೋಗ ಭಯ, ವಯಸ್ಸಾಗುವಿಕೆ ಮತ್ತು ಇತರ ಅಪಾಯ ಗಳಿರುವುದಿಲ್ಲ. ಆ ಸಮಯದಲ್ಲಿ ಅವುಗಳ ಮೇಲೆ ಮಾರಣಾಂತಿಕ ಪ್ರಮಾಣದಲ್ಲಿ ರೇಡಿಯೊ ವಿಕಿರಣವನ್ನು ಪ್ರಯೋಗಿಸಿದರೂ ಅವು ಸಾಯು ವುದಿಲ್ಲ. ಕ್ಯಾನ್ಸರ್ ವ್ರಣಗಳನ್ನು ಅವುಗಳಿಗೆ ಕಸಿ ಮಾಡಿದರೂ ಕ್ಯಾನ್ಸರ್ ಉಂಟಾಗದು. ಆದರೆ ಅವು ಎಚ್ಚೆತ್ತ ಮೇಲೆ ಇವುಗಳ ಪರಿಣಾಮ ಒಮ್ಮೆಲೆ ಕಾಣಿಸಿಕೊಂಡು ಅವು ಸಾಯುವುವು.

ಧ್ರುವ ಪ್ರದೇಶದ ಹೆಣ್ಣು ಕರಡಿ ಶೀತ ನಿದ್ರೆ ಯಲ್ಲೇ ಮರಿ ಹಾಕುತ್ತದೆ. ಶರತ್ಕಾಲದಲ್ಲೇ ಅದು ಹಿಮ ಕೆರೆದು ಅದರಲ್ಲಿ ತನ್ನನ್ನು ಹುದು

ಗಿಸಿಕೊಂಡು ನಿದ್ದೆ ಹೋಗುತ್ತದೆ. ಜನವರಿ ಸುಮಾರಿಗೆ ಅಲ್ಲೇ ಅವಕ್ಕೆ ಮರಿ ಹುಟ್ಟುತ್ತದೆ. ಆರು ತಿಂಗಳ ನಿರಾಹಾರ ನಿದ್ರೆಯನ್ನದು ಮಾಡುತ್ತದೆ. ಈ ಅವಧಿಯಲ್ಲಿ ಮರಿಗಳು ಅದರ ಮೊಲೆಯುಣ್ಣುತ್ತಲೇ ಇರುತ್ತವೆ!

ಶೀತ ನಿದ್ರೆಯಲ್ಲಿರುವ ಪ್ರಾಣಿಯನ್ನು ಒಮ್ಮೆಲೆ ಎಚ್ಚರಿಸಿದರೆ ಅದು ಸತ್ತು ಹೋಗಬಹುದು. ಅದು ಎಚ್ಚರಗೊಳ್ಳುವ ಕ್ರಿಯೆ ವಿಶಿಷ್ಟ ಕ್ರಮವನ್ನನುಸರಿಸುತ್ತದೆ. ಹ್ಯಾಮ್‌ಸ್ಟರಿಗೆ ಎಚ್ಚರಗೊಳ್ಳಲು ಮೂರು ತಾಸು ಹಿಡಿಯುತ್ತದೆ. ಮೊದಲು ಅದರ ಉಸಿರಾಟ ಜೋರಾಗುತದೆ. ಅನಂತರ ಹೃದಯದ ಬಡಿತ ತೀವ್ರವಾಗುತ್ತದೆ. ಈ ಎರಡೂ ಕ್ರಿಯೆಗಳು ಸಾಮಾನ್ಯ ಜಾಗೃತಾವಸ್ಥೆಗಿಂತ ಇಮ್ಮಡಿ ವೇಗದಿಂದ ಸಾಗುತ್ತವೆ. ಉಸಿರಾಟ ಮಿನಿಟಿಗೆ ೧೦೦ ರಷ್ಟು, ಹೃದಯ ಬಡಿತ ೫೫೦ ರಷ್ಟು ಆಗಬಹುದು. ಶರೀರದ ಉಷ್ಣತೆ ೮೬ ಡಿಗ್ರಿಗೇರುತ್ತದೆ. ಒಂದು ಗಂಟೆಯ ನಂತರ ಉಷ್ಣತೆ ೯೮ ಡಿಗ್ರಿಗೇರಿ ಶ್ವಾಸ ಮತ್ತು ಹೃದಯಕ್ರಿಯೆ ಸಾಮಾನ್ಯಸ್ಥಿತಿಗೆ ಇಳಿಯುತ್ತವೆ.

ಶೀತ ನಿದ್ರೆಯ ಸಮಸ್ಯೆಗಳಲ್ಲಿ ಒಂದು ಕಗ್ಗಂಟೆಂದರೆ ಕೆಲವು ಪ್ರಾಣಿಗಳು ಹಾಗೆ ಮಾಡಿದರೂ ಉಳಿದವೇಕೆ ಮಾಡುವುದಿಲ್ಲ ಎಂಬುದು. ಮುಳ್ಳುಹಂದಿ ಶೀತನಿದ್ರೆ ಮಾಡುತ್ತದೆ. ಆದರೆ ಅದೇ ಜಾತಿಯ ಮೋಲ್ ಮತ್ತು ಶ್ರೂ ಹಾಗೆ ಮಾಡುವುದಿಲ್ಲ. ಅಳಿಲಿಲಿ ಶೀತ ನಿದ್ರೆ ಮಾಡಿದರೂ ಅದೇ ವರ್ಗದ ಹಲವು ಇಲಿ ಹೆಗ್ಗಣಗಳು ಮಾಡುವುದಿಲ್ಲ. ಬಸವನ ಹುಳಗಳು ತಮ್ಮ ಚಿಪ್ಪಿನ ಬಾಯಿಯನ್ನು ಶರೀರದಿಂದ ಜಿನುಗಿದ ಸುಣ್ಣದ ಪದಾರ್ಥದಿಂದ ಮುಚ್ಚಿ ನಿದ್ದೆಹೋಗುತ್ತವೆ. ಆದರೆ ಎರೆಹುಳಗಳು ನಿದ್ದೆ ಮಾಡುವುದಿಲ್ಲ. ಎಲ್ಲಕ್ಕೂ ಹೆಚ್ಚಾಗಿ ಶರೀರದ ಉಷ್ಣತೆಯನ್ನು ಸದಾ ಒಂದೇ ಮಾನದಲ್ಲಿ ಇರಿಸುವ ಅಂಗಗಳುಳ್ಳ ಬಿಸಿ ನೆತ್ತರ ಪ್ರಾಣಿಗಳಲ್ಲಿ ಶೀತನಿದ್ರೆ ಮಾಡಬೇಕಾದಾಗ ಒಮ್ಮೆಗೇ ಆ ಅಂಗಗಳು ಏಕೆ ಕೆಲಸ ಮಾಡುವುದನ್ನು ನಿಲ್ಲಿಸುತ್ತವೆ ಎಂಬುದು ದೊಡ್ಡ ಸಮಸ್ಯೆ.

ಈ ಸಮಸ್ಯೆಯನ್ನು ಅನ್ವೇಷಿಸುವಾಗ ವಿಜ್ಞಾನಿಗಳಿಗೆ ಹೊಸ ವಿಚಾರಗಳು ತಿಳಿದುಬಂದವು. ಸಾಮಾನ್ಯವಾಗಿ ಶೀತನಿದ್ರೆ ಮಾಡದ ಹೆಗ್ಗಣಗಳನ್ನೂ ಕೃತಕರೀತಿಯಿಂದ, ಸಾಯದಂತೆ ಶೈತ್ಯಗೊಳಿಸಲು ಸಾಧ್ಯವಿದೆಯೆಂದು ಗೊತ್ತಾಯಿತು.

ಹೆಗ್ಗಣವನ್ನು ಶೈತ್ಯಗೊಳಿಸುತ್ತ ಹೋದರೆ ಉಷ್ಣತೆ ಒಂಭತ್ತು ಡಿಗ್ರಿ ಸೆಂಟಿಗ್ರೇಡಿಗೆ ಇಳಿದಾಗ ಅದು ಉಸಿರಾಟ ನಿಲ್ಲಿಸುತ್ತದೆ. ಆರು ಡಿಗ್ರಿಗೆ ಬಂದಾಗ ಅದರ ಹೃದಯಸ್ಪಂದನ ನಿಲ್ಲುತ್ತದೆ. ಮತ್ತೂ ನಾಲ್ಕು ಡಿಗ್ರಿ ಕಡಿಮೆ ಮಾಡಿದರೂ ಅದನ್ನು ಪುನರುಜ್ಜೀವನಗೊಳಿಸಲು ಸಾಧ್ಯವಿದೆ.

ಈ ಪ್ರಯೋಗಗಳ ಪರಿಣಾಮವಾಗಿ ಶಸ್ತ್ರಕ್ರಿಯೆಯಲ್ಲಿ ಕ್ರಾಂತಿಕಾರಕ ಉಪಾಯಗಳು ಕೃತಿಗಿಳಿಯುತ್ತಿವೆ. ವಿಶೇಷವಾಗಿ ಮಿದುಳಿನ ಶಸ್ತ್ರಕ್ರಿಯೆಯಲ್ಲಿ ಮಾನವಶರೀರವನ್ನು ತೀರ ತಂಪುಗೊಳಿಸಲಾಗುತ್ತಿದೆ. ಇದರಿಂದ ರಕ್ತಸ್ರಾವವೂ ಮಿದುಳಿಗೆ ಪ್ರಾಣವಾಯುವಿನ ಅಗತ್ಯವೂ ಕಡಿಮೆಯಾಗುವವು.

ಪ್ರಾಣಿಗಳನ್ನು ಸಜೀವವಾಗಿ ಶೈತ್ಯೀಕರಿಸುವುದು ಸುಲಭ; ಆದರೆ ಅವುಗಳನ್ನು ಪುನರುಜ್ಜೀವಿಸುವುದು ಕಷ್ಟ. ಸಾವಕಾಶವಾಗಿ ಇಡೀ ಶರೀರವನ್ನು ಬಿಸಿ ಮಾಡಿದರೆ ಅಂಗಾಂಗಗಳ ಪ್ರಾಣವಾಯು ಬೇಡಿಕೆ ಒಮ್ಮೆಲೆ ಹೆಚ್ಚಾಗಿ ಮೆಲ್ಲಗೆ ಉಜ್ಜೀವನಗೊಳ್ಳುತ್ತಿರುವ ಹೃದಯಕ್ಕೆ ಅದನ್ನು ಪೂರೈಸಲಾಗದೆ ಪ್ರಾಣಿ ಸತ್ತುಹೋಗುತ್ತದೆ. ವಿಶೇಷವಾಗಿ ಮಿದುಳು ಧಕ್ಕೆಗೊಳಗಾಗುತ್ತದೆ.

ಆದರೆ ಶೀತನಿದ್ರಿತ ಪ್ರಾಣಿಗಳ ಪುನರುತ್ಥಾನ ಕ್ರಮವನ್ನು ಪರಿಶೀಲಿಸಿ ಇದಕ್ಕೊಂದು ಉಪಾಯ ಕಂಡುಹಿಡಿದಿದ್ದಾರೆ. ಹೃದಯ ಪ್ರದೇಶವನ್ನು ಮೊದಲು ಬೆಚ್ಚಗೆ ಮಾಡುವುದೇ ಆ ಉಪಾಯ. ಆಗ ಹೃದಯಕ್ರಿಯೆ ಮೊದಲು ಹೆಚ್ಚಾಗುತ್ತದೆ. ಇತರ ಅವಯವಗಳ ಬೇಡಿಕೆ ಹೆಚ್ಚುವ ಮೊದಲೇ ಮಿದುಳಿಗೆ ರಕ್ತ (ಮತ್ತು ಪ್ರಾಣವಾಯು)

ಒದಗಿ ಪ್ರಾಣಿ ನಿರಪಾಯವಾಗಿ ಎಚ್ಚರಗೊಳ್ಳುತ್ತದೆ.

ಶರೀರಶಾಸ್ತ್ರದಲ್ಲಿ ಪ್ರಗತಿ ಸಾಧಿಸುವ ದೃಷ್ಟಿಯಿಂದ ಅಮೇರಿಕ, ಫ್ರಾನ್ಸ್, ಸ್ವೀಡನ್, ಫಿನ್ಲಂಡ್ ಮತ್ತು ರಶಿಯದಲ್ಲಿ ಶೀತನಿದ್ರೆಯನ್ನು ಆಳವಾಗಿ ಅಭ್ಯಸಿಸುತ್ತಿದ್ದಾರೆ. ಜೀವಕಣಗಳನ್ನು ತೀವ್ರ ಶೈತ್ಯದಲ್ಲಿರಿಸಿ ದೀರ್ಘಕಾಲ ಕಾಪಾಡಬಹುದೆಂದು ಕಂಡುಬಂದಿದೆ. ಹೆಗ್ಗಣದ ಅಂಡ (ಓವರಿ) ಗಳನ್ನು ತೆಗೆದು —೧೯೦ ಡಿಗ್ರಿ ಸೆಂಟಿಗ್ರೇಡ್‌ನಷ್ಟು ಶೈತ್ಯದಲ್ಲಿ ಒಂದು ವರ್ಷದವರೆಗೆ ಇಟ್ಟು ಮತ್ತೆ ಅದನ್ನು ಬೆಚ್ಚಗೆ ಮಾಡಿ ಜೀವಂತ ಹೆಗ್ಗಣದ ಚರ್ಮದಡಿಗೆ ಕಸಿ ಮಾಡಿದಾಗ ಅದು ಯಥಾಪ್ರಕಾರ ತನ್ನ ಕೆಲಸ ಮಾಡಿತು.

ಇಡೀ ಪ್ರಾಣಿಯನ್ನು ವರ್ಷಾನುಗಟ್ಟಳೆ ಹೀಗೆ ಶೈತ್ಯಾವಸ್ಥೆಯಲ್ಲಿ ಜೀವಂತವಿಡಲು ಬಂದೀತೆ? ಅದು ಸಾಧ್ಯವಾದರೆ, ಇಂದು ನೀವು ಶೀತನಿದ್ರೆಯನ್ನು ಅಪ್ಪಿಕೊಂಡು ಒಂದು ಸಾವಿರ ವರ್ಷಗಳ ನಂತರ ನಿಮ್ಮ ಮೊ- ಮ್ಮೊ- ಮ್ಮೊ- ಮ್ಮೊ-ಮ್ಮಕ್ಕಳಿಂದ ಎಚ್ಚರಗೊಳಿಸಲ್ಪಟ್ಟು ಇನ್ನೊಂದು ಯುಗದ ಆಗುಹೋಗುಗಳ ಪ್ರತ್ಯಕ್ಷದರ್ಶಿಗಳಾಗಬಲ್ಲಿರಿ. ಎರಡು ಶತಮಾನಗಳ ಹಿಂದೆಯೆ ಜಾನ್ ಹಂಟರ್ ಎಂಬವನು ಹೀಗೆ ಅನಂತ ಕಾಲದವರೆಗೆ ಆಯುಷ್ಯವನ್ನು ಹೆಚ್ಚಿಸಬಹುದೆಂದು ಒಂದು ಸಿದ್ಧಾಂತವನ್ನು ಮಂಡಿಸಿದ್ದ. ಶೀತನಿದ್ರೆಯಲ್ಲಿ ಪ್ರಾಣಿಯು ಬೆಳೆಯುವುದನ್ನೂ ಮುಪ್ಪಾಗುವುದನ್ನೂ ಹೆಚ್ಚುಕಡಿಮೆ ಪೂರ್ತಿ ನಿಲ್ಲಿಸುತ್ತದೆ. ಅದರಿಂದ ಅದು ಮುಪ್ಪಾಗಿ ಸಾಯಬೇಕಾಗಿಲ್ಲೆಂದು ಅವನ ತರ್ಕವಾಗಿತ್ತು. ಆದರೆ ಈ ವರೆಗಿನ ಪ್ರಯೋಗಗಳಿಂದ ಪ್ರಾಣಿಗಳನ್ನು ಹೀಗೆ ವರ್ಷಗಟ್ಟಳೆ ನಿದ್ರೆಯಲ್ಲಿಡಲು ಸಾಧ್ಯವಾಗಿಲ್ಲ.

ಆದರೆ ವಿಜ್ಞಾನಿಗಳಿನ್ನೂ ಪ್ರಯತ್ನಗಳನ್ನು ಬಿಟ್ಟಿಲ್ಲ. ಅವರು ಕೊನೆಗೂ ಯಶಸ್ವಿಯಾಗಬಹುದು. ಹಾಗಾದರೆ ಪ್ರಾಚೀನ ಋಷಿಗಳು ತಪಸ್ಸಮಾಧಿಯಲ್ಲಿ ಸಾವಿರಗಟ್ಟಳೆ ವರ್ಷ ಬದುಕುತ್ತಿದ್ದರೆಂಬ ಮಾತು ಕಲಿಕಾಲದಲ್ಲೂ ಸತ್ಯಪ್ರಪಂಚಕ್ಕಿಳಿಯಬಹುದು. *



ಈ ಭೂಮಿಯ ಮೇಲೆ ಜೀವಿಸಿರುವುದಕ್ಕೆ ದೇವರಿಗೆ ಕೊಡುವ ಬಾಡಿಗೆ ಅಂದರೆ ಸುತ್ತಮುತ್ತಲೂ ಇರುವ ಜನರಿಗೆ ಬೇಕಾಗಿರುವುದೊಂದೇ.

—ಟಿ. ಪಿ. ಕೈಲಾಸಂ

( ಸಂಗ್ರಹ : 'ರಾಗು' )



ಬ್ಯಾಂಕಿಂಗ್ ಮತ್ತು ಸಾರ್ವಜನಿಕ ಕಾರ್ಯಗಳಲ್ಲಿ ಅವರು ಪಳಗಿದ ಕೈ

# ಶ್ರೀ ತೋನ್ಸೆ ಅನಂತ ಪೈ

ಸಾವೆಂ

ಉದ್ಯೋಗದಲ್ಲಿ ಮಿತಿಮೀರಿದ ಯೋಗ್ಯತೆ-ಓವರ್ ಕ್ವಾಲಿಫಿಕೇಶನ್—ಎಂಬುದೊಂದಿದೆ. ಮೆಟ್ರಿಕ್ಯುಲೇಟನು ಸಂಭಾಳಿಸಬಹುದಾದ ನೌಕರಿಗೆ ಎಂ. ಎ. ಇದ್ದವನು ಬರುತ್ತೇನೆಂದರೂ ಬುದ್ಧಿವಂತರು ಅವನನ್ನಾರಿಸಿಕೊಳ್ಳುವುದಿಲ್ಲ. ರಾಜಕಾರಣದಲ್ಲಿಯೂ-ವಿಶೇಷವಾಗಿ ತರುಣರಿಗೆ— ಅತ್ಯರ್ಹತೆ ಒಂದು ತೊಡಕಾಗುವುದುಂಟೇ ಎಂದು ಟಿ. ಎ. ಪೈಯವರನ್ನು ಕುರಿತು ನಾನು ಕೇಳಿದ ಈ ಕಥೆಯಿಂದ ಸಂಶಯ ಬರುತ್ತದೆ.

೧೯೫೭ರ ಚುನಾವಣೆಯಲ್ಲಿ ಅವರಿಗೆ ಮೈಸೂರು ವಿಧಾನ ಸಭೆಗೆ ನಿಲ್ಲಲು ಕಾಂಗ್ರೆಸ್ಸು ಏಕೆ ಒತ್ತಾಯಿಸಲಿಲ್ಲ ಎಂಬುದಕ್ಕೆ ಒಬ್ಬ ನಿರೀಕ್ಷಕನನಗಿತ್ತ ವಿವರಣೆ ಇದು: ಅವರು ಆರಿಸಿ ಬಂದರೆ ಮಂತ್ರಿಪದವೊಂದನ್ನು ಅವರಿಗೆ ಕೊಡದಿರುವುದು ಕಷ್ಟವೇ; ಆದರೆ ಜಿಲ್ಲೆಯಲ್ಲಿ ಮಂತ್ರಿಪದ ಕೊಡಲೇಬೇಕಾದ ಇನ್ನೊಬ್ಬಿಬ್ಬ ಹಿರಿಯರಿರುವಾಗ ಈ ನಲುವತ್ತು ಕೂಡ ಆಗದ ತರುಣನಿಗೆ ಅದನ್ನು ಕೊಡುವುದು ಇನ್ನಷ್ಟು ಕಷ್ಟ. ಆದ್ದರಿಂದ ಟಿ.ಎ.ಪೈಯವರು ತಾವು ಚುನಾವಣೆಗೆ ನಿಲ್ಲುವುದಿಲ್ಲೆಂದು ಹೇಳಿದಾಗ ಕಾಂಗ್ರೆಸ್ಸಿನವರು ಚಿಂತಾಪರಿಹಾರದ ನಿಟ್ಟುಸಿರು ಬಿಟ್ಟರಂತೆ.

ಈ ಕಥೆಯಲ್ಲಿ ತಥ್ಯಾಂಶವಿದೆಯೋ ಇಲ್ಲವೋ ನಾನರಿಯೆ. ಬಹುಶಃ ಅದು ಹುಲುಸಾದ ಕಲ್ಪನಾಶಕ್ತಿಯ ಫಲವಿರಬೇಕು. ಅದೇ ಚುನಾವಣೆಗಿಂತ ಕೆಲ ದಿನ ಹಿಂದೆ ಪ್ರಧಾನಮಂತ್ರಿ ನೆಹರು ಅವರು ಕಾಂಗ್ರೆಸ್ಸಿಗರಿಗೊಂದು ಬಿನ್ನಹ ಹೊರಡಿಸಿ, ಅಧಿಕಾರ ಸ್ಥಾನಗಳಿಗೆ ಅಂಟಿಕೊಳ್ಳುವ ಪ್ರವೃತ್ತಿಯನ್ನು ತ್ಯಜಿಸಬೇಕೆಂದು ಕೇಳಿಕೊಂಡಿದ್ದರು. ಪೈಯವರು ಚುನಾವಣೆಗೆ ನಿಲ್ಲದಿಬಾರದೆಂದು ನಿರ್ಧರಿಸಲು ಈ ಕರೆಗೆ ಮನ್ನಣೆಯೀಯುವುದೇ ಉದ್ದೇಶವಾಗಿತ್ತು. ಆದರೂ ಟಿ. ಎ. ಪೈಯವರ ತಾರುಣ್ಯ ಮತ್ತು ಕರ್ತೃತ್ವ ಶಕ್ತಿಯ ಮಟ್ಟವನ್ನು ನೋಡಿದರೆ ಮೇಲಿನ ಕಥೆ ಅತಥ್ಯವಾದರೂ ಅಸಂಭಾವ್ಯವೇನೂ ಅಲ್ಲ ಎನಿಸುತ್ತದೆ.

೩೦ ನೇ ವಯಸ್ಸಿನಲ್ಲಿ ಅವರು ಅವಿಭಕ್ತ

ಮದ್ರಾಸ್ ರಾಜ್ಯದ ವಿಧಾನ ಸಭೆಗೆ ಆರಿಸಿಬಂದಿದ್ದರು. ಆಗವರು ಆ ಸಭೆಯ ಅತಿ ಕಿರಿಯ ಸದಸ್ಯರಾಗಿದ್ದರು. ಮಾತ್ರವಲ್ಲ, ಇಡೀ ಭಾರತದ ಅತಿ ಎಳೆ ವಯಸ್ಸಿನ ವಿಧಾನಸಭಾ ಸದಸ್ಯರುಗಳಲ್ಲಿ ಒಬ್ಬರಾಗಿದ್ದರು. ಈಗ ಅನೇಕ ವರ್ಷಗಳಿಂದ ಅವರು ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದಾರೆ. ಅವರ ಸಕ್ರಿಯ ಸಂಬಂಧವಿಲ್ಲದ ಆರ್ಥಿಕ ಸಾಮಾಜಿಕ ಶೈಕ್ಷಣಿಕ ಚಟುವಟಿಕೆಗಳು ಅವರ ಜಿಲ್ಲೆಯಲ್ಲಿ ಕ್ವಚಿತ್ತಾಗಿಯೆ ಇರಬಹುದು. ಈಗ ೪೦ ನೇ ವಯಸ್ಸಿನಲ್ಲಿ ಅವರು ಕನ್ನಡ ನಾಡಿನ ಅತಿ ದೊಡ್ಡ ಬ್ಯಾಂಕುಗಳಲ್ಲೊಂದಾದ ಕೆನರಾ ಇಂಡಸ್ಟ್ರಿಯಲ್ ಎಂಡ್ ಬ್ಯಾಂಕಿಂಗ್ ಸಿಂಡಿಕೇಟಿನ ಮೇನೇಜಿಂಗ್ ಡೈರೆಕ್ಟರರಾಗಿದ್ದಾರೆ.

ಕೆಲಕೆಲ ವಂಶಗಳಲ್ಲಿ ಪ್ರತಿಭೆ ಒಮ್ಮೊಂದೊಮ್ಮೆ ಕನಸಿನಿಂದೆಚ್ಚತ್ತಂತೆ ಚಿಗಿತೊಡೆಯುವುದುಂಟು. ತೋನ್ಸೆ ಅನಂತ ಪೈಗಳು ಅಂಥ ಒಂದು ವಂಶದಲ್ಲಿ ಹುಟ್ಟಿದವರಾಗಿದ್ದಾರೆ. ಅವರ ದೊಡ್ಡಪ್ಪ ಪಿ. ಐ. ಪೈಗಳು ಜಿಲ್ಲೆಯಲ್ಲಿ ಪ್ರಸಿದ್ಧ ಕಾಂಗ್ರೆಸ್ ಕಾರ್ಯಕರ್ತರಾಗಿದ್ದರು. ಅವರ ತಂದೆ ಉಪೇಂದ್ರ ಪೈಗಳ ಕಲ್ಪನಾಪ್ರವಣ ಬುದ್ಧಿಯಲ್ಲೇ ಇಂದು ಉಡುಪಿಯಲ್ಲಿ ಬೆಳೆದಿರುವ ಅನೇಕ ಉದ್ಯಮಗಳು ಮೂಲತಃ ಮೊಳೆತದ್ದು. ಅವರು ಸಿಂಡಿಕೇಟ್ ಬ್ಯಾಂಕಿನ ಸ್ಥಾಪಕರಲ್ಲೊಬ್ಬರಾಗಿದ್ದರು. ಅವರ ಚಿಕ್ಕಪ್ಪ ಡಾ. ಟಿ. ಎಂ. ಎ ಪೈಯವರ ಆರ್ಥಿಕ, ಶೈಕ್ಷಣಿಕ ಸಫಲ ಸಾಹಸಗಳಂತೂ ಇಂದು ಕರ್ನಾಟಕದಲ್ಲೇ ಮನೆ ಮಾತಾಗಿವೆ. ಇಂದು ಟಿ. ಎ. ಪೈಯವರನ್ನು ಪ್ರೇರಿಸುತ್ತಿರುವ ವಾಣಿಜ್ಯ ಮತ್ತು ರಾಜಕೀಯ ಆಕರ್ಷಣೆಗಳು ಈ ಹಿರಿಯರಿಂದಲೇ ಬಂದಿವೆ.

ಟಿ. ಎ. ಪೈಗಳಿಗೆ ಎಳವೆಯಿಂದಲೇ ವಾಣಿಜ್ಯ ಪ್ರಪಂಚದ ತರಬೇತಿಯಾಗಿತ್ತು. ಮುಂಬಯಿಯ ಸಿಡೆನ್‌ಹ್ಯಾಂ ಕಾಲೇಜಿನಿಂದ ಉಚ್ಚ ತರಗತಿಯಲ್ಲಿ ಕಾಮರ್ಸ್ ಪದವೀಧರರಾಗಿ ಮರಳಿದೊಡನೆಯೆ ಅವರು ಸಿಂಡಿಕೇಟ್ ಬ್ಯಾಂಕಿನಲ್ಲಿ ಹೊಣೆಗಾರಿಕೆಯ ಸ್ಥಾನವನ್ನು ವಹಿಸಿ ಡಾ. ಟಿ. ಎಂ. ಎ. ಪೈಯವರ ಬಲಗೈಯಾದರು. ಡಾ. ಪೈಗಳ ಅದ್ವಿತೀಯ ಸಂಘಟನಾಶಕ್ತಿಗೆ ಅನಂತ ಪೈಗಳ ಅರ್ಥಶಾಸ್ತ್ರೀಯ ಪರಿಜ್ಞಾನವೂ ನವೀನ ಕಲ್ಪನೆಗಳೂ ಬೆರೆತಂತಾಗಿ ಸಿಂಡಿಕೇಟ್ ಬ್ಯಾಂಕು ಇತರರು ಮೆಟ್ಟದಿದ್ದ ಹೊಸ ಹಾದಿಗಳನ್ನು ಹುಡುಕಿ ತೆಗೆಯತೊಡಗಿತು. ಕಳೆದ ವರ್ಷಾಂತ್ಯದಲ್ಲಿ ಡಾ. ಪೈಗಳು ಬ್ಯಾಂಕಿನ ಮೆನೇಜಿಂಗ್ ಡೈರೆಕ್ಟರ್ ಪದದಿಂದ ನಿವೃತ್ತರಾಗಲು ನಿರ್ಧರಿಸಿದಾಗ ಅನಂತ ಪೈಗಳಷ್ಟು ಚೆನ್ನಾಗಿ ಆ ಹೊಣೆಗೆ ಹೆಗಲು ಕೊಡಬಲ್ಲವರಾರೂ ಇರಲಿಲ್ಲವೆಂದೇ ಹೇಳಬೇಕು.

ಬ್ಯಾಂಕಿಂಗ್ ಮತ್ತು ಅರ್ಥಶಾಸ್ತ್ರದಲ್ಲಿ ಟಿ.ಎ. ಪೈಗಳು ಪ್ರವೀಣರು. ಅವರು ಭಾರತೀಯ ಬ್ಯಾಂಕಿಂಗ್ ಸಂಸ್ಥೆಯ ಅಸೋಸಿಯೇಟ್, ಲಂಡನ್ನಿನ ರಾಯಲ್ ಇಕನಾಮಿಕ್ ಸೊಸೈಟಿಯ ಫೆಲೋ, ಅಖಿಲ ಭಾರತೀಯ ಕಾರಖಾನೆದಾರ ಸಂಘದ ಕಾರ್ಯಸಮಿತಿಯ ಸದಸ್ಯರೂ ಆಗಿದ್ದಾರೆ. ೧೯೫೭ ರಲ್ಲಿ ಅವರು ಪಶ್ಚಿಮ ಜರ್ಮನಿಗೆ ಅಂತಾರಾಷ್ಟ್ರೀಯ ಬೇಸಗೆ ಬ್ಯಾಂಕಿಂಗ್ ಶಾಲೆಯಲ್ಲಿ ಪ್ರತಿನಿಧಿಯಾಗಿ ಭಾಗವಹಿಸಿದರು. ಆಗ ಯುರೋಪಿನಲ್ಲೆಲ್ಲ ಸಂಚರಿಸಿ ಅಲ್ಲಿಯ ಆರ್ಥಿಕ ಪುನರುಜ್ಜೀವನವನ್ನು ಪ್ರತ್ಯಕ್ಷ ನೋಡಿಬಂದು ಹಲವು ಭಾಷಣಗಳನ್ನಿತ್ತರು. ತಾವು ಅನೇಕ ದೊಡ್ಡ ಜಾಯಿಂಟ್ ಸ್ಟಾಕ್ ಕಂಪನಿಗಳ ಸಂಪರ್ಕವಿಟ್ಟುಕೊಂಡವರಾದರೂ ಸಹಕಾರಿ ಚಳವಳಿಯಲ್ಲಿಯೂ ಅವರು ತೀವ್ರ ಆಸಕ್ತಿ ತಳೆದಿದ್ದಾರೆ. ಜಿಲ್ಲೆಯ ಹಲವಾರು ಸಹಕಾರಿ ಸಂಸ್ಥೆಗಳಲ್ಲಿ ಅವರು ಡೈರೆಕ್ಟರರೂ ಹೌದು.

ಡಾ. ಮಾಧವ ಪೈಗಳ ಆರ್ಥಿಕ ಶೈಕ್ಷಣಿಕ ಸಾಧನೆಗಳಲ್ಲೆಲ್ಲ ಅನಂತ ಪೈಗಳು ಹಿನ್ನೆಲೆಯಲ್ಲಿ ನಿಂತು ನೆರವಿತ್ತಿದ್ದಾರೆ. ಉಡುಪಿಯ ಬಳಿಯ ಗುಡ್ಡಗಳ ಮೇಲೆ ಎದ್ದು ನಿಂತ ಮಹಾತ್ಮಾ

ಗಾಂಧಿ ಮೆಮೋರಿಯಲ್ ಆರ್ಟ್ಸ್ ಮತ್ತು ಸಾಯನ್ಸ್ ಕಾಲೇಜಿನಿಂದ ಹಿಡಿದು ಕಸ್ತೂರಬಾ ಮೆಡಿಕಲ್ ಕಾಲೇಜು, ಎಂಜಿನಿಯರಿಂಗ್ ಕಾಲೇಜುಗಳ ವರೆಗಿನ ಆ ಅಸಾಧಾರಣ ಶೈಕ್ಷಣಿಕ ಸಂಸ್ಥೆಗಳ ಹಿಂದೆಲ್ಲ ಟಿ ಎ. ಪೈಗಳ ಯೋಜಕ ಬುದ್ಧಿಯ ಕೈವಾಡವಿದ್ದೇ ಇದೆ. ಆದರೆ ಡಾ. ಪೈಗಳು ಅಷ್ಟಾಗಿ ಕೈಯಾಡಿಸದ ರಾಜಕೀಯದಲ್ಲಿ ಟಿ. ಎ. ಪೈಗಳಿಗೆ ವಿಶೇಷ ಆಸಕ್ತಿಯಿದೆ. ಕಾಲೇಜಿನಲ್ಲಿರುವಾಗಲೇ ರಾಜಕೀಯ ಚಟುವಟಿಕೆಗಳನ್ನು ಕೈಕೊಂಡು ಅವರು ಅದರ ಅಧಿಕಾರಿಗಳಿಗೆ ಕಣ್ಣುಕಿಸುರಾಗಿದ್ದರು. ವಾಸ್ತವಿಕವಾಗಿ ಅವರು ಸಿಂಡಿಕೇಟ್ ಬ್ಯಾಂಕಿನ ಮೆನೇಜಿಂಗ್ ಡೈರೆಕ್ಟರ್ ಪದವಿಯನ್ನು ಸ್ವೀಕರಿಸುವ ಮೊದಲು ತಾವು ರಾಜಕೀಯವನ್ನೇ ಜೀವನದ ಪ್ರಧಾನ ಕಾರ್ಯರಂಗವಾಗಿ ಸ್ವೀಕರಿಸಬೇಕೇ ಬ್ಯಾಂಕಿಂಗನ್ನೇ ಎಂಬ ಸಂದಿಗ್ಧದಲ್ಲಿ ಕೂಡ ಸಿಕ್ಕಿದ್ದರು. ಆದರೆ ಆರ್ಥಿಕ ರಂಗದಲ್ಲಿದ್ದುಕೊಂಡೇ ಹೆಚ್ಚಿನ ದೇಶಸೇವೆ ಮಾಡಬಹುದೆಂದು ಅವರಿಗನಿಸಿದ್ದರಿಂದ ಅದನ್ನೇ ಅಂಗೀಕರಿಸಲು ನಿರ್ಧರಿಸಿದರು.

ರಾಜಕೀಯ ರಂಗದಲ್ಲಾದರೂ ಅವರ ಕಾರ್ಯ ಅಲ್ಪವಾಗಿಲ್ಲ. ೧೯೫೨ ರಲ್ಲಿ ಆರಿಸಿ ಬಂದು ಮದ್ರಾಸ್ ವಿಧಾನ ಸಭೆಯಲ್ಲಿದ್ದಾಗ ಅವರು ಭಾಗ ವಹಿಸದ ಯಾವ ಮಹತ್ವದ ಚರ್ಚೆಯೂ ಇರಲಿಲ್ಲ. ಅನೇಕ ವಿಧಾನಸಭಾ ಸಮಿತಿಗಳಲ್ಲಿ ಅವರು ಕೆಲಸ ಮಾಡಿ ತಮ್ಮ ವ್ಯಾವಹಾರಿಕ ಅನುಭವವನ್ನು ಪ್ರದರ್ಶಿಸಿದರು. ತಮ್ಮ ಮತದಾರ ಕ್ಷೇತ್ರವಾದ ಉಡುಪಿಯಲ್ಲಿ ಜನತೆಯನ್ನು ಹುರಿದುಂಬಿಸಿ ರಸ್ತೆ, ಸೇತುವೆ, ವೈದ್ಯಕೀಯ ಸೌಕರ್ಯ ಮೊದಲಾದವುಗಳಿಗಾಗಿ ಸಹಕಾರಿ ಪ್ರಯತ್ನ ಕೈಕೊಳ್ಳುವಂತೆ ಮಾಡಿದರು. ರಾಜಾಜಿಗೆ ಅವರ ಮೇಲೆ ತುಂಬ ಅಭಿಮಾನವಿತ್ತು. ಅನಂತರ ಮೈಸೂರು ವಿಧಾನ ಸಭೆಯಲ್ಲೂ ಅವರು ತಮ್ಮ ಕ್ರಿಯಾಶೀಲತೆಯಿಂದ ಮಹತ್ವದ ಸ್ಥಾನ ಪಡೆದಿದ್ದರು.

ಕರ್ನಾಟಕ ಏಕೀಕರಣವಾದ ನಂತರದ ಎರಡೂ ಚುನಾವಣೆಗಳಲ್ಲಿ ವಿಧಾನ ಸಭೆಗೆ ಅವರ ಹೆಸರು ಕೇಳಬರುತ್ತಿತ್ತು. ಆದರೆ ಎರಡೂ ಸಲ ಅವರು ಹಿನ್ನೆಲೆಯಲ್ಲೇ ಉಳಿಯಲು ನಿರ್ಧರಿಸಿದರು. ನಿಮ್ಮ ಹುರಿಯಾಳ್ತನವನ್ನು ನೀವೇಕೆ ಮುಂದೊತ್ತಲಿಲ್ಲ ಎಂದು ನಾನು ಕೇಳಿದಾಗ ಅವರು, "ಭವಿಷ್ಯತ್ತಿಗೆ ಅನಿವಾರ್ಯವೆನಿಸುವಷ್ಟು ದೊಡ್ಡ ಮನುಷ್ಯರು ಯಾರೂ ಇಲ್ಲ," ಎಂದರು. "ನಮ್ಮ ಅಹಂಕಾರದಲ್ಲಿ ನಾವೇನೋ ನಾಡಿಗೆ ಅತ್ಯವಶ್ಯ ವ್ಯಕ್ತಿಗಳೆಂದು ನಮ್ಮನ್ನೇ ಪುಸಲಾಯಿಸಿಕೊಳ್ಳುತ್ತೇವೆ. ಆದರೆ ಉಡುಪಿಯ ಚರಿತ್ರೆಯನ್ನೇ ತೆಗೆದುಕೊಳ್ಳಿ. ಪ್ರತಿ ತಲೆಮಾರಿನಲ್ಲಿಯೂ ತಮ್ಮ ಪಾತ್ರ ಅಜರಾಮರವೆಂದೆಣಿಸಿಕೊಂಡ ಅನೇಕ ದೊಡ್ಡಮನುಷ್ಯರು ಇಲ್ಲಿ ಬಾಳಿರಬೇಕು. ಆದರೆ ಕಡೆಗೆ ಈ ಎಂಟು ಶತಮಾನಗಳಲ್ಲಿ ಇಲ್ಲಿ ಉಳಿದ ಹೆಸರುಗಳು ಬರೇ ಎರಡು—ಮಧ್ವಾಚಾರ್ಯರು ಮತ್ತು ವಾದಿರಾಜ ಸ್ವಾಮಿಗಳು."

ತಮ್ಮ ಸುಸಜ್ಜಿತ ಕಚೇರಿಯಲ್ಲಿ ಕುಳಿತು ನೂರಾರು ಶಾಖೆಗಳೂ ಸಾವಿರಗಟ್ಟಳೆ ಕೆಲಸಗಾರರೂ ಉಳ್ಳ ಒಂದು ಪ್ರಬಲ ಬ್ಯಾಂಕಿನ ಸೂತ್ರಗಳನ್ನು ಆಡಿಸುತ್ತ ತಾರುಣ್ಯದಲ್ಲೇ ಅಧಿಕಾರ, ಪ್ರಶಂಸೆಗಳನ್ನು ಸಂಪಾದಿಸಿದ ವ್ಯಕ್ತಿಯೊಬ್ಬನ ಚಿತ್ತದಲ್ಲಿ ಈ ಪ್ರಜ್ಞೆ ಇರುವುದು ಅಪರೂಪ ಗುಣವೇ.

ಟಿ. ಎ. ಪೈಗಳಿಗೆ ರಾಜಕೀಯದ ಆಕರ್ಷಣೆಯಿದ್ದರೂ ಅವರು ಅದರಲ್ಲಿ ಯಾವಾಗಲೂ ಅಗ್ರಸ್ಥಾನ ಪಡೆಯುವುದಕ್ಕೆ - ಅಧಿಕಾರ ಸ್ಥಾನದಲ್ಲಿ ಉಳಿಯುವುದಕ್ಕೆ- ಬೇಕಾದ ಬೆಲೆಯನ್ನೆಲ್ಲ ತೆರಲು ಹಿಂಜರಿಯುತ್ತಾರೆ. ಅಧಿಕಾರ ಲಾಲಸೆಯಿಂದ ಅಸಭ್ಯವಾಗಿ ಕಚ್ಚಾಡುವುದು ಅವರ ಪ್ರವೃತ್ತಿಗೆ ಸರಿಹೊಂದುವುದಿಲ್ಲ. ಅವರು ಹೋರಾಟಕ್ಕೆ ಹಿಂಜರಿಯುವವರೆಂದಲ್ಲ, ನಿಜವಾಗಿ ಅವರು ಜಿಲ್ಲೆಯಲ್ಲಿನ ಅತ್ಯಂತ ವಿವಾದಾಸ್ಪದ ವ್ಯಕ್ತಿಗಳಲ್ಲೊಬ್ಬರು. ತಮ್ಮ ಸುತ್ತ ಹೀಗೆ

ಆಕ್ಷೇಪಗಳ ಬಾಣಗಳು ಸುತ್ತಿ ಸುಳಿಯುವುದು ತಮ್ಮ ಜೀವಂತತೆಯ ಲಕ್ಷಣವೆಂದವರು ಬಗೆಯುತ್ತಾರೆ. ಆದರೆ ಎಲ್ಲ ಹೋರಾಟಗಳೂ ಸಭ್ಯವಾಗಿರಬೇಕೆಂದವರ ಅಪೇಕ್ಷೆ

ಅದು ಸಾಧ್ಯವಿಲ್ಲವೆನಿಸಿದಾಗ ಟಿ. ಎ. ಪೈಗಳು ಸ್ಪರ್ಧೆಯಿಂದ ಹಿಂದೆಗೆದುಬಿಡುತ್ತಾರೆ. ಹಾಗೆ ಕೇಳಿದರೆ ಸಾರ್ವಜನಿಕ ಕಾರ್ಯ ಮಾಡಬೇಕೆಂಬವರಿಗೆ ವಿಧಾನಸಭೆಗಳ ಹೊರಗೂ ಬೇಕಾದಷ್ಟು ಅವಕಾಶವಿದೆಯೆಂದವರ ಮತ. ಅದನ್ನವರು ಉಪಯೋಗಿಸಿಕೊಳ್ಳುತ್ತಲೂ ಇದ್ದಾರೆ. ಅವರು ಭಾರತ ಸೇವಾದಲದ ಕಾರ್ಯಸಮಿತಿಯಲ್ಲಿಯೂ ಮೈಸೂರು ವ್ಯವಸಾಯಸಂಘದ ಡೈರೆಕ್ಟರ ಸ್ಥಾನದಿಂದಲೂ ಮೈಸೂರು ರಾಜ್ಯ ಮಾಧ್ಯಮಿಕ ಶಿಕ್ಷಣ ಬೋರ್ಡ್, ಮೈಸೂರು ರಾಜ್ಯ ತಾಂತ್ರಿಕ ಶಿಕ್ಷಣ ಬೋರ್ಡ್‌ಗಳ ಸದಸ್ಯಸ್ಥಾನದಿಂದಲೂ ಸೇವೆ ಸಲ್ಲಿಸಿದ್ದಾರೆ. ಯುರೋಪಿಗೆ ಹೋದಾಗ ಸ್ವೀಡನ್, ನಾರ್ವೆಗಳಲ್ಲಿ ಮತ್ಸ್ಯ ವ್ಯವಸಾಯದ ವಿಶೇಷ ಪರಿಶೀಲನೆಮಾಡಿ ಅನುಭವ ಪಡೆದು ಬಂದ ಅವರು ಮೈಸೂರು ಮತ್ಸ್ಯ ವ್ಯವಸಾಯ ಸಲಹೆ ಸಮಿತಿಯಲ್ಲೂ ಸದಸ್ಯರಾಗಿ ದುಡಿದಿದ್ದಾರೆ. ಉಡುಪಿಯ ಕರ್ನಾಟಕ ಸಂಘದ ಮುಖ್ಯ ಆಧಾರಗಳಲ್ಲಿ ಅವರೊಬ್ಬರು.

ನಮ್ಮ ಆರ್ಥಿಕ ಉದ್ಧಾರದ ಸಮಸ್ಯೆಗಳನ್ನವರು ಗಾಢವಾಗಿ ಅಭ್ಯಸಿಸಿದ್ದಾರೆ. ಇದನ್ನು ಸಾಧಿಸಲು ಅವರ ಹತ್ತಿರ ಕೆಲ ನವೀನ ವಿಚಾರಗಳಿವೆ. ನಮ್ಮ ಯೋಜನೆಗಳನ್ನು ರಚಿಸುವಾಗ ಒಂದೇಬಗೆಯ ಸಮಸ್ಯೆಗಳೂ ಪರಸ್ಪರ ಸಂಬಂಧಿತ ಆರ್ಥಿಕ ಹಿತ ಸಂಬಂಧಗಳೂ ಇರುವ ಪ್ರದೇಶಗಳನ್ನು ಕೂಡಿಸಿ ಅಭಿವೃದ್ಧಿಯ ವ್ಯವಸ್ಥೆ ಮಾಡಬೇಕೆಂದವರ ಹೇಳಿಕೆ. ಉದಾಹರಣೆಗೆ ದಕ್ಷಿಣ ಕನ್ನಡ, ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಕೊಡಗು ಇವುಗಳ ಅಭಿವೃದ್ಧಿಯನ್ನು ಸಂಯುಕ್ತವಾಗಿ, ಸಂಯೋಜಿತವಾಗಿ ಕೈಕೊಂಡರೆ ಅದು ಹೆಚ್ಚು ಫಲಪ್ರದವಾದೀತೆಂದವರಿಗೆ ನಂಬಿಕೆಯಿದೆ.

ನಮ್ಮಲ್ಲಿ ರಾಜಕೀಯ ನೇತೃತ್ವವನ್ನು ಪೂಜಿಸುವ ಪ್ರವೃತ್ತಿಯಿರುವುದೇ ನಮ್ಮ ರಾಜಕೀಯ ರಂಗದಲ್ಲಿ ಕೊಳೆ ಹೆಚ್ಚಾಗಲು ಕಾರಣವೆಂದು ಪೈಗಳ ಅಭಿಪ್ರಾಯ. ಇದಕ್ಕೆ ಪರಿಹಾರೋಪಾಯವೆಂದರೆ ರಾಜಕೀಯದ ಹೊರಗೆ—ಆರ್ಥಿಕ, ಸಹಕಾರ, ಶಿಕ್ಷಣ, ಸಾರ್ವಜನಿಕ ಆರೋಗ್ಯ ಮೊದಲಾದ ರಂಗಗಳಲ್ಲಿ ಮಹತ್ತರ ಸೇವೆ ಸಲ್ಲಿಸಿದವರಿಗೆ, ಅದೂ ತರುಣರಿಗೆ ಹಿರಿಯ ಗೌರವ ಸಲ್ಲಿಸುವುದು. ಅನಂತ ಪೈಗಳ ಅಭಿಪ್ರಾಯದಲ್ಲಿ, ಅಧಿಕಾರದಿಂದ ನಡುನಡುವೆ ಹೊರಗುಳಿಯುವುದರಿಂದ ಮನಸ್ಸಿನಲ್ಲಿ ಕೂಡಿಬಿದ್ದ ಜಾಡ್ಯ ದೂರವಾಗಿ ಸಮಸ್ಯೆಗಳನ್ನು ನಿಚ್ಚಳವಾಗಿ ಕಾಣಲು ಸಹಾಯವಾಗುತ್ತದೆ.

ಟಿ. ಎ. ಪೈಗಳು ಯುರೋಪಿನ ಕಾರ್ಯತತ್ಪರತೆಯನ್ನು ಬಹುವಾಗಿ ಮೆಚ್ಚುತ್ತಾರೆ. ನಾವು ಸಾಕಷ್ಟು ಪ್ರಯತ್ನಶೀಲರಲ್ಲವೆಂದು ಅವರಿಗನಿಸುತ್ತದೆ. ಸ್ವಾರ್ಥಕ್ಕಾಗಿಯಾದರೂ ನಾವು ನಿಜವಾಗಿ ದುಡಿಯಲು ಕಲಿಯಬೇಕೆಂದವರು ಹೇಳುತ್ತಾರೆ. ಆದರೆ ಅವರು ಯುರೋಪಿನ ಅಂಧಭಕ್ತರಲ್ಲ. ಯುರೋಪಿಯನ್ನರು ಭಾರಿ ಕಾರ್ಯತತ್ಪರರು ನಿಜ; ಆದರೆ ಅವರನ್ನು ಎಲ್ಲ ಬಾಬುಗಳಲ್ಲಿಯೂ ಅನುಕರಿಸುವುದು ಸರಿಯಲ್ಲ. "ಉದಾಹರಣೆಗೆ ನಮ್ಮ ವ್ಯಕ್ತಿಸ್ವಾರ್ಥವಾದವು ಮಿತಿಮೀರಿ, ಯುರೋಪಿನಲ್ಲಿರುವ ಹಾಗೆ ತಂದೆ ತಾಯಿಗಳನ್ನು ಮುಪ್ಪಿನಲ್ಲಿ ವೃದ್ಧಾಶ್ರಮಗಳಿಗೆ ಸೇರಿಸುವಂತೆ ಮಾಡಿದರೆ ಅದನ್ನು ನಾನು ಪ್ರಗತಿಯೆಂದು ಕರೆಯಲಾರೆ" ಎನ್ನುತ್ತಾರವರು.

ಅಸಂಖ್ಯ ಚಟುವಟಿಕೆಗಳಲ್ಲಿ ವ್ಯಸ್ತರಾಗಿರುವ ಟಿ. ಎ. ಪೈಗಳು ಇದೆಲ್ಲವನ್ನೂ ಹೇಗೆ ನಿರ್ವಹಿಸುತ್ತಾರೆ ಎಂಬುದೇ ಸೋಜಿಗ. ಆದರೆ ಅವರು ಅದರ ಗುಟ್ಟನ್ನು ಹೀಗೆ ವಿವರಿಸುತ್ತಾರೆ: "ಹೆಚ್ಚು ಮಹತ್ವದ ಕೆಲಸ ಬಂದಾಗ ಕಡಿಮೆ ಮಹತ್ವದ್ದನ್ನು ನಾನು ಕೈಬಿಡುತ್ತೇನೆ." *

ಅಂತರ್ಮನಸ್ಸಿನ ಶಕ್ತಿ ವಿಲಕ್ಷಣವಾಗಿದೆ. ಸಾಮಾನ್ಯವಾಗಿ ನಾವು ನಮ್ಮ ವೈಯಕ್ತಿಕ ಸಮಸ್ಯೆಗಳನ್ನು ಕುರಿತು ಗಹನವಾಗಿ ಯೋಚಿಸುವುದುಂಟು. ಆದರೆ ವಿಚಾರ ಮಾಡುವುದಕ್ಕೂ ಮಿತಿಯಿದೆ. ಸ್ವಲ್ಪ ಹೊತ್ತಿನವರೆಗೆ ಯೋಚಿಸಿ, ಪರಿಹಾರ ಕಾಣದೇ ಹೋದಾಗ ವ್ಯಾಕುಲರಾಗುತ್ತೇವೆ. ಆಗ ಹೃದಯದ ಅಂತಃಶಕ್ತಿ, ನಮಗರಿಯದಂತೆ ಎಲ್ಲವನ್ನು ತನ್ನ ಮೇಲೆ ಹೊತ್ತುಕೊಳ್ಳುತ್ತದೆ. ಮತ್ತು ನಾವೆಣಿಸದೆ ಇರುವಾಗ ಸಹಸಾ ಸಮಸ್ಯೆಗೆ ಉತ್ತರವನ್ನು ಕಂಡುಸ್ಥೆಯಲ್ಲಿಯೇ ಅವರ ಪ್ರಯೋಗ ಇಲ್ಲವೆ ಸಮಸ್ಯೆಗಳಿಗೆ ಪರಿಹಾರ ದೊರೆಯಿತು.

ಹೃದಯದ ಈ ಅಂತಃಶಕ್ತಿ ಯಾವಾಗಲಾದರೂ ಉತ್ತೇಜಿತವಾಗಿಬಿಡಬಹುದು. ನಾವು ಕೆಲಸದಲ್ಲಿ ತೊಡಗಿವಾಗಲೇ ಇದು ಜಾಗೃತವಾಗಿರಬೇಕೆಂಬ ಅವಶ್ಯಕತೆ ಏನೂ ಇಲ್ಲ. ಫ್ರೆಂಚ ತತ್ವಜ್ಞ—ಗಣಿತಜ್ಞನಾದ ರೆಕಾರ್ಡನ ಎಲ್ಲ ಸಿದ್ಧಾಂತಗಳು, ಅವನು ಬೆಳಗ್ಗೆ ಹಾಸಿಗೆಯ ಮೇಲೆ ಆಲಸ್ಯದಿಂದ ಹೊರಳಾಡುತ್ತಿದ್ದಾಗಲೇ ರೂಪಗೊಂಡುವಾಗಿವೆ. (ಭಾರತೀಯ ಗಣಿತಜ್ಞ

ನಮ್ಮೊಳಗೆ ಹುದುಗಿರುವ ಈ ಅಗಾಧ ಶಕ್ತಿಯನ್ನು
ಹೇಗೆ ವಿನಿಯೋಗಿಸಬಹುದು?

# ಅಂತರ್ಮನಸ್ಸಿನ ಅಗಾಧಶಕ್ತಿ

"ವಾಙ್ಮಯೀ"

ಹಿಡಿದುಬಿಡುತ್ತದೆ. ಅಂತಃಶಕ್ತಿಯ ಈ ಕಾರ್ಯ ತನ್ನಷ್ಟಕ್ಕೆ ತಾನೇ ನಡೆಯುತ್ತದೆ. ಇದನ್ನು ಪ್ರಯತ್ನದಿಂದ ವಶಪಡಿಸಿಕೊಳ್ಳುವುದು ಅಸಾಧ್ಯ.

'ಫೇರ'ನೆಂಬ ಫ್ರೆಂಚ ಪಂಡಿತ ತನ್ನ ಸಮಕಾಲೀನ ಬುದ್ಧಿಜೀವಿಗಳ ನಡವಳಿಕೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ನೂರಕ್ಕೆ ಎಪ್ಪತ್ತೈದು ಜನರು ಮಹತ್ವದ ಶೋಧ ಅಥವಾ ಸಿದ್ಧಾಂತಗಳನ್ನು ತಮ್ಮ ಜಾಗ್ರತ ಮನಸ್ಸಿನ ಪ್ರಯತ್ನಪೂರ್ವಕ ಕಾರ್ಯದಿಂದ ಸಾಧಿಸಲಿಲ್ಲವೆಂಬ ನಿರ್ಣಯಕ್ಕೆ ಬಂದ. ಮನಸ್ಸಿನ ಅರ್ಧ ಜಾಗ್ರತ ಅವರಾಮಾನುಜಂ ನಿದ್ರೆಯಲ್ಲೇ ಹಲವು ಸಮಸ್ಯೆಗಳನ್ನು ಬಿಡಿಸಿದ್ದ. ದೇವಿ ಕನಸಿನಲ್ಲಿ ತನಗೆ ಉತ್ತರ ಹೇಳುತ್ತಾಳೆಂದು ಅವನ ನಂಬಿಕೆಯಾಗಿತ್ತು.)

ತುಂಬಾ ವಿಚಾರ ಮಾಡಿ ಕೈಕೊಂಡ ನಿರ್ಣಯಗಳು ಅಷ್ಟೊಂದು ಪರಿಪಕ್ವವಾಗಲಾರವು. ಏಕೆಂದರೆ ನಾವು ಹಿಂದಿನ ಅನುಭವಗಳ ಬಲದಿಂದಲೇ ವಿಚಾರ ಮಾಡಿ ಈ ನಿರ್ಣಯಕ್ಕೆ ಬಂದಿರುತ್ತೇವೆ. ಇದು ಹೆಚ್ಚಾಗಿ ಹೊಸ ವಿಚಾರಗಳನ್ನು ಕೊಡುವಲ್ಲಿ ಅಸಫಲವಾಗಿರುತ್ತದೆ.

ಹೀಗಾಗಿ ನಮ್ಮ ಚಿಂತನಾಕ್ಷಣಗಳು ವ್ಯರ್ಥವಾಗಿ ಹೋಗುತ್ತವೆ. ಬದಲಿಗೆ ನಾವು ವಿಶ್ರಾಂತಿ ತೆಗೆದುಕೊಳ್ಳುವ ಸಮಯದಲ್ಲಿ, ಅಂತರ್ಮನದ ದ್ವಾರಗಳು ತೆರೆದು, ನಮ್ಮ ಸಮಸ್ಯೆಗಳಿಗೆ ಅಮೂಲ್ಯವಾದ ನಿರ್ಣಯ ದೊರೆಯುತ್ತದೆ. ಮನಸ್ಸು ಉಲ್ಲಾಸವಾಗಿದ್ದರೆ, ನಮ್ಮ ಕೆಲಸವೂ ಸರಳವಾಗಿಯೇ ನೆರವೇರುತ್ತದೆ. ತತ್ವಜ್ಞಾನಿ ಹೆನ್ರಿ ಡೆವಿಡ್‌ನೂ ಈ ಅಭಿಪ್ರಾಯವನ್ನೇ ಸಮರ್ಥಿಸಿದ್ದಾನೆ.

ಈ ಅಂತಃಶಕ್ತಿಯನ್ನು, ನಿಜವಾದ ನಿರ್ಣಯ ತೆಗೆದುಕೊಳ್ಳುವಲ್ಲಿ, ಕಲ್ಪನೆಯ ಶಕ್ತಿಯನ್ನು ಹೆಚ್ಚಿಸುವಲ್ಲಿ, ಯಾವ ರೀತಿಯಿಂದ ಉಪಯೋಗಿಸಿಕೊಳ್ಳಬೇಕೆಂಬುದೇ ಒಂದು ಪ್ರಶ್ನೆಯಾಗಿದೆ. ಅಡುಗೆ ಮಾಡುವ ರೀತಿಯಲ್ಲಿಯೂ ವಿಚಾರ ಮಾಡುವ ರೀತಿಯಲ್ಲಿಯೂ ಬಹಳ ಸಾಮ್ಯವಿದೆ. ಮಂದವಾದ ಉರಿಯಲ್ಲಿ ಹದವಾಗಿ ಬೆಂದ ಅಡುಗೆಯು ಪ್ರಖರವಾದ ಉರಿಯಲ್ಲಿ ಬೆಂದ ಅಡುಗೆಗಿಂತ ರುಚಿಕಟ್ಟಾಗಿರುವಂತೆ, ಹೃದಯದ ಅಂತಃಶಕ್ತಿಯ ಒಲೆಯ ಮೇಲೆ ಮೆಲ್ಲಮೆಲ್ಲಗೆ ವಿಚಾರಗಳು ಪರಿಪಾಕಗೊಂಡು ಸಮಂಜಸವಾಗುತ್ತವೆ.

ಅರ್ಧ ಜಾಗ್ರತಾವಸ್ಥೆಯಲ್ಲಿ ನಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಪೂರ್ವದಲ್ಲಿ, ಅವುಗಳಿಗೆ ವಿಚಾರಶಕ್ತಿಯ ಕಾವನ್ನು ಕೊಡಬೇಕು. ಮೊದಲು ನಿಮ್ಮ ಎಲ್ಲ ಸಮಸ್ಯೆಗಳನ್ನೂ ಅವುಗಳಿಗೆ ಸಂಬಂಧಿಸಿದ ಉಪಸಮಸ್ಯೆಗಳನ್ನೂ ಒಂದು ಕಾಗದದಲ್ಲಿ ಬರೆದಿಟ್ಟುಕೊಳ್ಳಬೇಕು. ಆ ಮೇಲೆ ಆ ಕಾಗದವನ್ನು ಹರಿದೊಗೆದು, ಅದರ ವಿಷಯವಾಗಿ ಎಲ್ಲವನ್ನೂ ಮರೆತುಬಿಡಲು ಯತ್ನಿಸಬೇಕು ಸಮಸ್ಯೆಗಳನ್ನು ಮರೆಯಲು ಬೇರೆ ಯಾವುದಾದರೂ ಕೆಲಸದಲ್ಲಿ ತೊಡಗಬೇಕು. ಇದಕ್ಕೆ ಇನ್ನೊಂದು ವಿಧಾನವಿದೆ. ನಿಮ್ಮ ಸಮಸ್ಯೆಗಳನ್ನೆಲ್ಲ ಗೆಳೆಯರೊಂದಿಗೆ ಎಳೆಎಳೆಯಾಗಿ ಚರ್ಚಿಸಿ ವಾದವಿವಾದ ಮಾಡಬೇಕು. ಆದರೆ ಆಗಲೇ ಕೊನೆಯ ನಿರ್ಣಯವನ್ನು ತೆಗೆದುಕೊಳ್ಳಬೇಡಿ. ಮಧ್ಯದಲ್ಲಿಯೇ ಚರ್ಚೆಯನ್ನು ನಿಲ್ಲಿಸಿ ಆ ವಿಷಯವಾಗಿ ಎಲ್ಲವನ್ನು ಮರೆಯಲು ಯತ್ನಿಸಬೇಕು. ನಿಮ್ಮ ಸಮಸ್ಯೆಗಳ ವಿಷಯವಾಗಿ ಗಂಭೀರವಾಗಿ ಆಲೋಚಿಸಿ, ಮೆದುಳನ್ನು ದಣಿಸಿ, ಆ ಮೇಲೆ ವಿಶ್ರಾಂತಿ ತೆಗೆದುಕೊಳ್ಳುವುದು ಮೂರನೆಯ ವಿಧಾನವಾಗಿದೆ. ಹೀಗೆ ಮರೆತ ಸಮಸ್ಯೆಗಳನ್ನು ಅಂತಃಶಕ್ತಿಯು ತನ್ನ ಜವಾಬ್ದಾರಿಯಲ್ಲಿ ತೆಗೆದುಕೊಂಡು ಎಂದಾದರೊಂದು ದಿನ ನಿಮ್ಮ ವ್ಯಕ್ತ ಚೇತನದಲ್ಲಿ ನಿಮಗರಿಯದಂತೆ ಸಮಸ್ಯೆ ಬಿಡಿಸಿ ಅನಂತ ನೆಮ್ಮದಿಯ ಮಳೆಗರೆಯುತ್ತದೆ.

ಫ್ರೆಡರಿಕ್ ಗ್ರಾಂಟ್ ಬಾಂಟಿಂಗ್ ಚಿಕಿತ್ಸಾಶಾಸ್ತ್ರದ ಪ್ರಾಧ್ಯಾಪಕನಾಗಿದ್ದ. ೧೯೨೦ ರ ಅಕ್ಟೋಬರ್ ತಿಂಗಳ ಒಂದು ರಾತ್ರಿ ಆತ ಮರುದಿನದ ಉಪನ್ಯಾಸವನ್ನು ಸಿದ್ಧಗೊಳಿಸತೊಡಗಿದ್ದ. 'ಮಧುಮೇಹ'ದ ವಿಷಯವಾಗಿ ಅನೇಕ ಸಮಸ್ಯೆಗಳು ಅವನ ತಲೆಯಲ್ಲಿ ಸುತ್ತತೊಡಗಿದ್ದವು. ಈ ರೋಗದ ವಿಷಯವಾಗಿ ವಿಶೇಷವಾದ ವಿವರಣೆಯನ್ನು ಸಂಗ್ರಹಿಸಿಕೊಳ್ಳಲು, ನಾಯಿಗಳ ಮೇಲೆ ಪ್ರಯೋಗ ನಡೆಸಿ ಅವನು ದಣಿದುಹೋಗಿದ್ದ. ಕೊನೆಗೆ ದೀಪ ಆರಿಸಿ, ಕಣ್ಣು ಮುಚ್ಚಿಕೊಂಡು ಸುಮ್ಮನೆ ಮಲಗಿಬಿಟ್ಟ. ರಾತ್ರಿ ಎರಡು ಗಂಟೆ ಸುಮಾರಿಗೆ ಅವನಿಗೆ ಎಚ್ಚರವಾಯಿತು. ಚಟ್ಟನೆದ್ದು ದೀಪ ಹಚ್ಚಿ ಡೈರಿ ತೆಗೆದುಕೊಂಡು ಮೂರೇ ವಾಕ್ಯಗಳನ್ನು ಬರೆದ. "ನಾಯಿಯ ಶರೀರದಿಂದ ಮೇದೋಜೀರಕಗ್ರಂಥಿಯನ್ನು ಹೊರ ತೆಗೆಯಿರಿ. ಆರೇಳು ವಾರಗಳವರೆಗೆ ಅದು ಹಾಗೆಯೇ ಬಿದ್ದಿರಲಿ. ಆ ಮೇಲೆ ಅದರ ಅರ್ಕವನ್ನು ತಯಾರಿಸಿರಿ."

ಈ ಮೂರು ವಾಕ್ಯಗಳಿಂದಲೇ ಬಾಂಟಿಂಗ್ 'ಚಿಕಿತ್ಸಾ ಶಾಸ್ತ್ರ'ದ ಒಂದು ಮಹತ್ವಪೂರ್ಣ ಸಮಸ್ಯೆಗೆ ಪರಿಹಾರವನ್ನು ಹುಡುಕಿ ತೆಗೆದ. ಅವನ ಈ ಅದ್ಭುತವಾದ ಅಂತಃಶಕ್ತಿಯ ಕಾರ್ಯದಿಂದಲೇ 'ಇನ್‌ಸುಲೀನ್' ಶೋಧವಾಗಿ ಮಧುಮೇಹ ರೋಗಿಗಳಿಗೊಂದು ರಾಮಬಾಣ

# ಈಗ....

## ಆಕರ್ಷಕ ಹೊಸ




# ಪರಿಮಳ

ಇರುವ ಹೊಸ

## ರೆಕ್ಸೋನ

ಆಕರ್ಷಕ ಹೊಸ ಪರಿಮಳ—ಈಗ
ರೆಕ್ಸೋನ ಸೋಪು ನಿಮಗೆ ಕೊಡುವ ಕಾಣಿಕೆ!
ಆನಂದದಾಯಕ ರೆಕ್ಸೋನದಲ್ಲಿರುವ
ಸೌಂದರ್ಯದಾಯಕ ಅಪೂರ್ವ ಎಣ್ಣೆಗಳ
ಮಿಶ್ರಣದಿಂದ ನಿಮ್ಮ ಲಾವಣ್ಯ
ದಿನೇ ದಿನೇ ಅರಳುವುದು!




**ರೆಕ್ಸೋನ ಹಾಡನ್ನು ಕೇಳಿರಿ!** ಹಾಡಿದವರು: ಗೀತಾ ದತ್; ಸಂಗೀತ ದಿಗ್ದರ್ಶಕ: ಸಲಿಲ್ ಚೌಧರಿ. ನಿಮ್ಮ ಮೆಚ್ಚಿನ ಸಿನೆಮಾ ಮಂದಿರದಲ್ಲಿ ಅದನ್ನು ಆಲಿಸಿರಿ!

ಹಿಂದುಸ್ತಾನ್ ಲೀವರ್ ಲಿಮಿಟೆಡ್ ಅವರಿಂದ ಭಾರತದಲ್ಲಿ ತಯಾರಿಸಲ್ಪಟ್ಟಿದೆ. RP. 10-50 KN

ದೊರೆಯಿತು.

ಈ ಅಂತಃಶಕ್ತಿ ಕೆಲಸ ಮಾಡಬೇಕಾದರೆ ಸ್ವಲ್ಪ ಸಮಯ ಬೇಕು. ಒಮ್ಮೊಮ್ಮೆ ಅದು ಆರಂಭವಾಗಲಿಕ್ಕೆ, ಎಷ್ಟೋ ವಾರಗಳು ಬೇಕಾಗುತ್ತವೆ. ಈ ಸಮಯದಲ್ಲಿ ವಿವೇಕವೂ ಸಹ ಆ ಸಮಸ್ಯೆಗಳ ಮೇಲೆ ವಿಚಾರ ಮಾಡುತ್ತಿರುತ್ತದೆ. ಅದು ಪರಿಪೂರ್ಣ ದಶೆಗೆ ಬಂದಾಗ ಅಂತಃಶಕ್ತಿಯ ಕೆಲಸ ಆರಂಭವಾಗುತ್ತದೆ. ಯಾವುದೇ ನಿರ್ಣಯ ತೆಗೆದುಕೊಳ್ಳುವಾಗ, ಈ ಒಳ ಮನಸ್ಸು ಕಳೆದ ಘಟನೆಗಳನ್ನು ಬಹು ಸುಂದರವಾಗಿ ಉಪಯೋಗಿಸಿಕೊಳ್ಳುತ್ತದೆ. ಹೆನ್ರಿ ಫೋರ್ಡನಿಗೆ ೭೫ ನೆಯ ವರ್ಷ ತುಂಬಿದಾಗ, ಒಬ್ಬ ವ್ಯಕ್ತಿ—"ಪ್ರತಿಭೆ ಎಂದರೇನು?" ಎಂದು ಕೇಳಿದ "ಹಿಂದಿನ ಅನುಭವಗಳ ಸಾರ ಹಾಗೂ ಭಾವೀ ಜೀವನಕ್ಕೆ ಸಂಪಾದಿಸಿದ ಜ್ಞಾನ-" ಎಂದು ಅವನು ಉತ್ತರಿಸಿದ.

ಒಬ್ಬ ಪ್ರಸಿದ್ಧ ವ್ಯಾಪಾರಸ್ಥನಿಗೆ, ದಿನಾಲು ಅರ್ಧ ಗಂಟೆ ತನ್ನ ಆಫೀಸಿನ ಆರಾಮ ಖುರ್ಚಿಯಲ್ಲಿ ಒರಗಿ ಪುಸ್ತಕ ಓದುವ ಅಭ್ಯಾಸವಿತ್ತು. ಈ ಅರ್ಧ ಗಂಟೆಗಾಗಿ ಅವನು ಎಲ್ಲವನ್ನೂ ಮರೆತು ಬಿಡುತ್ತಿದ್ದ. ಅವನು ತನ್ನ ಈ ರೂಢಿಯ ವಿಷಯವಾಗಿ- "ವ್ಯಾಪಾರವನ್ನು ಹೇಗೆ ಹೆಚ್ಚಿಸಬೇಕು ಎಂದು ವಿಚಾರ ಮಾಡುತ್ತಾ ನಾನೆಂದಿಗೂ ಈ ಖುರ್ಚಿಯ ಮೇಲೆ ಕೂಡುವುದಿಲ್ಲ. ಆದರೆ ಇಲ್ಲಿ ಕೂಡುತ್ತಲೇ ವ್ಯಾಪಾರದ ಸಂಬಂಧವಾಗಿ ಅನೇಕ ವಿಚಾರಗಳಿಗೆ ಸಮರ್ಪಕವಾದ ಉತ್ತರ ತಾನೇ ಹೊಳೆಯುತ್ತದೆ"; ಎಂದು ಹೇಳುತ್ತಾನೆ.

ಸುಪ್ರಸಿದ್ಧ ಜರ್ಮನ್ ಮನಃಶಾಸ್ತ್ರಜ್ಞ ಹೆಲ್ಮ ಹೊಲ್ಟ್ಜ್, ಈ ವಿಷಯದ ಮೇಲೆ ಸಾಕಷ್ಟು ಸಂಶೋಧನೆ ಮಾಡಿ— "ಒಳ್ಳೆಯ ಕಲ್ಪನೆಗಳು ಸ್ಫೂರ್ತಿಯ ಹಾಗೆ ತಮ್ಮಷ್ಟಕ್ಕೆ ತಾವೇ ಬರುತ್ತವೆ. ಆದರೆ ಅವುಗಳನ್ನು ಪಡೆಯಲಿಕ್ಕೆ ವಿಚಾರ ಮಾಡಿಮಾಡಿ, ಮಾನಸಿಕ ದಣಿವು ಉಂಟಾದರೆ, ಅವೆಂದಿಗೂ ದೊರೆಯಲಾರವು-" ಎಂದು ಹೇಳಿದ್ದಾನೆ.

ಇಂತಹ ಅಂತಃಶಕ್ತಿಯನ್ನು ನೀವು ಉಪಯೋಗಿಸಿಕೊಳ್ಳದೆ ಹೋದರೆ, ನಿಮಗದೊಂದು ದೊಡ್ಡ ಹಾನಿ. ಈ ಶಕ್ತಿಯನ್ನು ಬೆಳಸಿಕೊಳ್ಳಲಿಕ್ಕೆ ಸಮಯ ಬೇಕಲ್ಲದೆ, ಮನಃಶಾಂತಿಯೂ ಅವಶ್ಯಕ. ಬಹುಶಃ ಈ ಶಕ್ತಿಯನ್ನು ಅರಿತುಕೊಂಡೇ ಪ್ರಸಿದ್ಧ ಶ್ರೀಮಂತ ಎಂಡ್ರ್ಯು ಮೆಲನ್ "ವಿಶ್ರಾಂತಿಯೇ ಸೌಭಾಗ್ಯ"ವೆಂದು ಹೇಳಿರಬೇಕು.

*



ರೋಗ ಯಾವಾಗಲೂ ಕುದುರೆಯನ್ನೇರಿ ಬಂದು ಕಾಲ್ನಡಿಗೆಯಲ್ಲಿ ಮರಳುತ್ತದೆ.

—ಲುಯಿಸ್ ನಿರ್‍ಝಾ

ಸುಖವು ತಲೆಯ ಮೇಲೆ ದುಃಖದ ಮುಕುಟವನ್ನು ಧರಿಸಿ ನಮ್ಮಲ್ಲಿಗೆ ಬರುತ್ತದೆ. ಸಂತೋಷ ಬೇಕಾದರೆ ನಾವು ದುಃಖವನ್ನು ಸ್ವಾಗತಿಸಲೇಬೇಕು.

—ಸ್ವಾಮಿ ವಿವೇಕಾನಂದ

ಸಂಗ್ರಾಹಕ: 'ರಾಗ' ಬಲ್ಲೂರಿ




# ಠಕ್ಕರ ಉರುಳು ಠಕ್ಕರ ಕೊರಳಿಗೆ

ಬುದ್ಧಿವಂತ

ಈ ಒಬ್ಬ ಬ್ರಿಟಿಶನಿಗಂತೂ ಭಾರತ ಋಣಿಯಾಗಿರಬೇಕು

೧೮೩೫ ರ ಫಾಲ್ಗುಣ ಮಾಸ. ಹೋಳಿಹಬ್ಬದ ಸಡಗರವೇ ಸಡಗರ. ಮಂಡಿ ಊರಿನಲ್ಲಿಯೂ ಜನ ಓಕಳಿಯಾಡುವುದರಲ್ಲಿ ಮಗ್ನರಾಗಿದ್ದರು. ಆದರೆ ಇಬ್ಬರು ಮಾತ್ರ ಈ ಸಂಭ್ರಮದಲ್ಲಿ ಭಾಗಿಗಳಾಗದೆ ವೇಗವಾಗಿ ಹೆಜ್ಜೆಹಾಕುತ್ತ ನಡೆದಿದ್ದರು. ಇವರಲ್ಲಿ ಎತ್ತರದ ಆಳಾಗಿದ್ದವನು ಮುಸಲ್ಮಾನನಂತೆ ಕಾಣಿಸುತ್ತಿದ್ದನು. ಗಿಡ್ಡ ಆಳು ಬನಿಯನಾಗಿದ್ದಿರಬೇಕು. ಈ ಅಪರಿಚಿತ ಪ್ರವಾಸಿಕರನ್ನೂ ತಮ್ಮ ಉತ್ಸವದಲ್ಲಿ ಸಮಾವೇಶಗೊಳಿಸಿಕೊಳ್ಳಲು ಮಂಡಿ ಊರಿನವರು ಪ್ರಯತ್ನಿಸಿದರು. ಆದರೆ ಹೋಳಿ ಹಬ್ಬದ ಉನ್ಮಾದಕರ ವಾತಾವರಣವನ್ನು ತಮ್ಮ ಹಿಂದೆ ಬಿಟ್ಟು ಇವರಿಬ್ಬರು ಘಟ್ಟದ ಅಡ್ಡತಿಡ್ಡ ಹಾದಿಯನ್ನು ತುಳಿಯುತ್ತ ನಡೆದರು. ಬಹುದೂರ ಹೋದಮೇಲೆ ಎದುರಿನ ಒಂದು ಗುಹೆಯಿಂದ ಒಂದು ಧ್ವನಿ ಬಂತು: "ಯಾರವರು?"

"ಭಾಯೀ ಅಲಿಖಾನ, ನಾನು ಫಿರಂಗಿ" ತನ್ನ ಜೊತೆಗಾರ ಮುಸಲ್ಮಾನನ ಕೈ ಹಿಡಿದು ನಿಲ್ಲಿಸುತ್ತ ಗಿಡ್ಡ ಬನಿಯಾ ಉತ್ತರವಿತ್ತ.

"ಬರ್ರಿ. ಒಳಗೆ ಬರ್ರಿ" ಒಂದು ಬಲಿಷ್ಠ ಕೈ

• "ಕಾದಂಬಿನಿ" ಯಿಂದ

ಗುಹೆಯ ಕಿರಿದಾದ ಬಾಗಿಲಿಂದ ಹೊರಗೆ ಬಂತು: "ನನ್ನ ಕೈ ಹಿಡಿದುಕೊಳ್ಳಿ. ನೀವು ಬಹಳ ತಡಮಾಡಿದಿರಿ."

"ಇಂದು ಹೋಳಿಹಬ್ಬ ತಾನೇ? ಊರನ್ನು ದಾಟಿ ಬರಲು ವಿಲಂಬವಾಯಿತು" ಬನಿಯಾ ಆ ಕೈಹಿಡಿದುಕೊಂಡು ಮೇಲಕ್ಕೇರುತ್ತ ಹೇಳಿದ. "ಊರವರ ಕಣ್ಣು ತಪ್ಪಿಸಿ..."

"ಕಣ್ಣು ತಪ್ಪಿಸಲೆಂದೇ ನಾವು ಹೋಳಿಹಬ್ಬದ ದಿನವನ್ನು ಆರಿಸಿದ್ದೇವೆ. ಮಹಾದೇವ ಮಹಾರಾಜರು ಬಂದು ಕುಳಿತು ಬಹಳ ಹೊತ್ತಾಯಿತು. ಬೇಗ ಬೇಗ ನಡೆಯಿರಿ" ಅಲೀಖಾನ ಮುಂದೆ ಮುಂದೆ ನಡೆಯುತ್ತ ಹೇಳಿದ.

ಎಲ್ಲಕ್ಕೂ ಹಿಂದೆ ನಡೆಯುತ್ತಿದ್ದ ಇಮಾಮಖಾನನು ಕಣ್ಣು ಹಿಗ್ಗಿಸಿ ಗುಹೆಯ ಒಳಗಿನ ಭಾಗವನ್ನು ನಿರೀಕ್ಷಿಸುತ್ತಿದ್ದ. ಹೊರಗಿನಿಂದ ಯಾವುದೋ ಹಿಂಸ್ರಪಶುವಿನ ಗವಿಯಂತೆ ಕಾಣಿಸುತ್ತಿದ್ದ ಈ ಗುಹೆ ಒಳಗೆ ತುಂಬಾ ವಿಶಾಲವಾಗಿತ್ತು.

ಇಮಾಮಖಾನನ ಮುಖ ಭೀತಿಯಿಂದ ಬಿಳುಪೇರಿರುವುದನ್ನು ಫಿರಂಗಿ ಕಂಡ. ಒಂದು ಮುರುವಿನಲ್ಲಿ ಅಲೀಖಾನ ಒಂದಿಷ್ಟು ಮುಂದೆ ಹೋದಾಗ ಆತ ಇಮಾಮನ ಕೈಯನ್ನು ಹಿಚುಕಿ ಪಿಸುಧ್ವನಿಯಲ್ಲಿ, "ಜಾಗ್ರತೆ. ಈ ಮುರುವಿನ ಆಚೆಯೆ ದೇವಸ್ಥಾನವಿದೆ; ಗಾಬರಿಯಾಗಬೇಡ. ಯಾರಿಗೂ ನಿನ್ನ ಮೇಲೆ ಸಂಶಯವುಂಟಾಗುವಂತೆ ಮಾಡಬೇಡ" ಎಂದ.

ಮೂವರೂ ಒಂದು ದುಂಡನ್ನ ಕೋಣೆಗೆ ಬಂದರು. ಇಲ್ಲಿ ಆಗಲೇ ಅನೇಕ ಜನ ಬಂದು ಕುಳಿತಿದ್ದರು. ಫಿರಂಗಿಯ ಮಗ್ಗಲಲ್ಲಿ ಕುಳಿತೊಡನೆ ಎದುರಿನ ದೃಶ್ಯವನ್ನು ಕಂಡು ಇಮಾಮಖಾನ ಬೆಚ್ಚಿದಂತಾದ. ಅಲ್ಲಿ ಮಹಾಕಾಲಿಯ ಅಕರಾಳ-ವಿಕರಾಳ ಮೂರ್ತಿಯಿತ್ತು. ಮೂರ್ತಿಯ ಕೈಯಲ್ಲಿ ತಲೆಬುರುಡೆಯಿತ್ತು. ಮುಖದಿಂದ ಹೊರಚಾಚಿದ್ದ ನಾಲಗೆ ರಕ್ತಕ್ಕಾಗಿ ಹಾತೊರೆಯುವಂತಿತ್ತು.

ಠಕ್ಕರ ಗುರು ವೃದ್ಧ ಮಹಾದೇವ ಬ್ರಾಹ್ಮಣ ಮಾತೆಯ ಚರಣತಲದಲ್ಲಿ ಕುಳಿತಿದ್ದ. ಆತ ಎದ್ದು ನಿಂತು ಹೇಳಿದ: "ಬಂಧುಗಳೇ, ನಮ್ಮ ಈ ಉದ್ಯೋಗ ಈಗ ಸುಮಾರು ಎರಡು ನೂರು ವರ್ಷಗಳಿಂದ ಚೆನ್ನಾಗಿ ನಡೆಯುತ್ತ ಬಂದಿದೆಯೆಂದು ನೀವು ಬಲ್ಲಿರಿ. ನಮ್ಮ ಮಂಡಳಿಯಲ್ಲಿ ಒಬ್ಬರಿಗಿಂತ ಒಬ್ಬರು ಚತುರರಿದ್ದಾರೆ. ಆದರೂ ಈಗಿತ್ತಲಾಗಿ ಕೆಲ ಸಮಯದಿಂದ ನಮ್ಮ ಜೀವನ ಕಠಿಣವಾಗುತ್ತ ನಡೆದಿದೆ. ಕರ್ನಲ್ ಸ್ಲೀಮನ್ ಎಂಬ ಬ್ರಿಟಿಶ್ ಅಧಿಕಾರಿಗೆ ನಮ್ಮ ಸುಳಿವು ಹತ್ತಿದೆ; ನಮ್ಮನ್ನು ನಿಃಪಾತ ಮಾಡಲು ಆತ ಪ್ರತಿಜ್ಞೆ ಮಾಡಿದ್ದಾನೆ. ಆತನ ಇತಿಶ್ರೀ ಮಾಡಿಸಲು ನಾನು ಅನೇಕ ಗುಪ್ತಚಾರರನ್ನು ನೇಮಿಸಿದರೂ ಅವರಿಂದ ಏನೂ ಮಾಡುವುದಾಗಿಲ್ಲ. ಈಗ ಒಮ್ಮಿಂದೊಮ್ಮೆ ಆತ ನಾಪತ್ತೆಯಾಗಿದ್ದಾನೆ."

ಠಕ್ಕರ ಪುರೋಹಿತ ಕಾಲೀಮಾತೆಯ ಮೂರ್ತಿಯತ್ತ ಕೈಮಾಡಿ, "ಆದರೆ ಆ ಧೂರ್ತ ಆಂಗ್ಲನು ಬೇಗನೆ ದೇವಿಗೆ ಬಲಿಯಾಗುತ್ತಾನೆ ಎಂದು ನನಗೆ ನಂಬಿಗೆಯಿದೆ" ಎಂದ.

ಸಭಿಕರ ತೀರ ಹಿಂದಿನ ಸಾಲಿನಲ್ಲಿ ಕುಳಿತಿದ್ದ ಇಮಾಮಖಾನ ಈ ಬ್ರಾಹ್ಮಣನ ಮಾತು ಕೇಳಿ ಭಯಕಂಪಿತನಾಗಿ ಹೋದ.

ಮಹಾದೇವ ಬ್ರಾಹ್ಮಣ ಸಂಯಮದಿಂದ ಕಣ್ಮುಚ್ಚಿಕೊಂಡು ಮತ್ತೆ ನುಡಿದ: "ನಾನೀಗ ಮುದುಕನಾದೆ. ಮಂಡಳಿಯ ಜನರಿಗೆ ಇದೇ ನನ್ನ ಕೊನೆಯ ಭೆಟ್ಟಿಯಾಗಬಹುದು. ನಿಮ್ಮೆಲರನ್ನೂ ಒಮ್ಮೆ ಕಣ್ತುಂಬ ನೋಡಬೇಕೆಂಬ ಅಭಿಲಾಷೆಯಿದೆ. ನೀವೆಲ್ಲರೂ ಸರತಿಯಂತೆ ಒಬ್ಬೊಬ್ಬರಾಗಿ ನನ್ನ ಬಳಿಗೆ ಬನ್ನಿ. ಈಗಿಲ್ಲಿ ಕೆಲ ಹೊಸ ಸದಸ್ಯರೂ ಬಂದಿರಬಹುದು. ಅವರ ಪೌರುಷದ ಕಥೆ ಕೇಳಿ ನನಗೆ ತುಂಬಾ ಆನಂದವಾದೀತು. ಜಯ ಕಾಳಿ!"

ಗುಹೆಯಲ್ಲಿ ತುಂಬಾ ಥಂಡಿಯಿದ್ದಿತಾದರೂ ಪುರೋಹಿತನ ಮಾತು ಕೇಳಿ ಇಮಾಮಖಾನನ

ಹಣೆಯ ಮೇಲೆ ಬೆವರು ಹನಿಗಳು ಮೂಡಿದವು. ಅವನ ಮುಂದಿನ ಸಾಲಿನಲ್ಲಿ ಕುಳಿತಿದ್ದವರು ಒಬ್ಬೊಬ್ಬರಾಗಿ ಎದ್ದು ಮುಂದೆ ಹೋಗಿ ಪುರೋಹಿತನಿಗೆ ತಮ್ಮತಮ್ಮ ಪರಿಚಯ ಮಾಡಿಕೊಡ ತೊಡಗಿದರು.

ಫಿರಂಗಿಯ ಮುಖ ಕೂಡ ಭಯದಿಂದ ಕಪ್ಪಿಟ್ಟಿತು. ಇಮಾಮ ಖಾನನ ಮನದ ತೆರೆಯಮೇಲೆ ಹಿಂದಿನ ಅನೇಕ ಚಿತ್ರಗಳು ಮೂಡತೊಡಗಿ-ದವು.

ಇಂಗ್ಲಂಡಿನ ಸೈನ್ಯದಲ್ಲಿ ಸಾಮಾನ್ಯ ಸೈನಿಕನಾಗಿದ್ದ ಸ್ಲೀಮನ್ ಈಸ್ಟ್ ಇಂಡಿಯಾ ಕಂಪನಿ ಸೇರಿ ಭಾರತಕ್ಕೆ ಬಂದ ಬಳಿಕ ತನ್ನ ಕರ್ತೃತ್ವ ಶಕ್ತಿಯಿಂದ ಮತ್ತು ಅಧಿಕಾರಿಗಳ ಕೃಪೆಯಿಂದ ಜಬಲಪುರದ ರೆಸಿಡೆಂಟ್ ಏಜಂಟನಾಗಿ ನೇಮಕ ಹೊಂದಿದ್ದ.

ಹೀಗಿರುವಾಗ ಒಂದು ದಿನ ಜಬಲಪುರದ ಬಳಿ ಕೊಲೆಯಾದ ಒಬ್ಬ ಬ್ರಿಟಿಶ್ ಸಿಪಾಯಿಯ ಹೆಣ ಸಿಕ್ಕಿತು. ಠಕ್ಕರ ಯಮಪಾಶದಿಂದ ಕುತ್ತಿಗೆ ಬಿಗಿದು ಪ್ರಾಣಹೋಗಿದ್ದ ಆ ದೇಹ ವಿಕೃತವಾಗಿತ್ತು. ಸ್ಲೀಮನ್ನನ ರಕ್ತ ಕುದಿಯಿತು. ಠಕ್ಕರ ನಿರ್ಮೂಲ ಮಾಡಲು ಆತ ಪ್ರತಿಜ್ಞೆ ಮಾಡಿದ. ಠಕ್ಕರ ಶೋಧಕ್ಕಾಗಿ ಸೈನ್ಯದ ತುಕಡಿಗಳು ಊರೂರು ತಿರುಗತೊಡಗಿದವು.

ಠಕ್ಕರ ಶೋಧಕ್ಕಾಗಿ ಸ್ಲೀಮನ್ ಅಡವಿ ಅಡವಿ ಅಲೆಯುತ್ತಿದ್ದ. ಒಂದು ದಿನ ಒಂದು ಗುಡ್ಡಗಾಡಿನ ರಸ್ತೆಯಲ್ಲಿ ಒಂದು ಗುಹೆಯಿಂದ ಚೀತ್ಕಾರವೊಂದು ಕೇಳಿ ಬರಲು ಸ್ಲೀಮನ್ ಅಲ್ಲಿಗೆ ಧಾವಿಸಿದ. ಗುಹೆಯೊಳಗೆ ಹೋಗಿ ಆತ ನೋಡಿದಾಗ ಎಲ್ಲ ಶಾಂತವಾಗಿತ್ತು. ನಿರ್ಜೀವವಾಗಿದ್ದ 'ಬೇಟೆ'ಯ ಕುತ್ತಿಗೆಗೆ ಒಂದು ರೇಶಿಮೆಯ ಕರವಸ್ತ್ರ ಉರುಲು ಹಾಕಿತ್ತು. ಮೂವರು ಬೇಟೆಗಾರರು ಹಣವನ್ನು ಶೋಧಿಸುತ್ತಿದ್ದರು. ನಿಷ್ಪಾಪನಾದ ಒಬ್ಬ ಪ್ರಯಾಣಿಕ ಮನೆಗೆ ಹೋಗುತ್ತಿದ್ದಾಗ ಹಾದಿಯಲ್ಲಿ ಮೂವರು ಠಕ್ಕರು ಅವನನ್ನು ನಿರ್ದಯವಾಗಿ ಕೊಲೆ ಮಾಡಿದ್ದರು.

ಕ್ರೋಧದಿಂದ ಉರಿದೆದ್ದ ಸ್ಲೀಮನ್ ಪಿಸ್ತೂಲಿನಿಂದ ಆ ಕೊಲೆಗಡುಕನ ಮೇಲೆ ಗುಂಡಿನ ಮಳೆಗರೆದ. ಒಬ್ಬಾತ ಅಲ್ಲೆ ಸತ್ತುಬಿದ್ದ. ಉಳಿದಿಬ್ಬರು ಓಡಿದರು. ಅವರಲ್ಲೊಬ್ಬನನ್ನು ಬೆನ್ನಟ್ಟಿ ಕರ್ನಲ್ ಸ್ಲೀಮನ್ ಹಿಡಿದು ಮೈಮುರಿ ಹೊಡೆದು ಎಚ್ಚರ ತಪ್ಪಿ ಬೀಳುವಂತೆ ಮಾಡಿದ. ಎಚ್ಚರ ತಪ್ಪಿದ ಅವನನ್ನು ದರದರ ಎಳೆಯುತ್ತಲೇ ತನ್ನ ಬಂಗಲೆಗೆ ತಂದ.

ಮೂರ್ಛೆ ತಿಳಿದ ಮೇಲೆ ಆ ಠಕ್ಕ ತನ್ನ ಹೆಸರು ಫಿರಂಗಿ ಎಂದ. ರೇಶಿಮೆ ಕರವಸ್ತ್ರದಲ್ಲಿ ರೂಪಾಯಿ ಕಟ್ಟಿ ಅವನ್ನು ಬೀಸಿ ಜನರ ಕುತ್ತಿಗೆಗೆ ಉರುಲು ಹಾಕುವುದು, ಆ ಮೇಲೆ ಉರುಲನ್ನು ಬಿಗಿಪಡಿಸುವುದು, ಸರಳ ಸ್ವಭಾವದ ಪ್ರಯಾಣಿಕರನ್ನು ಹಿತವಚನಗಳಿಂದ ಮರುಳುಗೊಳಿಸಿ 'ಬೇಟೆ'ಯ ಸಿದ್ಧತೆ ಮಾಡಿಕೊಳ್ಳುವುದು—ಇವೇ ಮುಂತಾದ ಠಕ್ಕರ ವಿದ್ಯೆಯನ್ನೆಲ್ಲ ಫಿರಂಗಿ ಕರ್ನಲ್ ಸ್ಲೀಮನ್ನನ ಎದುರು ಪ್ರದರ್ಶಿಸಿದ. ಆ ಮೇಲೆ ಸ್ಲೀಮನ್ನನನ್ನು ಅಡವಿಗೆ ಕರೆದೊಯ್ದು ಅಸಂಖ್ಯಾತ ಪ್ರೇತಗಳನ್ನು ಹುಗಿದಿದ್ದ ಸ್ಮಶಾನ ಭೂಮಿಯನ್ನೂ ತೋರಿಸಿದ. ಅಲ್ಲಿ ಸಹಸ್ರಗಟ್ಟಳೆಯಾಗಿ ಬಿದ್ದಿದ್ದ ಅಸ್ಥಿಪಂಜರಗಳನ್ನು ಕಂಡು ಸ್ಲೀಮನ್ ನಡುಗಿದ.

"ನಾನೂ 'ಠಕ್ಕ'ನಾಗಬಲೆನೆ?" ಆತ ಫಿರಂಗಿಯನ್ನು ಕೇಳಿದ.

"ಹುಜೂರ್, ಆಗಬಹುದಲ್ಲ. ಕಾಲೀಮಾ-ತೆಯ ಪ್ರಸಾದ ದೊರಕಿಸಿಕೊಂಡೊಡನೆ ಠಕ್ಕನಾದಂತೆಯೆ. ನಮ್ಮ ಕಾಲೀಮಾತೆಯ ಸಮ್ಮುಖದಲ್ಲಿ ಹಿಂದು, ಮುಸಲ್ಮಾನ, ಇಂಗ್ಲೀಷ್ ಎಂಬಿತ್ಯಾದಿ ಭೇದಭಾವವಿಲ್ಲವೇ ಇಲ್ಲ."

"ಸರಿ. ಠಕ್ಕನಾಗಲು ನನಗೆ ಸಹಾಯ ಮಾಡು. ಅವರ ಶಿಬಿರಕ್ಕೆ ನನ್ನನ್ನು ಕರೆದುಕೊಂಡು ನಡೆ. ಅಂದರೆ ನಾನು ನಿನಗೆ ಸರಕಾರದಿಂದ ಮಾಫಿ ಕೊಡಿಸುತ್ತೇನೆ, ಮಾತ್ರವಲ್ಲ, ಇನಾಮನ್ನೂ ಕೊಡಿಸುತ್ತೇನೆ."

ಅಂದಿನಿಂದ ಫಿರಂಗಿಯಿಂದ ಸ್ಲೀಮನ್ ಠಕ್ಕರ ವಿದ್ಯೆಯನ್ನು ಕಲಿಯತೊಡಗಿದ. ಮತ್ತು ಇಂದು ಅದೇ ಸ್ಲೀಮನ್ ಇಮಾಮಖಾನನಾಗಿ ಠಕ್ಕರ ಗುರು ಮಹಾದೇವ ಬ್ರಾಹ್ಮಣನೆದುರು ತನ್ನ ಪರಿಚಯವನ್ನು ಹೇಳಲು ಬಂದಿದ್ದ. ಠಕ್ಕರು ತಮ್ಮ ಪರಿಚಯ ಮಾಡಿಕೊಡುತ್ತಲಿದ್ದರು—

ನಾನು ಅತ್ತೀಖಾನ, ಬೇಟೆಯನ್ನು ಶೋಧಿಸುವವ...ನಾನು ಘಟ್ಟೀಜಿ...ಶವಗಳನ್ನು ಹೂಳುವವ...ನಾನು ಡೇಜಿ...೩೫೦ ಕೊಲೆ ಮಾಡಿದ್ದೇನೆ...ನಾನು ಬಹ್ರಾಮ...೯೩೧ ಕೊಲೆ...

"೯೩೧ ಕೊಲೆ...ಬಹ್ರಾಮ! ಶಾಭಾಸ್,"

ಸ್ಲೀಮನ್ನನ ಸರತಿ ಬಂತು.

"ನಾನು-ನಾನು ಇಮಾಮಖಾನ" ಬೇಗಬೇಗ ನುಡಿದು ಆತ ಹಿಂದಕ್ಕೆ ಸರಿದ.

"ತಡಿ. ನನ್ನ ಎದುರು ಬಂದು ಕುಳಿತುಕೊ. ನಿನ್ನ ಮುಖ ನನ್ನ ಕಣ್ಣಿಗೆ ಬೀಳಲಿ."

ಮುದುಕ ಬ್ರಾಹ್ಮಣನ ತೀಕ್ಷ್ಣ ದೃಷ್ಟಿ ಮತ್ತು ನಿರಿಗೆಗಟ್ಟಿ ಅವನ ಮುಖವನ್ನು ಕಂಡು ಗಾಬರಿಗೊಂಡ ಸ್ಲೀಮನ್ ತಡವರಿಸಿದ:

"ಇ-ಮಾ-ಮ-ಖಾ-ನ, ೬೪ ಕೊಲೆ..."

"ನೀನು ಯಾರು? ಎಲ್ಲಿಂದ ಬಂದೆ? ಈ ಮೊದಲೆಂದೂ ನಾನು ನಿನ್ನನ್ನು ನೋಡಿಲ್ಲ."

ಕರ್ನಲ್ ಭೀತಿಯಿಂದ ನಡುಗುತ್ತಿದ್ದ. ಅಷ್ಟರಲ್ಲಿ ಅವನ ಹೆಗಲ ಮೇಲೆ ಬಲಿಷ್ಠವಾದೊಂದು ಕೈ ಬಿತ್ತು. ಆತ ತಿರುಗಿ ನೋಡಿದರೆ ಬಹ್ರಾಮಖಾನ ರೇಶಿಮೆ ಕರವಸ್ತ್ರದ ಪಾಶವನ್ನು ಹಿಡಿದುಕೊಂಡು ಅವನ ಹಿಂದೆಯೆ ನಿಂತಿದ್ದ.

"ಮಹಾರಾಜರ ಪ್ರಶ್ನೆಗಳಿಗೆ ಉತ್ತರ ಕೊಡು" ಬಹ್ರಾಮ ಗರ್ಜಿಸಿದ.

"ನಾನು ಬಂಗಾಲದವ. ಅಲ್ಲಿ ಕಾಲೀಮಾತೆಯ ಕಾಣಿಕೆಯನ್ನು ಸರಿಯಾಗಿ ಸಮರ್ಪಿಸುವುದಾಗದೆ..." ಸ್ಲೀಮನ್ನನ ಧ್ವನಿ ಇಲ್ಲಿಗೆ ಪೂರಾ ಕುಗ್ಗಿ ಹೋಯಿತು.

"ನನಗೆ ಈತನಲ್ಲಿ ಸಂದೇಹ ಬರುತ್ತಿದೆ ಮಹಾರಾಜ" ಎಂದವನೇ ಬಹ್ರಾಮ ಮುಂದೆ ಬಂದ.

"ಅಂಹಂ, ತಡಿ" ಎಂದು ಪುರೋಹಿತ ಸ್ಲೀಮನ್ನನ ಬಳಿಗೆ ಬಂದು "ನೀನು ಉರುಲು ಬೀಸಬಲ್ಲೆಯಾ?" ಎಂದು ಕೇಳಿದ.

"ಹೌದು" ಸ್ಲೀಮನನಿಗೆ ಸಾವರಿಸಿಕೊಳ್ಳಲು ಎಡೆ ಸಿಕ್ಕಿತು.

"ಬೀಸಿ ತೋರಿಸು."

"ಮಹಾರಾಜರ ಅಪ್ಪಣೆ.." ಎಂದು ಸ್ಲೀಮನ್ ತನ್ನ ಕುತ್ತಿಗೆಯಿಂದ ಕರವಸ್ತ್ರವನ್ನು ಬಿಚ್ಚಿ ಅದರಲ್ಲಿ ಬೆಳ್ಳಿಯ ರೂಪಾಯಿಯನ್ನು ಕಟ್ಟಿ ಬೀಸಿದ. ಅದು ನೇರವಾಗಿ ಹೋಗಿ ಪುರೋಹಿತನ ಕೊರಳಿಗೆ ಬಿತ್ತು.

"ಶಾಭಾಸ್!"

ಅಷ್ಟರಲ್ಲಿ ಫಿರಂಗಿಯೂ ಸಾವರಿಸಿಕೊಂಡಿದ್ದ. ಆತ ಹೇಳಿದ: "ಮಹಾರಾಜ, ನಾನಿವನನ್ನು ಬಲ್ಲೆ. ಈತ ಕಾಲೀಮಾತೆಯ ನಿಜವಾದ ಭಕ್ತ. ಬಂಗಾಲದಲ್ಲಿ ಈತನ ಭೆಟ್ಟಿ ನನಗಾಯಿತು."

"ಆದರೂ ಈತನ ಮೇಲೆ ನನಗಿನ್ನೂ ವಿಶ್ವಾಸ ಹುಟ್ಟಲೊಲ್ಲದು ಮಹಾರಾಜ" ಎಂದ ಬಹ್ರಾಮ.

"ಹಾಗಿದ್ದರೆ ಇವನನ್ನು ನಿನ್ನ ಸಂಗಡ ಇಟ್ಟುಕೊ. ನೀನು ಹೇಗೂ ಬಂಗಾಲಕ್ಕೆ ಹೋಗುತ್ತಿರುವಿ. ಅಲ್ಲಿ ಇವನ ಬಗ್ಗೆ ವಿಚಾರಿಸಿ ನಂಬಿಕೆ ಮಾಡಿಕೊ."

ಇಮಾಮಖಾನ ಬಹ್ರಾಮನ ತಂಡದೊಂದಿಗೆ ಕಲಕತ್ತೆಯತ್ತ ನಡೆದ. ಕೊಲೆ-ಲೂಟಿಗಳನ್ನು ನಡೆಸಿ ತನ್ನ ಬಗೆಗೆ ಇವರಲ್ಲಿ ನಂಬಿಕೆಯನ್ನುಂಟು ಮಾಡಿಕೊಡುವ ಪ್ರಸಂಗ ತನ್ನ ಮೇಲೆ ಬರಬಹುದೇ ಎಂದು ಅವನ ಮನಸ್ಸಿನಲ್ಲಿ ಪುನಃ ಪುನಃ ಪ್ರಶ್ನೆಯೇಳುತ್ತಿತ್ತು.

ಒಂದು ದಿನ ಕುದುರೆ ಸವಾರನೊಬ್ಬ ಬಹ್ರಾಮನ ಎತ್ತಿನ ಬಂಡಿಯ ಬಳಿ ಬಂದು, "ಸರದಾರ, ಸಂತೋಷದ ಸಮಾಚಾರ. ಇಲ್ಲಿನ ಪೂರ್ವ ದಿಕ್ಕಿನಲ್ಲಿ ಏಳು ಮೈಲು ದೂರದಲ್ಲಿ ವ್ಯಾಪಾರಿಗಳ ತಂಡವೊಂದು ಬನಾರಸದತ್ತ ಹೋಗುತ್ತಿದೆ. ದೊಡ್ಡ ಬೇಟೆಯಂತೆ ಕಾಣಿಸುತ್ತದೆ" ಎಂದ.

"ವ್ಹಾ! ಸರಿ." ಬಹ್ರಾಮನ ಮುಖ ಅರಳಿತು.

"ಉರುಲು ಬೀಸುವವರನ್ನು ಜಾಗೃತಗೊಳಿಸು, ನಾವಲ್ಲಿಗೆ ಇಷ್ಟರಲ್ಲಿಯೇ ಬರುತ್ತೇವೆ."

ಬಹ್ರಾಮ ಎತ್ತಿನ ಗಾಡಿಯನ್ನು ಓಡಿಸಿ ಬೇಗನೆ ಆ ಸ್ಥಳವನ್ನು ತಲುಪಿದ. ವೇಷ ಬದಲಿಸಿಕೊಂಡು ವ್ಯಾಪಾರಿಗಳ ಹಿಂದಿಂದೆ ನಡೆದ.

"ಸ್ವಾಮಿ, ಬಡವನ ಮೇಲೆ ಕೃಪೆ ಮಾಡಿ" ಆತ ಆರ್ತಸ್ವರದಲ್ಲಿ ಬಿನ್ನವಿಸಿಕೊಂಡ."ನಾವು ಕಾಶಿಗೆ ಹೊರಟಿದ್ದೇವೆ. ಸಂಕಟಕ್ಕೆ ಸಿಲುಕಿದ್ದೇವೆ. ನಮಗೂ ನಿಮ್ಮ ಗಾಡಿಯಲ್ಲಿ ಸ್ಥಳ ಕೊಡಿ. ವಿಶ್ವನಾಥ ನಿಮ್ಮ ಮೇಲೆ ಅನುಗ್ರಹ ಮಾಡುತ್ತಾನೆ."

ವ್ಯಾಪಾರಿ ದುರ್ಗಮರಾಮ ಬೇಸರದಿಂದ ನುಡಿದ: "ಭಾಯಿ, ಗಾಡಿಯಲ್ಲಿ ಸ್ಥಳವಂತೂ ಇಲ್ಲ. ಆದರೂ ಬನ್ನಿ, ಹೇಗಾದರೂ ಸುಧಾರಿಸಿಕೊಂಡು ಹೋಗೋಣ. ಆದರೆ ನಿಮ್ಮ ಊಟ ತಿಂಡಿಯ ವ್ಯವಸ್ಥೆಯನ್ನು ನೀವೇ ಮಾಡಿಕೊಳ್ಳಬೇಕು."

ಸ್ಲೀಮನ್ ಸಹಿತ ತನ್ನ ಐವರು ಸಂಗಡಿಗರೊಂದಿಗೆ ಬಹ್ರಾಮ ಗಾಡಿಯಲ್ಲಿ ಕುಳಿತ.

ಗಾಡಿ ತುಸುದೂರ ಹೋದ ಮೇಲೆ ಬಹ್ರಾಮ ಆತನ ಕಿವಿಯಲ್ಲಿ ಉಸುರಿದ: "ಇಮಾಮು ಖಾನ, ಸುಸಂಧಿ ಒದಗಿಬಂದಿದೆ. ಇಂದು ರಾತ್ರಿಯೇ ಕಾಳೀಮಾತೆಯ ಕಾಣಿಕೆಯನ್ನು ಸಮರ್ಪಿಸಿಬಿಡು."

"ನಿಶ್ಚಿಂತರಾಗಿರಿ, ಸರದಾರ" ಇಮಾಮುಖಾನ ಹೇಳಿದ.

ಗಾಡಿಯಲ್ಲಿ ಕುಳಿತೇ ದುರ್ಗಮರಾಮ ತನ್ನ ಲೆಕ್ಕವನ್ನು ಸರಿಪಡಿಸಿಕೊಳ್ಳುತ್ತಿದ್ದ. ಅವನ ಲೆಕ್ಕವನ್ನೆಲ್ಲ ಚುಕ್ತಾ ಮಾಡಲು ಬಹ್ರಾಮ ಯೋಚಿಸುತ್ತಿದ್ದಂತೆ ಬಹ್ರಾಮನ ಹುಂಚಿಕೆಯನ್ನು ಹೇಗೆ ವಿಫಲಗೊಳಿಸಲಿ ಎಂದು ಸ್ಲೀಮನ್ ಯೋಚಿಸುತ್ತಿದ್ದ.

ರಾತ್ರಿಯಾದ ಮೇಲೆ ಬಹ್ರಾಮಖಾನ "ಸೇಠಜಿ, ದಿನಮಾನ ತುಂಬ ಕೆಸರಾಗಿದೆ. ಆ ಗುಡ್ಡದ ಆಚೆ ತಂಗೋಣ ಎನಿಸುತ್ತದೆ. ಸ್ಥಳ ಚೆನ್ನಾಗಿದೆ ಎತ್ತುಗಳ ಬಗ್ಗೆ ಕಾಳಜಿಯೂ ಇರದು" ಎಂದ.

ದುರ್ಗಮರಾಮ ಒಪ್ಪಿದ. ಅವಿವೇಕಿಯಾದ ವ್ಯಾಪಾರಿ ತಾನಾಗಿ ಮೃತ್ಯುಮುಖದಲ್ಲಿ ಬೀಳುತ್ತಿರುವುದನ್ನು ಸ್ಲೀಮನ್ ಕಂಡ. ಆ ಗುಡ್ಡದಾಚೆ ಉರುಲು ಬೀಸುವ ೨೦-೨೫ ಠಕ್ಕರು ಆಗಲೇ ಬಂದು ಸೇರಿದ್ದರು.

ಗಾಡಿಗಳನ್ನು ಅತ್ತ ನಡೆಸಿದರು. ಗುಡ್ಡದಾಚೆ ಒಂದೆಡೆ ಬಿಡಾರ ಹೂಡಿದರು. ಬಹ್ರಾಮ ತನ್ನವರೊಡನೆ ಅಡಿಗೆ ಮಾಡತೊಡಗಿದ. ದುರ್ಗಮರಾಮ ತನ್ನ ಆಳು-ಕಾಳುಗಳೊಡನೆ ಚದುರಂಗದಾಟದಲ್ಲಿ ಮಗ್ನನಾದ.

ರಾತ್ರಿ ಕಳೆದು ಬೆಳಗಾಗುತ್ತ ಬಂತು. ನಸುಕು ಹರಿಯಲು ಒಂದಿಷ್ಟು ಸಮಯವಿರುವಾಗ ಬಹ್ರಾಮ ತನ್ನ ಸಂಗಡಿಗರಿಗೆ ಸೂಚನೆಯಿತ್ತ. ಇಮಾಮಖಾನ ನೋಡುತ್ತಲೇ ಇದ್ದ. ಕಣ್ಮುಚ್ಚಿ ಕಣ್ತೆರೆಯುವಷ್ಟರಲ್ಲಿ ನುರಿತ ಕೈಗಳು ಉರುಲು ಬೀಸಿದವು. ಹತ್ತೇ ಹತ್ತು ನಿಮಿಷಗಳಲ್ಲಿ ದುರ್ಗಮರಾಮನ ಪರಿವಾರದ ಕಥೆ ಮುಗಿದುಹೋಯಿತು.

ಮನಸ್ಸಿದ್ದೂ ಸ್ಲೀಮನ್ ಏನೂ ಮಾಡಲಾರದೆ ಹೋದ. ಆತ ಫಿರಂಗಿಯನ್ನು ಕರೆದ. ಆದರೆ ಆತ ಮಾಯವಾಗಿದ್ದ.

"ಏನು ಬಹಾದ್ದೂರ, ಎಷ್ಟು ಜನರ ಬೇಟೆಯಾಡಿದೆ?" ಹಿಂದಿನಿಂದ ಬಂದ ಬಹ್ರಾಮ ಸ್ಲೀಮನ್‌ನ ಬೆನ್ನು ಚಪ್ಪರಿಸಿದ.

"ನಾ–ನಾನು–ನನಗೆ ಒಂದೂ ಬೇಟೆ ಸಿಗಲಿಲ್ಲ. ಎಲ್ಲವನ್ನೂ ನೀನೇ ಸ್ವತಃ..."

ಬಹ್ರಾಮ ಗಹಗಹಿಸಿ ನಕ್ಕ.

ತಟ್ಟನೆ ಸ್ಲೀಮನ್‌ನ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಆತ ಅಚಾನಕವಾಗಿ ತನ್ನ ಕರವಸ್ತ್ರ ಬೀಸಿ ಬಹ್ರಾಮನ ಕುತ್ತಿಗೆಗೆ ಉರುಲು ಬಿಗಿದ. ಲಟಲಟವೆಂದು ಬಹ್ರಾಮನ ಕುತ್ತಿಗೆ ಮುರಿದುಹೋಯಿತು.

"ಕೊಲೆ...ಖೂನಿ...ಮೋಸ..." ಸರದಾರನ ಭೀಕರ ಮೃತ್ಯುವನ್ನು ಕಂಡ ಒಬ್ಬ ಠಕ್ಕ ಕೂಗಿಕೊಂಡ. ಪರಿಸ್ಥಿತಿಯ ಗಂಭೀರತೆಯ ಕಲ್ಪನೆ

ಬಂದ ಸ್ಲೀಮನ್ ಒಂದು ದಿಕ್ಕಿನಲ್ಲಿ ಓಡಿದ. ಭೀತಿ-ಕ್ರೋಧಗಳಿಂದ ಹುಚ್ಚರಂತಾಗಿದ್ದ ಠಕ್ಕರು ಅವನನ್ನು ಬೆನ್ನಟ್ಟಿದರು. ಓಡ-ಓಡುತ್ತ ಇಳಿಜಾರಾದ ಆ ಗುಡ್ಡಗಾಡು ಹಾದಿಯಲ್ಲಿ ಒಂದೆಡೆ ಸ್ಲೀಮನ್ ಎಡವಿ ಬಿದ್ದವನೇ ದಡದಡ ಉರುಳಿ ಹೋದ. ಬೆನ್ನಟ್ಟಿ ಬರುತ್ತಿದ್ದ ಠಕ್ಕರು ಜಾಗ್ರತೆಯಿಂದ ಹೆಜ್ಜೆಯಿಡುತ್ತ ಬರುತ್ತಿದ್ದುದರಿಂದ ಬಹಳ ಹಿಂದುಳಿದುಹೋದರು.

ಕೆಳಗುರುಳಿ ಬಿದ್ದಿದ್ದ ಸ್ಲೀಮನ್ ಎದ್ದು ನಿಲ್ಲುವಷ್ಟರಲ್ಲಿ ಅಲೀಖಾನ ಕುದುರೆಯ ಮೇಲೆ ಕುಳಿತು ಬರುತ್ತಿರುವುದು ಕಾಣಿಸಿತು.

"ಏನು ಎಲ್ಲ ಸರಿಯಾಗಿದೆಯಷ್ಟೆ? ಗುಡ್ಡದ ಮೇಲಿಂದ ಓಡಿಬಂದದ್ದೇಕೆ ಇಮಾಮ ಖಾನ್ ?" ಅಲೀಖಾನ ಕೇಳಿದ.

"ಕಾಲೀಮಾತೆ ಮುನಿದುಕೊಂಡಳು ಅಲೀಖಾನ. ಬೇಟೆ ಕೈತಪ್ಪಿದ್ದರಿಂದ ಓಡಿ ಬರಬೇಕಾಯಿತು" ಸ್ಲೀಮನ್ ಮೈಧೂಳು ಕೊಡವಿಕೊಳ್ಳುತ್ತ ಹೇಳಿದ.

"ಆದರೆ ನೀನೇಕೆ ಓಡುತ್ತ ಬಂದೆ? ನಿಮಗಾಗಿ ಕುದುರೆಗಳನ್ನು ಕಳಿಸಿದ್ದೆವಲ್ಲ?"

ಬೆನ್ನಟ್ಟಿ ಬರುವವರಿಗೆ ಕುದುರೆಗಳು ಸಿಕ್ಕರೆ ಗತಿ? ಸ್ಲೀಮನ್ನನ ಎದೆ ಕಂಪಿಸಿತು.

"ಏನು ಯೋಚಿಸುತ್ತಿರುವೆ ಇಮಾಮಖಾನ್?"

"ಏನೂ ಇಲ್ಲ" ಎಂದವನೆ ಚಿರತೆಯ ವೇಗದಲ್ಲಿ ಸ್ಲೀಮನ್ ಅಲೀಖಾನನ ಮೇಲೆರಗಿದ. ಆತನನ್ನು ಕೆಳಗೆಳೆದು ಚೆನ್ನಾಗಿ ಥಳಿಸಿ ಅವನ ಕುದುರೆಯನ್ನೇರಿ ಹೊರಟ. ಆತ ತುಸು ಹೊತ್ತಿನಲ್ಲಿಯೆ ಆ ಗುಡ್ಡಗಾಡು ಪ್ರದೇಶವನ್ನು ದಾಟಿ ಇನ್ನೂ ಕತ್ತಲಿರುವಾಗಲೇ ಸಿಕರೋಲ ಪೋಲೀಸ್ ಸ್ಟೇಶನ್ನಿಗೆ ಬಂದ.

ಸಂಜೆಯಾಗುವ ಮೊದಲೇ ಪೋಲೀಸರೊಂದಿಗೆ ಸ್ಲೀಮನ್ ಘಟನಾ ಸ್ಥಳಕ್ಕೆ ಬಂದ.

"ಇದೇ ಸ್ಥಳ. ಆದರೆ ದುರ್ಗಮರಾಮನ ಹೆಣವೆಲ್ಲಿ?" ಸ್ಲೀಮನ್ ಕಾತರ ಸ್ವರದಲ್ಲಿ ಕೇಳಿದ.

"ಹೆಣ ಇಲ್ಲೇ ಇದೆ ಹುಜೂರ್" ಎಂದು ಡೇರೆಯಲ್ಲಿದ್ದ ದೊಡ್ಡ ಬುಟ್ಟಿಯೊಂದರ ಮುಚ್ಚಳ ತೆರೆದು ಫಿರಂಗಿ ಹೇಳಿದ.

"ಎಲಾ ಫಿರಂಗಿ? ನೀನಿನ್ನೂ ಇಲ್ಲೇ ಇದ್ದೀಯಾ?"

"ಹೌದು ಸಾಹೇಬ. ನನ್ನ ಪ್ರಾಣ ಉಳಿಸಿಕೊಳ್ಳಲು ಅಡಗಿ ಕುಳಿತಿದ್ದೆ. ನಿಮ್ಮನ್ನು ಹಿಡಿಯುವ ಗದ್ದಲದಲ್ಲಿ ಯಾರೂ ನನ್ನತ್ತ ಲಕ್ಷ್ಯ ವೀಯಲಿಲ್ಲ."

ಬಹ್ರಾಮನ ಮರಣ ಠಕ್ಕರ ಶಕ್ತಿಯನ್ನು ಕುಂದಿಸಲು ಪ್ರಬಲ ಸಾಧನವಾಗಿತ್ತು. ಸ್ಲೀಮನ್ನನ ಸ್ಪೆಶಲ್ ಸೈನ್ಯ ತುಕಡಿ ಠಕ್ಕರ ಬೆನ್ನು ಹತ್ತಿತು. ಮೂರು ವರ್ಷಗಳ ಕಾಲದ ಪರಿಶ್ರಮದ ನಂತರ ಕರ್ನಲ್ ಸ್ಲೀಮನ್ ೩೨೬೬ ಠಕ್ಕರನ್ನು ಹಿಡಿಯಲು ಸಮರ್ಥನಾದ. ಅವರಲ್ಲಿ ಕೆಲವರಿಗೆ ಫಾಶಿಶಿಕ್ಷೆಯಾಯಿತು. ಉಳಿದವರಿಗೆ ದೀರ್ಘ ಕಾರಾಗೃಹವಾಸ ಲಭಿಸಿತು.

ಸಾವಕಾಶವಾಗಿ ಠಕ್ಕರ ಈ ಹೀನ ಉದ್ಯೋಗ ನಿಂತಿತು.

ಸಾಮಾನ್ಯ ಸಿಪಾಯಿಯಾಗಿ ಭಾರತಕ್ಕೆ ಬಂದಿದ್ದ ಸ್ಲೀಮನ್ನನಿಗೆ ಬ್ರಿಟಿಶ್ ಸರಕಾರ 'ಸರ್' ಪದವಿಯನ್ನಿತ್ತಿತು. ೧೮೫೬ ರಲ್ಲಿ ಆತ ಇಂಗ್ಲೆಂಡಿಗೆ ಹೊರಟಾಗ ಕೆಲ ಭಾರತೀಯರು "ತಿರುಗಿ ಎಂದು ಬರುತ್ತೀರಿ?" ಎಂದು ಕೇಳಿದರು.

ಸ್ನೇಹ, ಸನ್ಮಾನ, ಮಮತೆಗಳ ನಾಡಾದ ಭಾರತವನ್ನು ಬಿಟ್ಟು ಹೊರಟು ನಿಂತಿದ್ದ ಸ್ಲೀಮನ್ನನ ಕಣ್ಣುಗಳಲ್ಲಿ ನೀರು ತುಂಬಿತು.

"ಹೇಳಲಾರೆ. ಬಹುಶಃ ಇದೇ ಕೊನೆಯ ಭೆಟ್ಟಿಯೇನೊ."

ಹಾಗೆಯೆ ಆಯಿತು. ಇಂಗ್ಲೆಂಡಿಗೆ ಪ್ರಯಾಣ ಮಾಡುತ್ತಿರುವಾಗಲೆ ೧೮೫೬, ಫೆಬ್ರುವರಿ ೧೦ ರಂದು ಹಡಗಿನಲ್ಲಿ ಸ್ಲೀಮನ್ನನ ಪ್ರಾಣಪಕ್ಷಿ ಹಾರಿಹೋಯಿತು. ಹೃದಯವಿಕಾರದಿಂದ ಸ್ಲೀಮನ್ ನಿದ್ರೆಯಲ್ಲಿಯೆ ಅಸು ನೀಗಿದ್ದ. *

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಅರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧. ಸಾಂಘಾತಿಕ

(ಅ) ಸೋಂಕುವ (ಆ) ಭಾರಿ ನಾಶಕರ (ಇ) ಸಂಘದೊಳಗಿನ (ಈ) ಜೋಡಿಯಾದ

೨. ಸಲೀಲ

(ಅ) ನೀರು (ಆ) ಹಾಸ್ಯ (ಇ) ಮೆತ್ತನ್ನ (ಈ) ಆಡಾಡಿದಂತೆ

೩. ವ್ಯಷ್ಟಿ

(ಅ) ಮಳೆ (ಆ) ಮಣ್ಣು (ಇ) ಬೇರೆ ಬೇರೆಯಾಗಿರುವಿಕೆ (ಈ) ಆರನೆಯ

೪. ಪರಿವೃತ

(ಅ) ಸುತ್ತುವರಿಯಲ್ಪಟ್ಟ (ಆ) ಉಪವಾಸ (ಇ) ಕಸಿದುಕೊಂಡು (ಈ) ಕೋಗಿಲೆ

೫. ಸಂಭೃತ

(ಅ) ಆರಿಸಿದ (ಆ) ಹುಟ್ಟಿದ (ಇ) ಕಲೆ ಹಾಕಿದ (ಈ) ಹಿಂತೆಗೆದುಕೊಂಡ

೬. ಪಡಸು

(ಅ) ದೊಡ್ಡ (ಆ) ಒರಟು (ಇ) ಹಿನ್ನೆಲೆ (ಈ) ಹಿಂದುಳಿದದ್ದು

೭. ಕಟಿಕಿ

(ಅ) ಕಂಡಿ (ಆ) ಬಳೆ (ಇ) ಮಲಿನ (ಈ) ಚುಚ್ಚುಮಾತು

೮. ನಿರ್ಬಂಧ

(ಅ) ಒತ್ತಾಯ (ಆ) ಬಿಡುಗಡೆ (ಇ) ತಡೆ (ಈ) ನಿರಾಯಾಸ

೯. ನಿರ್ಝರ

(ಅ) ಜಲಪಾತ (ಆ) ದೇವತೆ (ಇ) ಜ್ವರ ಬಿಡುವುದು (ಈ) ಧೈರ್ಯ

೧೦. ತ್ರೈಕಾಲಿಕ

(ಅ) ಮೂರು ಕಾಲಿನ (ಆ) ಸಂಜೆ (ಇ) ಮೂರು ಹೆಡೆಯ (ಈ) ಹಿಂದೆ, ಇಂದು ಮುಂದಿನ

೧೧. ಉಲ್ಲಸಿತ

(ಅ) ನಾಚಿದ (ಆ) ಸಂತೋಷಯುಕ್ತ (ಇ) ಹರಟುವ ಸ್ವಭಾವದ (ಈ) ತಿರುವುಮುರುವಾದ

೧೨. ಅವೆಸ್ತ

(ಅ) ಪಾರ್ಸಿಗಳ ವೇದ (ಆ) ರುಮಾಲಿ (ಇ) ಕ್ಷುಲ್ಲಕ ಪದಾರ್ಥ (ಈ) ಆವೇಶಗೊಂಡದ್ದು



## ‘ಶಬ್ದಭಾಂಡಾರ’ದ ಸರಿಯಾದ ಅರ್ಥಗಳು

೧. ಸಾಂಘಾತಿಕ (ಅ) ಭಾರಿ ನಾಶಕರ, ಅಪಾಯುಕರ, ಪ್ರಾಣಘಾತಕ, ಮಾರಕ. ಉದಾ — ಸಾಂಘಾತಿಕವಾದ ಆಯುಧಗಳು, ಸಾಂಘಾತಿಕವಾದ ಅಭಿಪ್ರಾಯ. [ಸಂ. ಸಂ + ಘಾತಿಕ—ದಿಂದ.]

೨. ಸಲೀಲ (ಈ) ಆಡಾಡಿದಂತೆ, ತಮಾಷೆಯಾಗಿ, ಪ್ರೀತಿಯಿಂದ. ಉದಾ-ಅವನು ಈ ಕಾರ್ಯವನ್ನು ಸಲೀಲವಾಗಿ ಮುಗಿಸಿದನು. [ಸಂ. ಸ = ಒಟ್ಟಿಗೆ, ಲೀಲಾ = ಆಟ.]

೩. ವ್ಯಷ್ಟಿ (ಇ) ಬೇರೆಬೇರೆಯಾಗಿರುವಿಕೆ, ಬಿಡಿಬಿಡಿಯಾಗಿರುವುದು; ಬೇರೆಬೇರೆ ಅಂಶಗಳಿಂದ ಕೂಡಿದ ಒಂದು ಕೂಟ. ಉದಾ—ದೇಶದ ಸಮಸ್ಯೆಗಳನ್ನು ವ್ಯಷ್ಟಿ ದೃಷ್ಟಿಯಿಂದ ನೋಡಬಾರದು. ವಿರುದ್ಧ — ಸಮಷ್ಟಿ. [ಸಂ.]

೪. ಪರಿವೃತ (ಅ) ಸುತ್ತುವರಿಯಲ್ಪಟ್ಟ, ಒಡಗೊಂಡ. ಉದಾ.—ಹೊಗಳುಭಟ್ಟರಿಂದ ಪರಿವೃತನಾದ ಮಂತ್ರಿ ಸತ್ಯವನ್ನು ಕಾಣ. [ಸಂ. ಪರಿ = ಸುತ್ತಲೂ, ವೃತ = ಬಳಸಲ್ಪಟ್ಟ.]

೫. ಸಂಭೃತ (ಇ) ಕಲೆಹಾಕಿದ, ಕೂಡಿಸಿದ, ಅಣಿಗೊಳಿಸಿದ, ಸಜ್ಜುಗೊಳಿಸಿದ; ತುಂಬಿದ, ಪೂರ್ತಿಗೊಳಿಸಿದ; ಸಾಗಿಸಿದ. [ಸಂ. ಸಂ = ಚೆನ್ನಾಗಿ, ಭೃತ = ತುಂಬಿದ.]

೬. ಪೆಡಸು (ಆ) ಒರಟು, ಗಟ್ಟಿತನ; ಬಿರುಸು; ಕಠಿನತನ. ಉದಾ.— ಪೆಡಸು ಮಾತು, ಪೆಡಸು ಲೋಹ, ಪೆಡಸುಮರ. [ಕನ್ನಡ.]

೭. ಕಟಕಿ (ಈ) ಚುಚ್ಚುಮಾತು, ಕನಿಕರವಿಲ್ಲದ ಮಾತು; ವ್ಯಂಗ್ಯ; ತಿರಸ್ಕಾರದ ನುಡಿ. ಉದಾ.— ಅವನ ಕಟಕಿಯಿಂದ ಬಹಳ ನೊಂದುಕೊಂಡೆ. [ಕನ್ನಡ.]

೮. ನಿರ್ಬಂಧ (ಅ) ಒತ್ತಾಯ, ಹಟದಿಂದ ಕೇಳುವುದು, ಒತ್ತಾಯದ ಬೇಡಿಕೆ; ಅವಸರ ಪಡಿಸುವುದು. ಉದಾ.— ಅವನ ನಿರ್ಬಂಧಕ್ಕೆ ಬಲಿಬಿದ್ದು ನಾನು ಈ ಕೆಲಸ ಮಾಡಿದೆ. [ಸಂ. ನಿರ್ = ತುಂಬಾ, ಬಂಧ = ಕಟ್ಟು.]

೯. ನಿರ್ಝರ (ಅ) ಜಲಪಾತ, ಧಬಧಬೆ, ಜೋಗ; ಬೆಟ್ಟದ ಹೊಳೆ. [ಸಂ.]

೧೦. ತ್ರೈಕಾಲಿಕ (ಈ) ಹಿಂದೆ, ಇಂದು ಮತ್ತು ಮುಂದಿನ, ಭೂತ ವರ್ತಮಾನ ಮತ್ತು ಭವಿಷ್ಯತ್ಕಾಲದ. ಉದಾ.— ಅವನ ಜ್ಞಾನ ತ್ರೈಕಾಲಿಕವಾದುದು; ಇದು ತ್ರೈಕಾಲಿಕ ಸತ್ಯ. [ಸಂ. ತ್ರಿ = ಮೂರು + ಕಾಲ – ದಿಂದ.]

೧೧. ಉಲ್ಲಸಿತ (ಆ) ಬೆಳಗುವ, (ಆದ್ದರಿಂದ) ಸಂತೋಷವುಳ್ಳ, ಸುಖಿಯಾದ, ಹರ್ಷದಲ್ಲಿರುವ, ಹರ್ಷದಾಯಕ. ಉದಾ— ಅವನ ಮುಖ ಇಂದು ಉಲ್ಲಸಿತವಾಗಿತ್ತು; ವಾತಾವರಣ ಉಲ್ಲಸಿತವಾಗಿತ್ತು. [ಸಂ, ಉತ್ = ಮೇಲೆ + ಲಸಿತ = ಪ್ರಕಾಶಮಾನ.]

೧೨. ಅವಸ್ತು (ಇ) ಕ್ಷುಲ್ಲಕ ಪದಾರ್ಥ; ಕ್ಷುದ್ರ ವ್ಯಕ್ತಿ. ಉದಾ. — ಅವನು ನನ್ನನ್ನು ಅವಸ್ತುವಾಗಿ ಕಾಣುತ್ತಾನೆ. [ಸಂ. ಅ = ಅಲ್ಲ, ವಸ್ತು.]

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

೬—೮ ಸರಿಯಿದ್ದರೆ ... ಸಾಧಾರಣ
೯—೧೦ ” ... ಉತ್ತಮ
೧೧—೧೨ ” ... ಅತ್ಯುತ್ತಮ

---

# ಥಲಿಡೊಮೈಡ್ ಬಗ್ಗೆ ಎಚ್ಚರಿಕೆ !

ಮುರಲೀಧರ

**ಔಷಧ ಪ್ರಪಂಚದ ಒಂದು ದುರಂತ ಕಥೆ**



ಆ ರಾಸಾಯನಿಕ ದ್ರವ್ಯದ ಹೆಸರು "ಥಲಿಡೊಮೈಡ್." ಅದು ಒಂದು ಹೊಸ ಔಷಧ. ಅದು ಸುಮಾರು ಮೂವತ್ತು ಸುಧಾರಿಸಿದ ದೇಶಗಳಲ್ಲಿ ಐವತ್ತು ಬೇರೆಬೇರೆ ವ್ಯಾಪಾರಿ ಹೆಸರುಗಳಿಂದ ಮಾರಲ್ಪಡುತ್ತಿದೆ. ಅದೇನೂ ಅಂಥ ಘನರೋಗ ನಿವಾರಕ ಔಷಧವಲ್ಲ. ವಾಡಿಕೆಯ ಮಾತಿನಲ್ಲಿ ಹೇಳಬೇಕಾದರೆ ಅದು ನಿದ್ರೆಯ ಗುಳಿಗೆ. ನಿದ್ರೆಯ ಗುಳಿಗೆಯ ರೂಪದಲ್ಲಿ ಅದು ಅತ್ಯಂತ ಜನಪ್ರಿಯವಾಗಿದೆ.

ಆದರೆ ಅದು ಈಚೆಗಿನ ವೈದ್ಯಕೀಯ ಇತಿಹಾಸದಲ್ಲೇ ಅಸಾಮಾನ್ಯವಾದ ಸಾಮೂಹಿಕ ದುರಂತಕ್ಕೆ ಕಾರಣವಾಯಿತು. ಬಸಿರಾಗಿದ್ದಾಗ ಅದನ್ನು ತೆಗೆದುಕೊಂಡ ಸಾವಿರಗಟ್ಟಳೆ ಮಾತೆಯರಿಗೆ ಅಂಗಹೀನ ಮಕ್ಕಳು ಹುಟ್ಟಿವೆ. ಕೆಲವುಗಳಿಗೆ ಕೈಗಳಿಲ್ಲ. ಕೆಲವಕ್ಕೆ ಕಾಲುಗಳಿಲ್ಲ ಕೆಲವಕ್ಕೆ ಕೈ-ಕಾಲು ಎರಡೂ ಇಲ್ಲ. ಕೆಲವವರ ಕೈಕಾಲುಗಳು ತಿರುಚಿದಂತಾಗಿವೆ.

ಕೆಲ ವರ್ಷಗಳ ಹಿಂದೆ ಪಶ್ಚಿಮ ಜರ್ಮನಿಯ ಒಂದು ಸುಪ್ರಸಿದ್ಧ ಔಷಧ ಕಂಪೆನಿಯು ಕಂಡು ಹಿಡಿದ ಒಂದು ಔಷಧ ದೈವೀ ವರವೇ ಎಂಬಂತೆ ಕಾಣಿಸಿತು. ೧೯೫೭ರಲ್ಲಿ ಅದು ಈ ಔಷಧವನ್ನು ಪೇಟೆಗೆ ತಂದಿತು. ಅದೇ 'ಥಲಿಡೊಮೈಡ್'.

ತತ್‌ಕ್ಷಣ ಅದು ಜನಪ್ರಿಯತೆಯನ್ನು ಸಂಪಾದಿಸಿತು. ಚಿಂತಾಶಾಮಕ ಮತ್ತು ನಿದ್ರಾದಾಯಕ ಔಷಧಗಳಲ್ಲಿ ಇದು ಆದರ್ಶಪ್ರಾಯವಾಗಿದ್ದಂತೆ ಕಂಡಿತು. ಅದು ಕೂಡಲೆ ಪರಿಣಾಮ ಉಂಟುಮಾಡುತ್ತಿತ್ತು; ಸಹಜ- ನಿದ್ರೆಯನ್ನು ತರಿಸುತ್ತಿತ್ತು; ಇತರ ನಿದ್ರೆ ಗುಳಿಗೆಗಳಂತೆ ಅದು ಮರುದಿನ ಬೆಳಗ್ಗೆ ಎದ್ದಾಗ ಮಬ್ಬುತನವನ್ನು ಉಂಟುಮಾಡುತ್ತಿದ್ದಿಲ್ಲ. ಅದು ಯಾವ ಉಪಪರಿಣಾಮಗಳನ್ನೂ ಉಂಟುಮಾಡುತ್ತಿದ್ದಿಲ್ಲ. ಅದು ಎಷ್ಟು ಹೆಚ್ಚು ತೆಗೆದುಕೊಂಡರೂ ಇತರ ನಿದ್ರಾ ಮಾತ್ರೆಗಳಂತೆ ಪ್ರಾಣಾಪಾಯ ಉಂಟುಮಾಡುತ್ತಿದ್ದಿಲ್ಲ. ಆದ್ದರಿಂದ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬವರಿಗೆ ಅದು ನಿಷ್ಪ್ರಯೋ-ಜಕವಾಗಿತ್ತು. ಮಕ್ಕಳ ಕೈಗೆ ಸಿಕ್ಕರೂ ಅದರಿಂದ ಕೇಡಾಗುವಂತಿದ್ದಿಲ್ಲ.

ಜರ್ಮನಿಯಲ್ಲಿ ಕೆಲವೇ ದಿನಗಳಲ್ಲಿ ಇದಕ್ಕೆ

ವಿಪರೀತ ಬೇಡಿಕೆ ಬರತೊಡಗಿತು. ಎಲ್ಲ ವರ್ಗದ ಜನರಿಗೂ ಅದು ಗುಣಕಾರಿಯೆನಿಸಿತ್ತು. ಆಸ್ಪತ್ರೆಗಳಲ್ಲಿ ಕಿರಿಕಿರಿ ಮಾಡುವ ರೋಗಿಗಳಿಗೆ ನಿದ್ದೆ ಬರಿಸಲು ಡಾಕ್ಟರರು ದೊಡ್ಡ ಪ್ರಮಾಣದಲ್ಲಿ ಅದನ್ನು ಉಪಯೋಗಿಸತೊಡಗಿದರು. ಹುಚ್ಚಾಸ್ಪತ್ರೆಗಳಲ್ಲಿ ಅದು ಪೀಡಿತ ಸಿಬ್ಬಂದಿಗೆ ಬಂದಿಷ್ಟು ಶಾಂತಿಯನ್ನೂ ಪುರಸೊತ್ತನ್ನೂ ಕೊಡಿಸಬಲ್ಲ ಏಕಮಾತ್ರ ಉಪಾಯವೆನಿಸಿತು. ಹೆರಿಗೆ ಆಸ್ಪತ್ರೆಗಳಲ್ಲಿ ಹಸುಳೆಗಳ ಕಿರಿಚಾಟ ನಿಲ್ಲಿಸಲು ಅದೊಳ್ಳೇ ಸಾಧನವಾಯಿತು.

ಔಷಧ ಎಷ್ಟು ನಿರುಪದ್ರವಿಯೆನಿಸಿತೆಂದರೆ ಅದನ್ನು ಡಾಕ್ಟರರ ಚೀಟಿ ಇಲ್ಲದೆ ಮಾರಲು ಮುಕ್ತಗೊಳಿಸಲಾಯಿತು. ಈಗ ಅದರ ಉತ್ಪಾದನೆ ಮಾರಾಟಗಳು ಟನ್‌ಗಟ್ಟಳೆಗೇರಿದವು. ಮನಶ್ಶಾಂತಿಯಿಲ್ಲದೆ ಬಳಲುವ ಉದ್ದಿಮೆಗಾರರೂ ಅಧಿಕಾರಿಗಳೂ ಆದನ್ನು ಧಾರಾಳವಾಗಿ ಬಳಸಿದರು. ಅಗ್ಗವಾಗಿ ದೊರೆಯುತ್ತಿರುವುದರಿಂದ ನಾನಾ ರೋಗಗಳಿಂದ ಬಳಲುತ್ತಿರುವವರು ಅದರ ಉಪಯೋಗ ಪಡೆದರು. ನ್ಯೂರಾಲ್ಜಿಯಾ, ಅಸ್ತಮಾ, ಕೆಮ್ಮು ಮೊದಲಾದ ರೋಗಗಳಿಗೆ ಕೊಡುವ ಔಷಧಿಗಳಲ್ಲಿ ಅದನ್ನು ಬೆರೆಸತೊಡಗಿದರು. ಹೃದಯವಿಕಾರ, ರಕ್ತದ ಒತ್ತಡಗಳು ಇದ್ದವರಿಗೂ ಅದು ಯಾವ ರೀತಿಯಲ್ಲೂ ಅಪಾಯಕರವಾಗಿರಲಿಲ್ಲ. ಮಕ್ಕಳಿಗೆ ಅದನ್ನು ಕೊಟ್ಟುಬಿಟ್ಟರೆ ತಾಯಿಯರು ಯಾವ ತೊಂದರೆಯೂ ಇಲ್ಲದೆ ತಮ್ಮ ಕೆಲಸಗಳನ್ನು ಮಾಡಬಹುದಾಗಿತ್ತು.

ಎಲ್ಲಕ್ಕೂ ಹೆಚ್ಚಾಗಿ ಬಸಿರಿಯರಿಗೆ ಅದು ಅತಿ ದೊಡ್ಡ ಮಿತ್ರನಾಯಿತು. ಪ್ರಾರಂಭದ ತಿಂಗಳಲ್ಲಿ ಕಾಣಿಸಿಕೊಳ್ಳುವ ಓಕರಿಕೆ, ತಲೆತಿರುಗುವಿಕೆ, ನಿದ್ರಾನಾಶ ಮೊದಲಾದ ತ್ರಾಸದಾಯಕ ಲಕ್ಷಣಗಳನ್ನೆಲ್ಲ ಇದು ಲೀಲಾಜಾಲವಾಗಿ ನಿವಾರಿಸುತ್ತಿತ್ತು.

'ಥಲಿಡೊಮೈಡ್'ನ ಕೀರ್ತಿ ವಾಯುವೇಗದಿಂದ ಹಬ್ಬಿತು. ಪಶ್ಚಿಮ ಜರ್ಮನಿಯಿಂದ ಸ್ವೀಡನ್, ಬೆಲ್ಜಿಯಂ, ಆಸ್ಟ್ರೇಲಿಯ, ಕೆನಡಾ ಮೊದಲಾದ ದೇಶಗಳಲ್ಲಿ ಅದು ಪ್ರಸಾರಹೊಂದಿತು. ಜರ್ಮನ್ ಕಂಪನಿಯ ಸಹಯೋಗದಿಂದ ಈ ದೇಶಗಳಲ್ಲಿ ನೇರವಾಗಿ ಥಲಿಡೊಮೈಡ್ ಉತ್ಪಾದಿಸಲು ಕಂಪೆನಿಗಳು ಮುಂದೆ ಬಂದವು. ಅದನ್ನು ಒಂದೊಂದು ದೇಶದಲ್ಲಿ ಒಂದೊಂದು ವ್ಯಾಪಾರಿ ಹೆಸರಿನಿಂದ ಮಾರುಕಟ್ಟೆಗೆ ತರಲಾಯಿತು. ಜರ್ಮನಿಯಲ್ಲಿ, 'ಕಾಂಟೆರ್ಗನ್' ಇಂಗ್ಲಂಡಿನಲ್ಲಿ 'ಡಿಸ್ಟವಾಲ್', ಕೆನಡಾದಲ್ಲಿ 'ಟಲಿಮಾಲ್' ಮತ್ತು 'ಕೆವಾಡನ್'– ಇನ್ನೂ ಬೇರೆ ಬೇರೆ ದೇಶಗಳಲ್ಲಿ ಇನ್ನೂ ಏನೇನೋ ಹೆಸರುಗಳು. ಸಂಯುಕ್ತ-ಸಂಸ್ಥಾನ ಅಮೇರಿಕದಲ್ಲಿ ಒಂದು ಕಂಪೆನಿ ಈ ಔಷಧದ ಗುತ್ತಿಗೆ ಹಿಡಿದು ಉತ್ಪಾದಿಸಲಾರಂಭಿಸಿತಾದರೂ ಕೇಂದ್ರ ಸರಕಾರದ ಆರೋಗ್ಯ ಖಾತೆಯಲ್ಲಿದ್ದ ಸಂಶಯ ಸ್ವಭಾವದ ಒಬ್ಬ ಮಹಿಳಾ ಡಾಕ್ಟರು ಅದನ್ನು ಮಾರುಕಟ್ಟೆಗೆ ತರಲು ಆತಂಕವೊಡ್ಡಿ ಪುಣ್ಯ ಕಟ್ಟಿಕೊಂಡಳು. ಆದರೆ ಅನೇಕ ಸ್ತ್ರೀಪುರುಷರು ಯುರೋಪಿನಿಂದ ಅದನ್ನು ಖಾಸಗಿಯಾಗಿ ತರಿಸಿಕೊಂಡು ಬಳಸಹತ್ತಿದರು.

ಇತ್ತ ಯುರೋಪಿನ ದೇಶಗಳಲ್ಲಿ ವಿಚಿತ್ರ ಸಂಗತಿಗಳು ಜರಗತೊಡಗಿದವು ಈ ವರೆಗೆ ತೀರ ಅಪರೂಪವಾಗಿದ್ದ 'ಫೊಕೊಮೇಲಿಯ' ಪ್ರಕರಣಗಳು ಅತಿಶಯವಾಗಿ ಹೆಚ್ಚುತ್ತಿರುವುದನ್ನು ಕಂಡು ಡಾಕ್ಟರರು ದಿಗ್ಭ್ರಮೆಗೊಂಡರು. ಫೊಕೊಮೇಲಿಯ ಎಂದರೆ ಗರ್ಭಸ್ಥ ಶಿಶುಗಳ ಕೈಕಾಲುಗಳು ಮೊಂಡಾಗಿ (ಅಥವಾ ತಿರುವಿದಂತಾಗಿ) ಜನಿಸುವಿಕೆ. ಈ ವಿಕಾರವು ಹಿಂದೆ ವಿರಳವಾಗಿದ್ದುದರಿಂದ ಎಷ್ಟೋ ಜನ ಡಾಕ್ಟರರೇ ಅಂಥ ಪ್ರಕರಣಗಳನ್ನು ಕಣ್ಣಾರೆ ಕಂಡಿದ್ದಿಲ್ಲ. ಈಗಾದರೋ ನೂರುಗಟ್ಟಳೆಯಲ್ಲಿ ಈ ಪ್ರಕರಣಗಳ ವರದಿಗಳು ಬರತೊಡಗಿದವು

ಡಾಕ್ಟರರು ಇಂಥ ಕೂಸುಗಳಿಗೆ ಜನ್ಮವಿತ್ತ ತಾಯಂದಿರ ಪ್ರಕರಣಗಳನ್ನು ಆಮೂಲಾಗ್ರವಾಗಿ ಶೋಧಿಸಿದರು. ಆನುವಂಶಿಕತೆ, ಎಕ್ಸ್‌ರೇ, ಕಾರ್ಟಿಸೋನ್, ಇನ್‌ಸುಲಿನ್, ಬಸಿರಾಗಿದ್ದಾಗಗೊಬ್ಬರ ರೋಗ—ಯಾವುದೂ ಈ ವಿಕಾರಕ್ಕೆ ಕಾರಣವಾಗಿ ಕಂಡುಬರಲಿಲ್ಲ.

ಕಳೆದ ವರ್ಷ ನವಂಬರದಲ್ಲಿ ಜರ್ಮನಿಯ ಡ್ಯುಸೆಲ್‌ಡಾರ್ಫಿನ ಒಂದು ವೈದ್ಯಕೀಯ ಪರಿಷತ್ತಿನಲ್ಲಿ ಡಾ. ವಿಡುಕಿಂಡ್ ಲೆನ್ಸ್ ಎಂಬ

ಹಾಂಬುರ್ಗ್ ವಿಶ್ವವಿದ್ಯಾಲಯದ ವೈದ್ಯಕೀಯ ಪ್ರೊಫೆಸರರು ಪ್ರಥಮತಃ ಈ ಅಭೂತಪೂರ್ವ ಶಿಶುವಿಕಾರಕ್ಕೆ ಥಲಿಡೊಮೈಡೇ ಕಾರಣವಿರಬೇಕೆಂಬ ಸಂಶಯವನ್ನು ವ್ಯಕ್ತಪಡಿಸಿದರು. ಅವರ ಪಟ್ಟಣವಾದ ಹ್ಯಾಂಬುರ್ಗೊಂದರಲ್ಲೇ ಮೂರು ವರ್ಷಗಳಲ್ಲಿ (೧೯೫೯-೬೧) ೨೫೯ ಮೊಂಡುಕೈಕಾಲಿನ ಮಕ್ಕಳು ಹುಟ್ಟಿದ್ದವು. ಅವರು ನಡೆಸಿದ ಪರಿಶೀಲನೆಯಲ್ಲಿ ಪ್ರತಿಯೊಂದು ಪ್ರಕರಣದಲ್ಲಿಯೂ ಈ ಮಕ್ಕಳ ತಾಯಂದಿರು ಗರ್ಭಿಣೀ ಅವಸ್ಥೆಯ ಮೊದಲ ತಿಂಗಳುಗಳಲ್ಲಿ ಥಲಿಡೊಮೈಡನ್ನು ದೊಡ್ಡ ಪ್ರಮಾಣದಲ್ಲಿ ತೆಗೆದುಕೊಂಡದ್ದು ಕಂಡುಬಂತು.

ಈ ಸುದ್ದಿ ಪ್ರಕಾಶಕ್ಕೆ ಬಂದ ಕೂಡಲೆ ಜರ್ಮನಿಯಲ್ಲಿ ಈ ಔಷಧ ಮಾರಾಟ ನಿಲ್ಲಿಸಲಾಯಿತು. ಒಂದೊಂದಾಗಿ ಇತರ ದೇಶಗಳಲ್ಲಿ ಸರಕಾರಗಳು ಥಲಿಡೊಮೈಡಿನ ಉತ್ಪಾದನೆ ಮಾರಾಟಗಳನ್ನು ತಡೆಯುವ ಆಜ್ಞೆ ಹೊರಡಿಸಿದವು. ಭಾರತ ಸರಕಾರ ಹತ್ತು ತಿಂಗಳು ತಡವಾಗಿ ಮೊನ್ನೆ ಸಪ್ಟೆಂಬರಿನಲ್ಲಿ ಥಲಿಡೊಮೈಡಿನ ಮಾರಾಟ ಮತ್ತು ಆಯಾತವನ್ನು ಪ್ರತಿಬಂಧಿಸಿತು.

ನಿದ್ದೆಗೇಡಿಗಳ ಕೈವಾರಿಯಾದ ಈ ಔಷಧವೇ ಈ ವಿಕಾರ ಮಕ್ಕಳ ಜನನಕ್ಕೆ ಕಾರಣವೆಂಬುದರಲ್ಲಿ ಈಗ ಸಂದೇಹವುಳಿದಿಲ್ಲ. ಅದನ್ನು ಅತಿ ಹೆಚ್ಚಾಗಿ ಬಳಸಿದ ಪಶ್ಚಿಮ ಜರ್ಮನಿಯಲ್ಲೇ ಎಲ್ಲಕ್ಕೂ ಹೆಚ್ಚಾಗಿ ಮೊಂಡು ಕೈಕಾಲಿನ (ಕೆಲವೇಳೆ ಕೈಕಾಲೇ ಇಲ್ಲದ) ಮಕ್ಕಳು ಹುಟ್ಟಿವೆ. ಅಲ್ಲಿಯೂ ಯಾವಾವ ಪ್ರದೇಶದಲ್ಲಿ ಅದರ ಬಳಕೆ ಹೆಚ್ಚಾಗಿತ್ತೋ ಅಲ್ಲೇ ಇಂಥ ಪ್ರಕರಣಗಳ ಆಧಿಕ್ಯವಿದೆ. ಪಶ್ಚಿಮ ಜರ್ಮನಿಯೊಂದರಲೇ ೩,೦೦೦ ಕ್ಕೂ ಮಿಕ್ಕಿ ಇಂಥ ಮಕ್ಕಳು ಹುಟ್ಟಿರಬೇಕು.

ಕೈಕಾಲುಗಳು ಮೊಟಕಾಗುವುದು ಮಾತ್ರವಲ್ಲದೆ, ಕಿವಿಯೇ ಇಲ್ಲದಿರುವುದು, ಕಣ್ಣುಗಳ ದೋಷಗಳು, ಗಂಟಲು ಮತ್ತು ಕರುಳಿನ ವಿಕಾರಗಳು ಕೂಡ ಗರ್ಭಸ್ಥ ಶಿಶುಗಳಲ್ಲಿ ಈ ಔಷಧದಿಂದ ಉಂಟಾದ ಉದಾಹರಣೆಗಳಿವೆ.

ಗರ್ಭಸ್ಥ ಶಿಶುಗಳಲ್ಲಿ ಈ ಅಂಗವಿಕಾರವು, ನೀರು ನಿಂತು ೩೦ ರಿಂದ ೪೦ ದಿನಗಳ ನಡುವಣ ಅವಧಿಯಲ್ಲಿ ಥಲಿಡೊಮೈಡ್ ತೆಗೆದುಕೊಂಡರೆ ಆಗುವಂತೆ ಕಾಣುತ್ತದೆ. ಭ್ರೂಣದಲ್ಲಿ ಕೈಕಾಲು

## ಎಚ್ಚರಿಕೆ!

ಭಾರತದಲ್ಲಿಯೂ ಥಲಿಡೊಮೈಡ್ ಮತ್ತು ಅದು ಇರುವ ಕೆಲ ಔಷಧಗಳು ಪ್ರಸಾರಕ್ಕೆ ಬಂದಿವೆಯೆಂದು ತಿಳಿದಿದೆ. ಅದನ್ನು ನೀವು ಉಪಯೋಗಿಸುತ್ತಿದ್ದರೆ ಬಿಟ್ಟುಬಿಡಿರಿ. ಈ ಕೆಳಗೆ ಥಲಿಡೊಮೈಡ್‌ಯುಕ್ತ ಔಷಧಗಳ ಯಾದಿ ಕೊಟ್ಟಿದೆ.

Algosediv
Asmadion
Asmaval
Bonbrrin
Calmore
Contergan
Coronarobetin
Distaval
Ectiluran
Enterosediv
Gastrinide
Glutanon
Grippex
Imidan
Imidene
Imidene Ipnotico
Isomin
Kevadon
Lulamin
Neo Nibrol
Neosydyn
Neurosedyn
Nevrodyn
Noctosediv
Noxodyn
Poly-giron
Polygripan
Predni-sediv
Profarmil
Psycholiquid
Psychotablets
Quetimid
Quietoplex
Sanodormin
Sedalis
Sedimide
Sedin
Sediserpil
Sedoval K 17
Softenil
Softenon
Talimol
Tensival
Thalin
Thalinette
Theophilcholine
Ulcerfen
Valgis
Valgraine

ಗಳ ರೂಪರೇಷೆಯು ಉದಯವಾಗುವಾಗ ಈ ಔಷಧವು ಮಗುವಿನ ಬೆಳವಣಿಗೆಯಲ್ಲಿ ಏನೋ ಆತಂಕವನ್ನು ತಂದೊಡ್ಡುತ್ತಿರಬೇಕು. ಈ ಅವಧಿಯಲ್ಲಿ ಥಲಿಡೊಮೈಡ್ ಸೇವಿಸಿದ ಬಸಿರಿಯರಲ್ಲಿ ಸೇಕಡಾ ೨೦ಕ್ಕೂ ಹೆಚ್ಚು ಜನರು ಮೋಟಕು ಕೈಕಾಲುಗಳ ಮಕ್ಕಳಿಗೆ ಜನ್ಮವೀಯಬಹುದೆಂದು ಅಂದಾಜು ಇದೆ.

ಥಲಿಡೊಮೈಡಿನಿಂದಾಗಬಹುದಾದ ಅಪಾಯ ಇದೊಂದೇ ಅಲ್ಲ. ಪ್ರಾಯಪ್ರಬುದ್ಧರಲ್ಲಿ ಕೂಡ ಇದನ್ನು ಸಂತತವಾಗಿ ದೀರ್ಘಕಾಲ ಸೇವಿಸಿದವರಿಗೆ ಕೈಗಳಲ್ಲಿ ಒಂದು ಬಗೆಯ ಕಚುಕಳಿಯಾದ ಅನುಭವ, ಬರಬರುತ್ತ ಸ್ಪರ್ಶಜ್ಞಾನ ದುರ್ಬಲವಾಗುವುದು ಮತ್ತು ಕೊನೆಗೆ ಸಂಪೂರ್ಣ ಸಂಜ್ಞಾಹೀನವಾಗಿ ಹೆಬ್ಬೆರಳು ನಿಶ್ಚೇತನವಾಗುವುದು ಕೂಡ ಗೊತ್ತಾಗಿದೆ. ಪೊಲಿನ್ಯೂರೈಟಿಸ್ ಎಂಬ ಈ ರೋಗದ ಲಕ್ಷಣಗಳು ವ್ಯಕ್ತವಾದ ಮೇಲೂ ಥಲಿಡೊಮೈಡ್ ಸೇವನೆ ನಿಲ್ಲಿಸದಿದ್ದರೆ ಅದನ್ನು ಆ ಮೇಲೆ ಗುಣಪಡಿಸಲೇಬಾರದು.

ಇಷ್ಟು ಅಪಾಯಕರ ಔಷಧವನ್ನು ಯಾವ ಸರಕಾರದ ಆರೋಗ್ಯಖಾತೆಯಾದರೂ ಹೇಗೆ ಪೇಟೆಗೆ ತರಲು ಅನುಮತಿ ಕೊಟ್ಟಿತು? ಇದಕ್ಕೆ ಉತ್ತರವೆಂದರೆ, ಕಂಪೆನಿಯು ಇಲಿಗಳ ಮೇಲೆ, ಬಸಿರಿಲಿಗಳ ಮೇಲೆ ಕೂಡ, ಮೂರು ವರ್ಷಕಾಲ ಇದರ ಪ್ರಯೋಗ ಮಾಡಿತ್ತು. ಯಾವ ಪ್ರತಿಕೂಲ ಲಕ್ಷಣವೂ ಕಾಣಿಸಿರಲಿಲ್ಲ. ಆದರೆ ಈ ಸಂದೇಹ ಹುಟ್ಟಿದ ಮೇಲೆ ಬಸಿರು ಮೊಲಗಳ ಮೇಲೆ ಅದನ್ನು ಪ್ರಯೋಗಿಸಿದಾಗ ಅವು ವಿಕೃತ ಮರಿಗಳನ್ನೇ ಹಡೆದವು. ಇಲಿಗಳಿಗೆ ನಿರಪಾಯಿಯಾದದ್ದು ಮೊಲಗಳಿಗೂ ಮಾನವನಿಗೂ ಘಾತಕವಾಗಬಲ್ಲದೆಂಬ ಪಾಠ ಇದರಲ್ಲಿ ಅಡಕವಾಗಿದೆ.

ತಪ್ಪು ಯಾರದೇ ಇರಲಿ, ಜಗತ್ತಿನ ಅರೆವಾಸಿ ಪ್ರದೇಶದಲ್ಲಿ ಈ ಔಷಧ ಸೇವನೆಯಿಂದ ಅಂಗಹೀನವಾಗಿ ಜನಿಸಿದ ಮಕ್ಕಳ ಮತ್ತು ಅವುಗಳ ತಂದೆತಾಯಂದಿರ ಹಾಗು ಅದನ್ನು ಸೇವಿಸಿದ ಬಸಿರಿಯರ ಕಥೆ ಹೃದಯುದ್ರಾವಕವಾಗಿದೆ.

ಅವರಲ್ಲಿ ಕೆಲವರು ಇಂಥ ಮಕ್ಕಳನ್ನು ಹಡೆದು ಅವುಗಳನ್ನು ಆಜೀವ ದುಃಖದಲ್ಲಿಡುವುದಕ್ಕಿಂತ ಗರ್ಭಪಾತ ಮಾಡಿಸಿಕೊಳ್ಳುವುದೊಳಿತೆಂದು ಭಾವಿಸುತ್ತಿದ್ದಾರೆ. ಆದರೆ ಬಹುತೇಕ ದೇಶಗಳಲ್ಲಿ ತಾಯಿಗೆ ಪ್ರಾಣಾಪಾಯವಿದ್ದಹೊರತು ಗರ್ಭಪಾತ ಮಾಡುವುದು ನ್ಯಾಯಬಾಹಿರವಾಗಿದೆ. ಅಮೇರಿಕದ ಅರಿಜೋನಾದ ಶೆರಿ ಫಿಂಕ್‌ಬೈನ್ ಎಂಬ ಮಹಿಳೆ ತನ್ನ ಮಗು ಥಲಿಡೊಮೈಡ್ ಪ್ರಭಾವದಿಂದ ಅಂಗಹೀನವಾಗಿ ಹುಟ್ಟೀತೆಂಬ ಭಯದಿಂದ ಗರ್ಭಪಾತ ಮಾಡಿಸಿಕೊಳ್ಳಲು ಯತ್ನಿಸಿದಾಗ ಅಲ್ಲಿನ ಸರಕಾರ ಅವಳನ್ನೂ ಸರ್ಜನ್ನರನ್ನೂ ಸೇರಿಯೇ ಕೋರ್ಟಿಗೆಳೆಯುವುದಾಗಿ ಬೆದರಿಕೆ ಹಾಕಿತು. ಇದರಿಂದ ನಾಳೆ ಸಮಾಜಕ್ಕೆ ಭಾರವಾಗಬಹುದಾದ ಗರ್ಭಸ್ಥ ಶಿಶುಗಳನ್ನು ನಾಶಮಾಡುವುದು ನೀತಿಸಮ್ಮತವೋ ಅಲ್ಲವೋ, ಇದಕ್ಕೆ ಕಾಯದೆ ಅನುಮತಿ ಕೊಡಬೇಕೋ ಬೇಡವೊ ಎಂಬ ದೊಡ್ಡ ವಾದವೇ ಎದ್ದುಬಿಟ್ಟಿದೆ.

ಬೆಲ್ಜಿಯಂನಲ್ಲಿ ಇದಕ್ಕೂ ಭಯಂಕರವಾದೊಂದು ಘಟನೆ ನಡೆದುಹೋಯಿತು. ಥಲಿಡೊಮೈಡ್ ಸೇವನೆಯ ಫಲವಾಗಿ ವಿಕಾರ ಮಗುವನ್ನು ಹೆತ್ತ ಸಜೀನ್ ವಂಡಪುಟ್-ಚೋಪೆಲ್ ಎಂಬ ಮಹಿಳೆ ಅದರ ಮುಖ ಕಂಡೊಡನೆ ಹುಚ್ಚೆದ್ದು "ಅಯ್ಯೋ ಇದನ್ನು ಬದುಕಿರಗೊಡಬಾರದ." ಎಂದು ಆಕ್ರೋಶ ಪ್ರಾರಂಭಿಸಿದಳು. ಡಾಕ್ಟರರು ಅವಳನ್ನು ಆಗ ತಡೆದರು. ಆದರೆ ಆಸ್ಪತ್ರೆಯಿಂದ ಮನೆಗೆ ಮರಳುವ ದಿನ ಅವಳು ಅದಕ್ಕೆ ವಿಷಕಾರಕ ಔಷಧವನ್ನಿತ್ತು ಕೊಂದುಬಿಟ್ಟಳು. ಈಗ ಅವಳು, ಅವಳ ಗಂಡ, ಅವಳ ತಾಯಿ ಮತ್ತು ಅವಳ ಅಕ್ಕ, ಮತ್ತು ಅವರ ಡಾಕ್ಟರ್ ಎಲ್ಲರನ್ನೂ ಬಂಧಿಸಿ ವಿಚಾರಣೆಗೆ ಗುರಿಪಡಿಸಲಾಗಿದೆ.

ಈ ಗಂಭೀರ ದುರಂತಕ್ಕೆ ಕಾರಣವೇನು? ಜನರಿಗೆ ಔಷಧಗಳ ಹುಚ್ಚು ಹಿಡಿದಿದೆ. ಹೊಸ ಔಷಧಗಳಿಗಾಗಿ ಅವರು ಹಾತೊರೆಯುತ್ತಿದ್ದಾರೆ. ಆದ್ದರಿಂದ ಸಾಕಷ್ಟು ಪೂರ್ವಸಂಶೋಧನೆಯಿಲ್ಲದೆ ಔಷಧ ಕಂಪೆನಿಗಳು ಔಷಧಗಳನ್ನು ತಯಾರಿಸಿ ಮಾರುತ್ತವೆ. ಈ ದುರಂತದಿಂದ ಪಾಠ ಕಲಿತಾದರೂ ಸರಕಾರಗಳು ಔಷಧ ತಯಾರಿಕೆಯ ಮೇಲೆ ಹೆಚ್ಚು ಹಿಡಿತವಿಟ್ಟುಕೊಳ್ಳಲಿ. *

ಶ್ರೀ ಪ್ರಭಂಜನ ನಿಲಯ

# ಕಾಲೇಜಿನ ಕೋರ್ಟು



ಕೆಂಪು ಇಟ್ಟಿಗೆಗಳಿಂದ ಕಟ್ಟಿದ ಆ ಕೋಣೆ ನೋಡಲು ಚಿಕ್ಕದಾಗಿದೆ. ಆದರೆ ನೋಡಿದೊಡನೆಯೆ ಅದು ನ್ಯಾಯಸ್ಥಾನವೆಂಬುದು ಸ್ಪಷ್ಟವಾಗುವಂತಿದೆ. ಎತ್ತರದ ವೇದಿಕೆಯೊಂದರ ಮೇಲೆ ನ್ಯಾಯಾಧೀಶರ ಆಸನವಿದೆ. ಹತ್ತಿರವೇ ಜೂರಿಗಳಿಗಾಗಿ ಒಂದು ಪಂಜರವಿದೆ. ಒಂದೆಡೆ ಅರ್ಧವರ್ತುಲಾಕಾರದ ಸಾಕ್ಷಿ ಪಂಜರವಿದೆ. ನ್ಯಾಯಾಧೀಶರೆದುರು ಎರಡು ಮೇಜುಗಳೂ ಅವುಗಳ ಹತ್ತಿರ ಕೆಲವು ಕುರ್ಚಿಗಳೂ ಇವೆ; ಅವು ಆರೋಪಿಗಳ ಮತ್ತು ಅವರ ವಕೀಲರ ಹಾಗು ಪ್ರಾಸಿಕ್ಯೂಟರ್ ವಕೀಲರ ಸ್ಥಳಗಳು.

ನ್ಯಾಯಾಲಯ ಆರಂಭವಾದಾಗ ನ್ಯಾಯಾಧೀಶರು ತಮ್ಮ ಆಸನದಲ್ಲಿ ಮಂಡಿಸಿದ್ದಾರೆ. ಆಪಾದಿತರೂ ವಕೀಲರುಗಳೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತು ನ್ಯಾಯಾಲಯಕ್ಕುಚಿತವಾದ ಮರ್ಯಾದೆಯಿಂದ ಪಿಸುಮಾತಿನ ವಿಚಾರ ವಿನಿಮಯ ಮಾಡುತ್ತಿದ್ದಾರೆ.

ಎಲ್ಲವೂ ಅಪ್ಪಟ ನ್ಯಾಯಾಲಯದ ರೀತಿಯಲ್ಲೇ ನಡೆಯುತ್ತಿದೆ. ಹೊರಗಿಂದ ಬಂದವರಿಗಾದರೂ ಹೊಳೆಯುವ ಒಂದೇ ಒಂದು ವಿಶೇಷವೆಂದರೆ ನ್ಯಾಯಸ್ಥಾನದಲ್ಲಿ ನ್ಯಾಯಾಧೀಶರಾದಿಯಾಗಿ ಇರುವವರೆಲ್ಲರೂ ತೀರ ಎಳೆ ವಯಸ್ಸಿನವರು. ಇವರೆಲ್ಲ ಕಾಲೇಜು ವಿದ್ಯಾರ್ಥಿಗಳೇನೋ ಎನಿಸುವಂತಿದೆ.

ಹೌದು, ಅವರು ಕಾಲೇಜು ವಿದ್ಯಾರ್ಥಿಗಳೇ. ಇದು ಅಮೇರಿಕದ ಫ್ಲೋರಿಡಾ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ನ್ಯಾಯಸ್ಥಾನ. ಇಲ್ಲಿ ನಡೆಯುತ್ತಿರುವುದು ಇಬ್ಬರು ವಿಜ್ಞಾನ ವಿದ್ಯಾರ್ಥಿಗಳ ವಿಚಾರಣೆ. ಪರೀಕ್ಷೆಯಲ್ಲಿ ಈ ವಿದ್ಯಾರ್ಥಿಗಳು ಪರಸ್ಪರ ಕಾಪಿ ಹೊಡೆದಿದ್ದಾರೆಂದು ಅವರ ಮೇಲೆ ಆಪಾದನೆ ಹೊರಿಸಲಾಗಿದೆ. ಇವರನ್ನು ವಿಚಾರಣೆಗೆ ತಂದವರು ಪರೀಕ್ಷಕರೂ ಅಲ್ಲ, ವಿಶ್ವವಿದ್ಯಾಲಯದ ಅಧಿಕಾರಿಗಳೂ ಅಲ್ಲ; ಅವರು ಕಾಪಿ ಹೊಡೆಯುವುದನ್ನು ನೋಡಿದ ಇನ್ನೊಬ್ಬ ವಿದ್ಯಾರ್ಥಿ.

ಈ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದವರು ಸ್ವೇಚ್ಛೆಯಿಂದ ವಿದ್ಯಾರ್ಥಿ ಆಚಾರ ನಿಯಮಾವಳಿಯೊಂದನ್ನು ಒಪ್ಪಿಕೊಂಡಿದ್ದಾರೆ. ಅದರ ಪ್ರಕಾರ ಅವರು ಪರೀಕ್ಷೆಗಳಲ್ಲಿ ಅವ್ಯಾಪಾರಗಳನ್ನು ಮಾಡುವುದಿಲ್ಲೆಂದು ಪ್ರಮಾಣಪುರಸ್ಸರವಾಗಿ ವಚನವಿತ್ತಿದ್ದಾರೆ. ಇದಕ್ಕೆ ಪ್ರತಿಯಾಗಿ ವಿಶ್ವವಿದ್ಯಾಲಯದ ಅಧಿಕಾರಿಗಳು-

ವಿದ್ಯಾರ್ಥಿಗಳಲ್ಲಿ ವಿಶ್ವಾಸವಿಡಲು ಒಪ್ಪಿದ್ದಾರೆ. ಪರೀಕ್ಷೆಗಳಲ್ಲಿ ಮೇಲ್ವಿಚಾರಣೆ ಮಾಡುವ ಗೋಜಿಗೇ ಅವರು ಹೋಗುವುದಿಲ್ಲ. ಆದರೆ ವಿದ್ಯಾರ್ಥಿಸಂಘಕ್ಕೂ ಅಧಿಕಾರಿಗಳಿಗೂ ಗೊತ್ತು, ವಿಶ್ವಾಸಘಾತಗಳು ಅಪರೂಪವಾಗಿಯಾದರೂ ಜರಗಬಹುದು ಎಂದು. ಹಾಗಾದಲ್ಲಿ ವಿದ್ಯಾರ್ಥಿಗಳು ತಾವೇ ಆ ದುರ್ಮಾರ್ಗಿಗಳನ್ನು ವಿಚಾರಣೆಗೊಳಪಡಿಸಿ ದಂಡಿಸಬೇಕೆಂದು ಒಪ್ಪಂದವಾಗಿದೆ.

ತಮ್ಮಲ್ಲೊಬ್ಬರು ಮೋಸ ಮಾಡುತ್ತಿದ್ದರೆ ಅವರನ್ನು ಹಿಡಿದುಕೊಡುವುದು ಬಂಧುದ್ರೋಹವೆಂದು ಇಲ್ಲಿನ ವಿದ್ಯಾರ್ಥಿಗಳು ಬಗೆಯುವುದಿಲ್ಲ. ಬದಲಿಗೆ ಅದು ತಮ್ಮಲ್ಲಿ ಒಟ್ಟಾಗಿ ಇಟ್ಟ ವಿಶ್ವಾಸಕ್ಕೆ ಪ್ರತಿಯಾಗಿ ತಾವು ಪಾಲಿಸಲೇಬೇಕಾದ ಕರ್ತವ್ಯವೆಂದು ಭಾವಿಸುತ್ತಾರೆ.

ನ್ಯಾಯಾಲಯದ ಕಾರ್ಯಕಲಾಪಗಳು ಗಂಭೀರವಾಗಿಯೆ ಆರಂಭವಾದವು. ಮೊದಲು ಜೂರಿಗಳ ಆಯ್ಕೆ. ಸಾಕಷ್ಟು ಚರ್ಚೆಯ ನಂತರ ಉಭಯ ಪಕ್ಷಗಳಿಗೂ ಸಮ್ಮತರಾದ ಆರು ಜನ ವಿದ್ಯಾರ್ಥಿ ಜೂರಿಗಳನ್ನು ಆರಿಸಲಾಯಿತು. ಅವರಲ್ಲಿ ಇಬ್ಬರು ಮಹಿಳೆಯರು. ಎರಡೂ ಪಕ್ಷಗಳ ವಕೀಲರು ಅದೇ ವಿಶ್ವವಿದ್ಯಾಲಯದ ಕಾಯದೆ ವಿದ್ಯಾರ್ಥಿಗಳು.

ವಾದಿ ಪಕ್ಷದ ವಕೀಲ ಮೊದಲು ಆಪಾದನೆಯನ್ನು ವಿವರಿಸಲು ಎದ್ದು ನಿಂತ. ಅವರ ಮೇಲೆ ಆಪಾದನೆಯನ್ನು ತಂದ ವಿದ್ಯಾರ್ಥಿ ಕೂತಿದ್ದ ಸ್ಥಳ ಎಲ್ಲಿತ್ತು, ಆಪಾದಿತ ವಿದ್ಯಾರ್ಥಿಗಳೆಲ್ಲಿ ಕುಳಿತಿದ್ದರು, ಆ ವಿದ್ಯಾರ್ಥಿಗಳು ಕಾಪಿ ಹೊಡೆಯುವುದನ್ನು ಆಪಾದಕ ವಿದ್ಯಾರ್ಥಿಯು ಸ್ಪಷ್ಟವಾಗಿ ನೋಡುವಷ್ಟು ಹತ್ತಿರ ಇದ್ದನೋ ಇಲ್ಲವೋ ಎಂದೆಲ್ಲ ಆತ ವಿವರಣೆ ಕೊಟ್ಟ.

ಅನಂತರ ವಾದಿಗಳ ಸಾಕ್ಷ್ಯಗಳ ವಿಚಾರಣೆ. ಮೊದಲು ಪಂಜರ ಹತ್ತಿದವನು ಆಪಾದನೆ ತಂದವನೇ. ಆಪಾದಿತರು ಪರಸ್ಪರ ಮಾತಾಡುವುದನ್ನೂ ಪೇಪರುಗಳನ್ನು ಒಬ್ಬರಿಗೊಬ್ಬರು ತೋರಿಸುವುದನ್ನೂ ತಾನು ನೋಡಿದ್ದಾಗಿ ಆತ ಪ್ರಮಾಣ ಮಾಡುತ್ತಾನೆ. ಎರಡನೇ ಸಾಕ್ಷಿ ಆ ವಿಷಯದ ಪ್ರೊಫೆಸರ್. ಆತ ಇಬ್ಬರೂ ವಿದ್ಯಾರ್ಥಿಗಳು ಬರೆದ ಉತ್ತರಗಳಲ್ಲಿ ಒಂದೇ ಶಬ್ದವನ್ನು ಹೇಗೆ ಮರಳಿ ಮರಳಿ ಪ್ರಯೋಗಿಸಲಾಗಿದೆಯೆಂದು ತಿಳಿಸಿದರು. ಇದಕ್ಕೆ ಬೆಂಬಲವಾಗಿ ಇಬ್ಬರ ಉತ್ತರ ಪತ್ರಿಕೆಗಳನ್ನೂ ನ್ಯಾಯಾಲಯದ ಮುಂದೆ ಪ್ರದರ್ಶಿಸಲಾಯಿತು. ಇಷ್ಟೇ ಅಲ್ಲ, ಅವರಿಬ್ಬರೂ ಮಾಡಿದ ಹತ್ತು ಹತ್ತು ತಪ್ಪುಗಳೂ ಒಂದೇ ಆಗಿದ್ದವೆಂಬುದು ಅರ್ಥಪೂರ್ಣವಾಗಿತ್ತು. ಆ ತರಗತಿಯಲ್ಲಿ ಮತ್ತಾರೂ ಆ ತಪ್ಪುಗಳನ್ನು ಮಾಡಿರಲಿಲ್ಲ.

ಅನಂತರ ಆಪಾದಿತಪರ ವಕೀಲ ಎದ್ದು ನಿಂತ. ಪ್ರೊಫೆಸರರನ್ನಾತ ಮರುಸವಾಲು ಮಾಡಿದಾಗ ತನ್ನ ಪಕ್ಷಕಾರರನ್ನು ಆತ ಯಾವನಾದರೂ ನುರಿತ ವಕೀಲನಂತೆಯೇ ಸಮರ್ಥಿಸಲಿದ್ದಾನೆಂಬುದಕ್ಕೆ ಸಂಶಯವುಳಿಯಲಿಲ್ಲ. ಅಷ್ಟು ನಿರ್ದಾಕ್ಷಿಣ್ಯವಾಗಿದ್ದವು ಅವನ ಅಡ್ಡ ಸವಾಲುಗಳು. "ಆಪಾದಕ ಪಕ್ಷದವರು ನಿಮಗೆ ಹೀಗೆ ಸಾಕ್ಷ್ಯ ಹೇಳಲು ತರಬೇತು ಮಾಡಿದ್ದಾರೋ ಹೇಗೆ?" ಎಂದು ಕೂಡ ಆತ ಕೇಳಿ ಬಿಟ್ಟ. ಆದರೆ ನ್ಯಾಯಾಧೀಶರು ಈ ಪ್ರಕಾರ ಸವಾಲು ಹಾಕುವುದು ಅಕ್ರಮವೆಂದು ಸಾರಿದರು. "ಆಕಸ್ಮಿಕವಾಗಿ ಹೀಗೆ ಇಬ್ಬರ ಉತ್ತರಗಳೂ ಒಂದೇ ಆಗಿರಬಹುದಲ್ಲವೆ?" ಎಂದು ಮತ್ತೊಂದು ಸವಾಲು ಹಾಕಿದ. "ಆ ಸಂಭವ ಒಂದು ನೂರು ಕೋಟಿಯಲ್ಲಿ ಎಲ್ಲಾದರೂ ಒಮ್ಮೆ ಒದಗಬಹುದಷ್ಟೇ" ಎಂದುತ್ತರಿಸಿದರು.

ಆಮೇಲೆ ಆರೋಪಿ ಪಕ್ಷದ ಮೂರು ಸಾಕ್ಷಿಗಳ ವಿಚಾರಣೆಯಾಗುತ್ತದೆ. ಒಬ್ಬ ನೇತ್ರಶಾಸ್ತ್ರಜ್ಞ. ಆರೋಪಿಗಳಲ್ಲೊಬ್ಬನು ಸಮೀಪದೃಷ್ಟಿಯವನಾಗಿದ್ದು ಕನ್ನಡಕವಿಲ್ಲದೆ ಇಪ್ಪತ್ತು ಅಂಗುಲ ದೂರ ಕೂಡ ನೋಡಲಾರನೆಂದು ಸಾಕ್ಷ್ಯ ಹೇಳಿದನು. ಇನ್ನೊಬ್ಬ ಪದವೀಧರ ವಿದ್ಯಾರ್ಥಿ ಆಕಸ್ಮಿಕವಾಗಿ ಉತ್ತರಗಳು ಒಂದೇ

ಬಗೆಯಾಗಿರಬಹುದೆಂದು ಅಭಿಪ್ರಾಯಪಟ್ಟನು. ಮೂರನೇ ಸಾಕ್ಷಿ, ಆರೋಪಿಗಳಿಬ್ಬರೂ ಒಂದೇ ಕೋಣೆಯಲ್ಲಿದ್ದು ಒಟ್ಟೊಟ್ಟಾಗಿ ಅಭ್ಯಾಸ ಮಾಡುತ್ತಿದ್ದುದನ್ನು ತಾನು ಕಂಡಿದ್ದಾಗಿಯೂ ಅದರಿಂದಲೇ ಅವರ ಉತ್ತರಗಳೂ ಒಂದೇ ಬಗೆಯಾಗಿರಬೇಕೆಂದೂ ಹೇಳಿದನು.

ಕೊನೆಯದಾಗಿ, ಆರೋಪಿಗಳ ಹೇಳಿಕೆಗಳಾದವು. ಒಬ್ಬ ತನ್ನ ಕನ್ನಡಕ ಕಳೆದು ಹೋಗಿದ್ದುದರಿಂದ ಪರೀಕ್ಷೆಯ ದಿನ ಅದನ್ನು ತಾನು ಹಾಕಿಕೊಂಡಿರಲಿಲ್ಲವೆಂದು ಹೇಳಿದ. ತನಗೆ ಗೋಡೆಯಲ್ಲಿದ್ದ ಗಡಿಯಾರ ಕೂಡ ಸರಿಯಾಗಿ ಕಾಣಿಸುತ್ತಿರಲಿಲ್ಲವಾದ್ದರಿಂದ ಇನ್ನೊಬ್ಬ ಆರೋಪಿಯ ಹತ್ತಿರ ತಾನು ಆಗಾಗ್ಗೆ ಗಂಟೆಯೆಷ್ಟು ಎಂದು ಕೇಳುತ್ತಿದ್ದೆ. ಅದನ್ನೇ ಆರೋಪ ತಂದ ವಿದ್ಯಾರ್ಥಿ ತಪ್ಪು ತಿಳಿದುಕೊಂಡಿರಬೇಕು ಎಂದ. ಇನ್ನೊಬ್ಬ ತನಗೆ ಪ್ರೊಫೆಸರರು ಪ್ರಶ್ನಪತ್ರಿಕೆಯಲ್ಲಿ ತಿದ್ದುಪಡಿ ಮಾಡಿದ ಅಂಶ ಸರಿಯಾಗಿ ಕೇಳಿಸಲಿಲ್ಲವಾಗಿ ತಿದ್ದುಪಡಿ ಏನಿತ್ತೆಂದು ಮಾತ್ರ ಇನ್ನೊಬ್ಬನನ್ನು ಕೇಳಿದ್ದು ನಿಜ ಎಂದು ಹೇಳಿದ.

ಕೊನೆಗೆ ಆರೋಪಿಪರ ವಕೀಲ ತನ್ನ ಪಕ್ಷಕಾರರನ್ನು ಸಮರ್ಥಿಸುತ್ತ ಎರಡು ಕುರ್ಚಿಗಳನ್ನು ಪರೀಕ್ಷಾ ಭವನದಲ್ಲಿ ಆರೋಪಿಗಳು ಕುಳಿತಿದ್ದ ಮಾಸಲೆಯಲ್ಲಿ ಸ್ಥಾಪಿಸಿ ಈ ನಿಟ್ಟುಗಳಿಂದ ಅವರು ಪರಸ್ಪರರ ಪೇಪರುಗಳನ್ನು,ಅದೂ ಒಬ್ಬ ಸಮೀಪ ದೃಷ್ಟಿಯವನಾಗಿರುವಾಗ– ನೋಡುವುದು ಅಸಾಧ್ಯಪ್ರಾಯವಾಗಿದೆಯೆಂದೂ ತನ್ನ ಪಕ್ಷಕಾರರು ನಿರ್ದೋಷಿಗಳೆಂದೂ ವಾದಿಸಿದನು.

ಐದು ಘಂಟೆ ಕಾಲ ನಡೆದ ಈ ವಿಚಾರಣೆಯ ನಂತರ ಜೂರಿಗಳು ವಿಚಾರ ವಿನಿಮಯಕ್ಕಾಗಿ ಎದ್ದು ಹೋಗುತ್ತಾರೆ. ಆರೋಪಿಗಳಿಬ್ಬರೂ ಚಿಂತಾಕ್ರಾಂತರಾಗಿ ಪರಿಣಾಮವನ್ನು ಎದುರು ನೋಡುತ್ತಿದ್ದಾರೆ. ಇದು ತಮಾಷೆಯಾಗಿರಲಿಲ್ಲ. ಆರೋಪ ಸಿದ್ಧವಾದರೆ ಅವರು ಒಂದು ವರ್ಷವನ್ನು ಕಳೆದುಕೊಳ್ಳಬಹುದು. ಅಥವಾ ವಿಶ್ವವಿದ್ಯಾಲಯದಿಂದ ಉಚ್ಚಾಟನೆ ಹೊಂದುವ ಪ್ರಸಂಗವೂ ಬರಬಹುದು.

ಆರೂ ಜನ ವಿದ್ಯಾರ್ಥಿ ಜೂರಿಗಳು ಸಲಪತ್ತು ನಿಮಿಷ ಪುರಾವೆಗಳನ್ನು ಪರಿಶೀಲಿಸಿ ನ್ಯಾಯಾಸ್ಥಾನಕ್ಕೆ ಮರಳಿದರು. ಅವರ ನಿರ್ಣಯ ಒಮ್ಮತದ್ದಾಗಿತ್ತು—ಆರೋಪಿಗಳು ಅಪರಾಧ ಮಾಡಿದ್ದೇ ನಿಜ- ಎಂದು. ನ್ಯಾಯಾಧೀಶರು ಗಂಭೀರ ವಾಣಿಯಿಂದ ಶಿಕ್ಷೆಯನ್ನು ಓದಿ ಹೇಳಿದರು: ಆ ಅಪರಾಧಿಗಳ ಅರ್ಧವರ್ಷದ ಗುಣಗಳು ರದ್ದಾಗಬೇಕು, ರಸಾಯನ ಶಾಸ್ತ್ರದಲ್ಲಿ ಅವರನ್ನು ನಪಾಸು ಮಾಡಬೇಕು ಮತ್ತು ಅವರ ಅಪರಾಧವನ್ನು ದಾಖಲೆಗಳಲ್ಲಿ ಸೇರಿಸಬೇಕು- ಎಂದು.

ಶಿಕ್ಷೆ ಕಠೋರವೇ ಆಗಿತ್ತು. ಆದರೆ ಆರೋಪಿಗಳು ಮಾಡಿದ ಮೋಸದಿಂದ ಶಿಕ್ಷೆಯನ್ನು ಕೇಳಿಕೊಂಡರು. ನಂಬಿಕೆಗೆ ದ್ರೋಹ ಬಗೆಯುವ ಅಪರಾಧವೂ ಕ್ಷುಲ್ಲಕವಲ್ಲ ತಾನೆ.

ಫ್ಲೋರಿಡಾ ವಿಶ್ವವಿದ್ಯಾಲಯದ ಈ ವಿಶ್ವಾಸ ನಿಯಮಾವಳಿಯ ಒಂದು ವಿಧಿ ಮಾತ್ರ ಈ ಶಿಕ್ಷೆಯ ತೀವ್ರತೆಯನ್ನು ಸ್ವಲ್ಪ ಸಹ್ಯವೆನಿಸುವಂತೆ ಮಾಡುತ್ತದೆ. ವಿದ್ಯಾರ್ಥಿ ನ್ಯಾಯಾಲಯದಲ್ಲಿ ವಿಚಾರಣೆಗೊಳಗಾದ ಯಾವನೇ ವಿದ್ಯಾರ್ಥಿಯ ಹೆಸರು-ದೆಸೆಗಳನ್ನು ನ್ಯಾಯಾಲಯದ ಹೊರಗೆ ಬಹಿರಂಗಪಡಿಸುವಂತಿಲ್ಲ.

ಫ್ಲೋರಿಡಾದ ಮಾದರಿಯನ್ನು ನಮ್ಮಲ್ಲಿಯೂ ಪ್ರಯೋಗ ಮಾಡಿ ನೋಡಬಾರದೇಕೆ? *



ಕೀರ್ತಿಯನ್ನು ಅಪೇಕ್ಷಿಸುವವನು ಟೀಕೆಗಳಿಗೆ ಹೆದರುವವನಾಗಿರಬಾರದು. ಟೀಕೆಯ ಭಯ ಪ್ರತಿಭೆಗೆ ಮೃತ್ಯು.

—ಸಿನ್ಸು

ಸಂಗ್ರಹ: ರಾಗ.

# ರಾವಳ್‌ಗಾವ್

ಲ್ಯಾಕೋ-ಬಾನ್-ಬಾನ್,
ಪೆಪ್ಪರ್‌ಮಿಂಟ್‌ಗಳು
ಮತ್ತು ಟಾಫಿಗಳು



ಮಾರಾಟದ ಏಜಂಟರು:
ಮೆಸರ್ಸ್ ಮೋತೀಲಾಲ್ ಗಿರ್ಧಾರಿಲಾಲ್ ಅಘಾರ್‌ಕರ್ಸ್, ಮಾಲೆಗಾಂವ್, ಜಿಲ್ಲಾ ನಾಶಿಕ್

ಬೆಳಗಾಂವ ಜಿಲ್ಲಾ ಸ್ಟಾಕಿಸ್ಟರು:
ಮೆಸರ್ಸ ಎಸ್. ಟಿ. ಪೋರವಾಲ ಮತ್ತು ಸನ್ಸ, ರವಿವಾರಪೇಟ ಬೆಳಗಾವಿ

Pratibha-62-5

**ಜಗತ್ತಿನ ಅತಿ ಭೀಕರ ಮರುಭೂಮಿಯ ಗರ್ಭದಲ್ಲಿ ಅನಂತ ಖನಿಜಗಳು ಹುದುಗಿವೆ.**

# ಸಹರಾದಲ್ಲಿ ಸಂಪತ್ತು!

**ಜಿ. ಜಿ. ಹೆಗಡೆ**

ಸಹರಾ ಎಂಬುದು ಅರಬ್ಬಿ ಶಬ್ದ. ಅದರ ಅರ್ಥ "ನಸುಕಂದಿ" ಎಂದು. ಅರಬ ವಿಜೇತರು ಇಟ್ಟ ಈ ಹೆಸರು ಜಗತ್ತಿನ ಅತಿ ದೊಡ್ಡ ಮರುಭೂಮಿಯೆನಿಸಿದ ಪ್ರದೇಶಕ್ಕೆ ಸರಿಯಾಗಿಯೆ ಇದೆ. ಎಲ್ಲಿ ನೋಡಿದರೂ ಮರಮಟ್ಟು ಇಲ್ಲದ ನಿರ್ಜನ ಬಟ್ಟಬಯಲು ಅದು.

ಇತಿಹಾಸ ಕಾಲದಲ್ಲಿ ಈ ವಿಸ್ತಾರವಾದ ಪ್ರದೇಶಕ್ಕಾಗಿ ಯಾವ ಸಾಮ್ರಾಜ್ಯಪಿಪಾಸುವೂ ಹಂಬಲಿಸಲಿಲ್ಲ. ಸಾಧ್ಯವಾದಾಗೆಲ್ಲ ಅದನ್ನು ದಾಟುವ ಸಂದರ್ಭಗಳನ್ನು ತಪ್ಪಿಸಿಕೊಳ್ಳಲು ನೋಡಿದವರೇ ಎಲ್ಲರೂ. ರೋಮನ್ನರು ಉತ್ತರ ಆಫ್ರಿಕದ ಸಮುದ್ರ ತೀರವನ್ನೆಲ್ಲ ಗೆದ್ದರೂ ಸಹರಾದ ಅಂಚಿನಲ್ಲೆ ತಮ್ಮ ಸಾಮ್ರಾಜ್ಯದ ಸೀಮೆಯನ್ನೆಳೆದರು. ತುರ್ಕಿ ಸಾಮ್ರಾಜ್ಯ ಸಹರಾ ಮರುಭೂಮಿಯೆಲ್ಲ ತನ್ನದೆಂದರೂ ಅದರ ಮೇಲೆ ಆಡಳಿತ ನಡೆಸಲು ಯತ್ನಿಸಲಿಲ್ಲ.



ಇಂದು ಸಹರಾದ ಹೆಚ್ಚಿನ ಪ್ರದೇಶ ಫ್ರೆಂಚರ ಪ್ರಭುತ್ವಕ್ಕೊಳಪಟ್ಟಿದೆ. ಅದನ್ನು ಅವರು ಯಾವುದೋ ಅನ್ಯಮನಸ್ಕ ಸ್ಥಿತಿಯಲ್ಲೇ ಸಂಪಾದಿಸಿದರೆನ್ನಬಹುದು. ಅದು ೧೯೦೦ ರಲ್ಲಿ, ಅಲ್ಜೀರಿಯವನ್ನು ಗೆದ್ದ ೭೦ ವರ್ಷಗಳ ನಂತರ, ಮೊರೊಕೋದ ಮೇಲೆ ರಕ್ಷಣಾಧಿಕಾರ ಪಡೆದ ೫೦ ವರ್ಷಗಳ ನಂತರ ಈ ಎರಡು ನಾಡುಗಳ ದಕ್ಷಿಣಕ್ಕಿರುವ ಈ ಮಹಾ ಮರುಭೂಮಿಯಲ್ಲವರು ಪ್ರವೇಶಿಸಿದರು.

ಅವರ ಪ್ರವೇಶವನ್ನು ವಿರೋಧಿಸಲು ಯಾರೂ ಬಯಸಲಿಲ್ಲ. ಕಾರಣ ಬೇರೇನೂ ಇಲ್ಲ. ಸ್ವತಃ ಫ್ರಾನ್ಸಿಗಿಂತ ನಾಲ್ಕುಪಟ್ಟು ವಿಸ್ತಾರವಾದ ಹಲ ದಶಲಕ್ಷ ಮೈಲು ವ್ಯಾಪಿಸಿದ ಸಹರಾ ಪ್ರದೇಶ ತೀರ ನಿರುಪಯೋಗಿ ಬೆಂಗಾಡೆಂದೇ ಆಗಿತ್ತು. ಇಷ್ಟು ವಿಶಾಲವಾದ ಪ್ರದೇಶದಲ್ಲಿ ಕೇವಲ ೬,೦೦,೦೦೦ ಜನವಸತಿ—ಧಾರವಾಡ ಜಿಲ್ಲೆಯ ಜನವಸತಿಯ ಮೂರರಲ್ಲೊಂದಂಶಕ್ಕಿಂತ ಕಡಿಮೆ—ಇದೆ. ಇವರಲ್ಲಿಯೂ ೪,೪೦,೦೦೦ ಜನ ಓಯಸಿಸ್ಸುಗಳ ಬಳಿ ವಾಸಿಸುತ್ತಾರೆ. ಉಳಿದ ೧,೬೦,೦೦೦ ಜನರಷ್ಟೇ ಶುದ್ಧ ಮರುಭೂಮಿಯ ನಿವಾಸಿಗಳು. ಇಷ್ಟು ಅನುದಾರವಾದ ನೆಲವನ್ನು ಬೇರೆ ಪ್ರಾಂತವಾಗಿ ಆಳುವುದರಲ್ಲಿ ಏನೂ ಅರ್ಥ ಕಾಣದೆ ಅದನ್ನು ಅಲ್ಜೀರಿಯದ ಅಂಗವಾಗಿಯೆ ಫ್ರೆಂಚರು ಆಳತೊಡಗಿದರು. ೧೯೩೫ ರಲ್ಲಿ ಅವರು ಸಹರಾದ ಒಂದು ತುಣುಕನ್ನು ಇಥಿಯೋಪಿಯವನ್ನಾಕ್ರಮಿಸಿಕೊಂಡ ಮುಸೋಲಿನಿಗೆ ಕೊಟ್ಟಾಗ ಆತ "ನಾನೇನು ಮರುಭೂಮಿಯನ್ನು ದಾನ ಹಿಡಿಯುವವನೇ!" ಎಂದು ತಿರಸ್ಕಾರದಿಂದ ಕೇಳಿದ್ದ.

ಆದರೆ ಇಂದು ಅದೇ ಸಹರಾ ಒಮ್ಮಿಂದೊಮ್ಮೆ ಪತ್ರಿಕೆಗಳ ಮುಖಪುಟದಲ್ಲಿ ಸ್ಥಾನ ಪಡೆಯುತ್ತಿದೆ. ಫ್ರೆಂಚರಿಗೆ ತಮ್ಮ ಪರಮಾಣು ಬಾಂಬುಗಳ ಪ್ರಯೋಗ ಮಾಡಲು ಇದೊಂದು ಉತ್ತಮ ಸ್ಥಳವಾಗಿದೆಯೆಂಬುದಕ್ಕಾಗಿ ಅಲ್ಲ; ಆದರೆ ಅದರ ಗರ್ಭದಲ್ಲಿ ಅಮೂಲ್ಯ ಖನಿಜಗಳ ನಿಧಿಯೇ ಹುದುಗಿದೆ ಎಂದು ಗೊತ್ತಾಗಿರುವುದರಿಂದ. ಅಲ್ಲಿ ಫ್ರೆಂಚರು ಈಗಾಗಲೆ ತೈಲವನ್ನು ಹೊರತೆಗೆಯುತ್ತಿದ್ದಾರೆ. ಇತರ ಖನಿಜಗಳ ಶೋಧವೂ ನಡೆದಿದೆ.

ಸಹರಾ ಎಂದಿನಿಂದಲೂ ಹೀಗೆ ಮರುಭೂಮಿಯಾಗಿರಲಿಲ್ಲ. ಅದರ ಭೂಗರ್ಭ ಚರಿತ್ರೆ ಸ್ವಾರಸ್ಯವಾಗಿದೆ. ಬಹು ಪುರಾತನ ಕಾಲದಲ್ಲಿ ಅದರ ತಗ್ಗಿನ ಭಾಗ ಎರಡು ಸಾರೆ ಸಮುದ್ರದಿಂದ ಆವರಿಸಲ್ಪಟ್ಟಿತ್ತು. ಇಂದು ಈ ಭಾಗದಲ್ಲೇ ಉಸುಬಿನ ದಂಡೆಗಳು ಹಬ್ಬಿವೆ ೫೦,೦೦೦ ವರ್ಷಗಳ ಹಿಂದೆ ಅಲ್ಲಿ ದಟ್ಟವಾದ ಅರಣ್ಯಗಳಿದ್ದವೆಂದು ನೆಲದಡಿ ಸಿಕ್ಕಿದ ಮರಗಳ ಪಳೆಯುಳಿಕೆಗಳು ತೋರಿಸುತ್ತವೆ. ಕೇವಲ ೬,೦೦೦ ವರ್ಷಗಳ ಹಿಂದೆ ಬೇಟೆಯಾಡಿ ಜೀವಿಸುವ ಸಮಾಜಗಳು ಅಲ್ಲಿ ವಾಸಿಸುತ್ತಿದ್ದವು. ಈ ಜನರು ತಾಸಿಲಿ ಡೆಸಾಜರ್ಸ್ ಪ್ರದೇಶದಲ್ಲಿರುವ ಶಿಲಾ ಗುಹಾಲಯಗಳಲ್ಲಿ ಬರೆದಿರುವ ಅಪ್ರತಿಮ ಸತ್ವಶಾಲಿ ವರ್ಣಚಿತ್ರಗಳನ್ನು ಕೆಲ ವರ್ಷಗಳ ಹಿಂದೆ ಫ್ರೆಂಚ್ ಸಂಶೋಧಕರು ಕಂಡುಹಿಡಿದಿದ್ದಾರೆ. ಈ ಮನೋಹರ ಚಿತ್ರಗಳು ಈ ಪ್ರದೇಶದಲ್ಲಿ ಸಸ್ಯಸಮೃದ್ಧಿಯಿತ್ತಷ್ಟೇ ಅಲ್ಲ, ಆನೆ, ಜಿಬ್ರಾಗಳಿಂದ ಹಿಡಿದು ನಾನಾ ಜಾತಿಯ ಹರಿಣಗಳ ವರೆಗೆ ಪ್ರಾಣಿಗಳು ವಿಪುಲವಾಗಿದ್ದವೆಂದು ತೋರಿಸುತ್ತವೆ. ಒಂಟೆಗಳು ಇಲ್ಲಿಯ ಮೂಲ ನಿವಾಸಿಗಳಲ್ಲ. ರೋಮನ್ನರು ಕ್ರಿಸ್ತಶಕಾರಂಭದಲ್ಲಿ ಮರುಭೂಮಿಯನ್ನು ದಾಟಲು ಏಶಿಯದಿಂದ ಮೊಟ್ಟ ಮೊದಲು ಅವುಗಳನ್ನು ತಂದರು.

ಇಲ್ಲಿ ನೀರಿನ ಸಮೃದ್ಧಿಯಿತ್ತೆಂಬುದನ್ನು ಹೊಗ್ಗಾರ್ ಪರ್ವತದಲ್ಲಿ ದೊರಕಿದ ಮರು ಮೀನಗಳೂ ಅಲ್ಜೀರಿಯದ ದಕ್ಷಿಣ ಸೀಮಾಂತದಲ್ಲಿ ಕೆಲ ಕಾಲ ಹಿಂದೆ ಸಿಕ್ಕಿದ ಒಂದು ಮೊಸಳೆಯೂ ದೃಢಪಡಿಸುತ್ತವೆ. ಪುರಾತನ ನದೀ ನಿರ್ಝರಗಳು ಬತ್ತುತ್ತ ಬಂದಂತೆ ಇವು ಅಲ್ಲಲ್ಲಿ ಉಳಿದುಕೊಂಡ ಹೊಂಡಗಳಲ್ಲಿ ತಮ್ಮ ವಂಶಗಳನ್ನು ಮುಂದುವರಿಸುತ್ತ ಬಂದಿರಬೇಕು.

ಕಳೆದ ೪,೦೦೦ ವರ್ಷಗಳಿಂದ ಸಹರಾ ಮರುಭೂಮಿ ವಿಸ್ತರಿಸುತ್ತ ಕೊನೆಗೆ ಇಡೀ ಪ್ರದೇಶವನ್ನು ಕಬಳಿಸಿಬಿಟ್ಟಿದೆ. ಮಾನವ ಇದಕ್ಕೆ ಸಹಾಯ ಮಾಡಿದ. ಒಂಟೆಗಳೂ ಇದಕ್ಕೆ ನೆರವಾದವು. ಒಂಟೆಗಳು ಬಂದಮೇಲೆ ಮೊದಲು ದುರ್ಗಮವಾಗಿದ್ದ ಮರುಪ್ರಾಂತಗಳು ಸುಗಮವಾದವು. ಸಂಚಾರಿ ಜನಾಂಗಗಳು ಇದ್ದುಬಿದ್ದ ಕುರುಚಲು ಗಿಡಮರಗಳನ್ನು ಕಡಿದು ಸುಟ್ಟರು. ಮತ್ತೆ ಹೊಸ ಅಡವಿಗಳನ್ನು ಬೆಳಸುವುದರಲ್ಲಿ ಶಾಶ್ವತವಾಗಿ ನೆಲಸಲಿಚ್ಛೆಯಿಲ್ಲದ ಅವರಿಗೆ ಆಸಕ್ತಿಯಿರಲಿಲ್ಲ. ಹೀಗೆ ಉತ್ತೇಜನಗೊಂಡ ಮರುಭೂಮಿ ಇಂದಿಗೂ ಶತಮಾನಕ್ಕೆ ಮೂವತ್ತು ಮೈಲಿನಂತೆ ಸುತ್ತಲೂ ಮುನ್ನುಗ್ಗುತ್ತಿದೆ.

ಗುಹಾ ಚಿತ್ರಗಳನ್ನು ಬರೆದ ಆ ಪ್ರಾಚೀನ ಜರವೂಂತ ಸಮಾಜ ಕಣ್ಮರೆಯಾಗಿದೆ. ಅದರ ಸ್ಥಾನದಲ್ಲಿ ನಾನಾ ತರಹದ ಸ್ಥಿರ ಮತ್ತು ಚರಜನಾಂಗಗಳು ಇಲ್ಲಿ ಹೇಗೋ ಜೀವನವನ್ನು ಮಾಡುತ್ತಿವೆ. ಈಚೀಚೆಗಿನ ವರೆಗೆ ಅವುಗಳಿಗೆ ನಾಗರಿಕತೆಯೊಡನೆ ಸಂಪರ್ಕ ಬಂದದ್ದೇ ಕಡಿಮೆ. ಆದ್ದರಿಂದ ಮಾನವ ಶಾಸ್ತ್ರಜ್ಞರಿಗೆ ಕುತೂಹಲಕಾರಿಯಾದ ಸಂಸ್ಕೃತಿಗಳಿಗೆ ಸಹರಾ ಆಶ್ರಯವಿತ್ತಿದೆ.

ಅಲ್ಜೀರಿಯದ ಜನಾಂಗಗಳ ಪೀಳಿಗೆಗೆ ಸೇರಿದ ತುರೇಗರ ಸಂಸ್ಕೃತಿ ಅಪರೂಪವಾದದ್ದು. ಇವರು ಹೆಸರಿಗೇನೋ ತಮ್ಮ ಕರಾವಳಿಯ ಬಂಧುಗಳಂತೆ ಮುಸ್ಲಿಮರಾದರೂ ಅವರಲ್ಲಿ ಮಾತೃಪ್ರಧಾನ ಸಮಾಜಪದ್ಧತಿಯಿದೆ. ಇತರ ಮುಸ್ಲಿಮರಲ್ಲಿ ಹೆಂಗಸರು ಘೋಷಾ ಧರಿಸುತ್ತಾರಾದರೆ ತುರೇಗರಲ್ಲಿ ಗಂಡಸರು ಘೋಷಾದಲ್ಲಿ ಜೀವಮಾನ ಕಳೆಯುತ್ತಾರೆ ಮತ್ತು ಹೆಂಗಸರು ನಿರಾತಂಕವಾಗಿ ಮುಖ ಪ್ರದರ್ಶನ ಮಾಡುತ್ತಾರೆ! ತುರೇಗ ಗಂಡಸರು ಧರಿಸುವ ನೀಲಿ

ಬಣ್ಣದ ಬುರಖಾದಿಂದ ಅವರಿಗೆ "ನೀಲ ಗಂಡಸರ ಜನಾಂಗ" ಎಂದೇ ಹೆಸರು ಬಿದ್ದಿದೆ.

ಇದಲ್ಲದೆ ಇಥಿಯೋಪಿಯದಿಂದ ಬಂದ 'ಹರಟೈನ್', ಸುಡಾನದಿಂದ ಬಂದ ನಿಗ್ರೋಗಳು ಮತ್ತು ಬಹುಶಃ ಮೂಲನಿವಾಸಿ ಜರಮಾಂತರ ವಂಶಜರಿರಬೇಕೆಂದೂಹಿಸಲಾದ 'ತೂಬು'ಗಳು ಕೂಡ ಸಹರಾದಲ್ಲಿದ್ದಾರೆ.

ವಿರಳವಾದ ಓಯಸಿಸ್ಸುಗಳಲ್ಲಿ ಬೆಳೆಯುವ ಖರ್ಜೂರ, ಹೆನ್ನಾ ಮತ್ತು ತಂಬಾಕಿನ ಹೊರತಾಗಿ ಮತ್ತಾವ ನೈಸರ್ಗಿಕ ಸಂಪತ್ತೂ ಇಲ್ಲವೆಂದು ಭಾವಿಸಲಾದ ಮತ್ತು ವರ್ಷಕ್ಕೆ ಐದಿಂಚುಗಳಿಗಿಂತಲೂ ಕಡಿಮೆ ಮಳೆ ಬೀಳುವ ಸಹರಾ ಮರುಭೂಮಿಯಲ್ಲಿ ಅಕಸ್ಮಾತ್ತಾಗಿ ಹತ್ತು ವರ್ಷಗಳ ಕೆಳಗೆ ಭೂಗರ್ಭಶಾಸ್ತ್ರಿಯೊಬ್ಬನಿಗೆ ಕಬ್ಬಿಣದ ಅದಿರು ಇರುವುದು ಕಂಡುಬಂತು. ತಿಂದುಫ್ ನೈಋತ್ಯಕ್ಕೆ ನೀರು ಹುಡುಕುತ್ತಿದ್ದಾಗ ಗರಾ ಜೆಬಿಲೆಟ್ ಎಂಬಲ್ಲಿ ಸಮೃದ್ಧವಾದ ಕಬ್ಬಿಣದ ಅದಿರು ಇರುವುದನ್ನು ಅವನ ಕಂಪಾಸು ತೋರಿಸಿತು. ಆಮೇಲೆ ಪ್ರಾರಂಭವಾದ ಕಬ್ಬಿಣದ ಬೇಟೆ ಎಣ್ಣೆಯ ಶೋಧದಲ್ಲಿ ಪರ್ಯವಸಾನ ಹೊಂದಿತು. ಒಂದು ವರ್ಷದ ನಂತರ ನೈಸರ್ಗಿಕ ಅನಿಲ ಕಂಡುಹಿಡಿಯಲ್ಪಟ್ಟಿತು.

ಸ್ವಂತ ಪ್ರದೇಶದಲ್ಲಿ ಆ ವರೆಗೆ ತೈಲಸಂಪತ್ತಿ ಕಾಣದ ಫ್ರೆಂಚರು ವೇಳೆಗಳೆಯದೆ ತೈಲವನ್ನೆತ್ತಲು ಮುಂದಾದರು. ಭಾರಿ ಬೈರಿಗೆಗಳು ಮರುಭೂಮಿಯ ಮಧ್ಯದಲ್ಲಿ ರಾತ್ರಿಬೆಳಗಾಗುವುದರೊಳಗೆಂಬಂತೆ ಕಾಣಿಸಿಕೊಂಡವು. ೧೯೫೬ ರಲ್ಲಿ ಹಸ್ಸಿ ಮಸೂದ್ ಪ್ರದೇಶದಲ್ಲಿ ಮೊದಲ ಎಣ್ಣೆ ಹೊರತೆಗೆಯಲ್ಪಟ್ಟಿತು. ೧೯೬೧ ರಲ್ಲಿ ಸಹರಾದ ಎಣ್ಣೆ ಉತ್ಪಾದನೆ ೮೦ ಲಕ್ಷ ಟನ್ನಿಗೇರಿತ್ತು. ೧೯೬೪ ರೊಳಗೆ ಅದು ೩೭೦ ಲಕ್ಷ ಟನ್ನಿಗೇರುವುದು. ಇದು ಫ್ರಾನ್ಸಿನ ತೈಲಾವಶ್ಯಕತೆಯನ್ನೆಲ್ಲ ಪೂರೈಸಬಲ್ಲದು. ೧೦ ಕೋಟಿ ಟನ್ ತೈಲ ಸಹರಾ ಗರ್ಭದಲ್ಲಿ ಹುದುಗಿರುವುದೆಂದು ಆಗಲೀ ಸಿದ್ಧವಾಗಿದೆ. ಇನ್ನೂ ೩೦ ಕೋಟಿ ಟನ್ ತೈಲ ಶೋಧಿಸಿದರೆ ಸಿಗುವ ಆಸೆಯಿದೆ.

ಗರಾ ಜೆಬಿಲೆಟ್‌ನಲ್ಲಿ ೩೦೦ ಕೋಟಿ ಟನ್ ಉತ್ತಮ ಕಬ್ಬಿಣದ ಅದಿರು ಇದೆಯೆಂದು ಗೊತ್ತಾಗಿದೆ. ಅದರಲ್ಲಿ ಸೇಕಡಾ ೫೭ ರಷ್ಟು ಶುದ್ಧ ಕಬ್ಬಿಣವುಂಟು. ಗರೂದ್ ಕೋಟೆಯ ಬಳಿ ಶೋಧಿಸಲ್ಪಟ್ಟ ಕಬ್ಬಿಣದ ಅದಿರು ೧೦ ಕೋಟಿ ಟನ್ ಮಾತ್ರವಾದರೂ ಅದು ಸೇಕಡಾ ೬೫ ರಷ್ಟು ಶುದ್ಧ ಕಬ್ಬಿಣವನ್ನೊಳಗೊಂಡ ಶ್ರೇಷ್ಠತಮ ಅದಿರಾಗಿದೆ.

ಹಸ್ಸಿ ರಮೆಲ್ ಪ್ರದೇಶದಿಂದ ಇಷ್ಟರಲ್ಲೇ ವರ್ಷಕ್ಕೆ ೨೩೦೦ ಕೋಟಿ ಘನ ಮೀಟರುಗಳಂತೆ ನೈಸರ್ಗಿಕ ಅನಿಲವನ್ನು ಹೊರ ತೆಗೆಯತೊಡಗುವರು. ಅಲ್ಲಿ ಅಡಗಿರುವ ಒಟ್ಟು ಅನಿಲ ೯,೦೦,೦೦೦ ಕೋಟಿ ಘನಮೀಟರಿನಷ್ಟು ಎಂದು ಅಂದಾಜಿದೆ.

ಆಧುನಿಕ ರಾಷ್ಟ್ರವೊಂದು ಅಪೇಕ್ಷಿಸಬಹುದಾದ ಎಲ್ಲ ಖನಿಜಗಳೂ ಸಹರಾದಲ್ಲಿವೆಯೆಂದು ಹೇಳಬಹುದು. ಅಕ್ಜ್ಯೊಯ್ಟ್ ಬಳಿ ತಾಮ್ರ, ಗಟಾರಾದಲ್ಲಿ ಮೆಂಗನೀಸ್, ಕೋಲಂಬ-ಬೇಚಾರ್ ಬಳಿ ಮತ್ತು ಗೊರಾಸಾ- ಕ್ಸಿಕ್ಸೋ

ಕೊಳ್ಳದಲ್ಲಿ ಕಲ್ಲಿದ್ದಲು ಸಾಕಷ್ಟು ಪ್ರಮಾಣದಲ್ಲಿರುವುದು ಈಗಾಗಲೇ ಸಿದ್ಧವಾಗಿದೆ. ಇದಲ್ಲದೆ ಭೂಗರ್ಭ ಗುಣ ನೋಡಿ ಈ ನಿರ್ಜನ ಪ್ರದೇಶದಲ್ಲಿ ಸೀಸ, ತವರ, ಸತುವು, ತಂಗ್‌ಸ್ಟೆನ್, ಬಂಗಾರ, ಪ್ಲಾಟಿನಂ ಮೊದಲಾದ ಲೋಹಗಳು, ಗಂಧಕ, ಪೊಟ್ಯಾಶಿಯಂ, ನೈಟ್ರೇಟುಗಳು, ಅಪೂರ್ವ ಮಣ್ಣುಗಳು ಮತ್ತು ರೇಡಿಯೋ ಕ್ರಿಯಾಶೀಲ ಧಾತುಗಳೂ ಇಲ್ಲಿ ಧಾರಾಳವಾಗಿ ದೊರೆಯಬಹುದೆಂದು ಭೂಗರ್ಭಶಾಸ್ತ್ರಿಗಳು ಊಹಿಸುತ್ತಾರೆ.

ಸಹರಾ ಮರುಭೂಮಿಯನ್ನು ಅರಳಿಸಿ ಜೀವನದ ಚಟುವಟಿಕೆಗಳಿಂದ ಸಚೇತನವಾಗಿ ಮಾಡಲು ಇರುವ ತೊಂದರೆ ನೀರಿನ ಅಭಾವ. ಇದನ್ನು ನಿವಾರಿಸಲು ವಿವಿಧ ಯೋಜನೆಗಳನ್ನು ಮಂಡಿಸಲಾಗುತ್ತಿದೆ. ಒಬ್ಬ ಜರ್ಮನ್ ಎಂಜಿನಿಯರ್ ಭೂಮಧ್ಯ ಸಮುದ್ರದ ನೀರನ್ನು ಕಾಲುವೆ ಮೂಲಕ ಇಲ್ಲಿ ತರುವ ಯೋಜನೆಯನ್ನು ಸಿದ್ಧಪಡಿಸಿದ್ದಾನೆ. ಮೇಲಾಗಿ ಸಹರಾ ನಾವೆಣಿಸುವಷ್ಟು ನಿರ್ಜಲವಾಗಿಲ್ಲ. ಹಿಂದೆ ಇಲ್ಲಿ ಸಮುದ್ರವಿತ್ತು. (ಆದ್ದರಿಂದಲೇ ಇಲ್ಲಿ ತೈಲ ಇರುವುದು). ಅದರ ನೆಲವೂ ನಾವೆಣಿಸುವಷ್ಟು ಬರಡಾಗಿಲ್ಲ. ಒಂದು ಸೆಂಟಿಮೀಟರ್ ಮಳೆಯಾದರೂ ಸಾಕು, ಒಮ್ಮೆಲೆ ಇಲ್ಲಿ ಗಿಡಬಳ್ಳಿಗಳು, ಚಿಗುರಿ ಹೂಬಿಟ್ಟು ಒಂದು ನಂದನವನವನ್ನೆ ಸೃಷ್ಟಿಸಿ ಬಿಡುತ್ತವೆ.

ಈಗ ಎಣ್ಣೆ ಲಭ್ಯವಾಗಿರುವ ಪ್ರದೇಶದ ತುಸು ದಕ್ಷಿಣಕ್ಕೇ ಒಂದು ವಿಸ್ತಾರವಾದ ಭೂಗರ್ಭ ಸಮುದ್ರವಿದೆ. ಆಲ್ಬಿಯನ್ ಸಮುದ್ರವೆಂದು ಹೆಸರಿಸಲಾದ ಈ ಭಾರಿ ಹೊಂಡವನ್ನು ಮುಚ್ಚಿದ ಮಳಲು ದಂಡೆಗಳ ಕೆಳಗೆ ೧,೩೦೦ ಅಡಿ ಆಳದಲ್ಲಿ ಸಿಹಿ ನೀರಿನ ಸಂಚಯವಿದೆ. ಅದನ್ನು ಮೇಲೆತ್ತುವುದು ಅಸಾಧ್ಯವಲ್ಲ.

ಭೂಗರ್ಭ ವಿಜ್ಞಾನಿಗಳೂ ನೀರಾವರಿ ಎಂಜಿನಿಯರರೂ ಅರಣ್ಯ ಶಾಸ್ತ್ರಿಗಳೂ ಈ ನೀರಿನ ಉಪಯೋಗ ಮಾಡಿಕೊಳ್ಳುವುದು ಹೇಗೆಂದು ಯೋಚಿಸುತ್ತಿದ್ದಾರೆ. ಭೂಗರ್ಭ ಸಮುದ್ರದಿಂದ ನೀರೆತ್ತಿ ಹಾಗೇ ಹರಿಸಿದರೆ ಅದು ಆವಿಯಾಗಿಹೋದೀತು. ಹಾಗಾಗದಂತೆ ಮಾಡಲು ಮೊದಲು ಮರಮಟ್ಟುಗಳು ಬೇಕು. ಇದಕ್ಕಾಗಿ ಸ್ವಲ್ಪ ಸ್ವಲ್ಪವೇ ನೀರಾವರಿಯನ್ನು ಪ್ರಾರಂಭಿಸಿ ಅರಣ್ಯಗಳನ್ನು ಬೆಳಸಬೇಕು. ಅರಣ್ಯ ಸಾಕಷ್ಟು ಹಬ್ಬಿದರೆ ಮಳೆ ನೀರು ಇಂಗುವುದು ತಪ್ಪಿ ಸಸ್ಯಗಳ ಬೇರುಗಳ ಮೂಲಕ ಮೇಲೆಯೆ ತಡೆದು ನಿಲ್ಲುವುದು. ಹೆಚ್ಚು ಮಳೆಯೂ ಆಗಬಹುದು.

ಇದೆಲ್ಲ ಸಾವಕಾಶವಾಗಿ ಫಲಿಸುವ ಮತ್ತು ತುಟ್ಟಿಯಾದ ಸಾಹಸ. ಆದರೆ ಆರಂಭ ಆಗಲೇ ಆಗಿದೆ. ಫ್ರೆಂಚ್ ವಿಜ್ಞಾನಿಗಳು ಮರುಭೂಮಿಯ ಪರಿಸ್ಥಿತಿಯಲ್ಲಿ ಕಷ್ಟವಿಲ್ಲದೆ ಬೆಳೆಯಬಲ್ಲ ಸಸ್ಯಗಳ ಬಗ್ಗೆ ಸಂಶೋಧನೆ ನಡೆಸಿದ್ದಾರೆ. ಇತರರು ಕೃತಕ ಪ್ರಚೋದನೆಯಿಂದ ಮಳೆಗರೆಸುವ ಯತ್ನದಲ್ಲಿದ್ದಾರೆ. ಸಹರಾದ ಉರಿಬಿಸಿಲನ್ನು ಶಕ್ತಿಯಾಗಿ ಪರಿವರ್ತಿಸುವುದು ಇನ್ನೊಂದು ಕಲ್ಪನೆ. ಈಗಾಗಲೆ ಪೈರೆನೀಸ್ ಪರ್ವತದ ಮೇಲೆ ಜಗತ್ತಿನ ಅತಿ ದೊಡ್ಡ ಸೂರ್ಯಶಕ್ತಿ ಕೇಂದ್ರವನ್ನು ಸ್ಥಾಪಿಸಿ ಅನುಭವ ಪಡೆದಿರುವ ಫ್ರೆಂಚರಿಗೆ ಇದಕ್ಕೆ ಬೇಕಾದ ತಾಂತ್ರಿಕ ಜ್ಞಾನವಿದೆ. ಸಹರಾದಲ್ಲಿ ಸದಾ ಬೀಸುವ ಗಾಳಿಯಿಂದ ಚಲಿಸುವ ವಿದ್ಯುತ್ ಜನಕಗಳ ಸ್ಥಾಪನೆಯ ವಿಚಾರವೂ ಇದೆ.

ಬಹುಶಃ ಇನ್ನು ಅರ್ಧ ಶತಮಾನದಲ್ಲಿ ಸಹರಾ ಮರುಭೂಮಿ ಉತ್ಸಾಹದಿಂದ ತುಂಬಿ ತುಳುಕುವ ಮಾನವ ಕೇಂದ್ರವಾದರೆ ಸೋಜಿಗವಲ್ಲ. ಆದ್ದರಿಂದಲೇ ಅದರ ಮೇಲೆ ಆಗಲೇ ಹಲವು ರಾಷ್ಟ್ರಗಳು ಹಕ್ಕನ್ನು ಮಂಡಿಸತೊಡಗಿವೆ. ಅಲ್ಜೀರಿಯಾದ ಭಾಗವಾಗಿ ಅದನ್ನು ಆಳುತ್ತಿದ್ದುದರಿಂದ ಅದು ತನಗೆ ಸಿಗಬೇಕೆಂದು ಸ್ವತಂತ್ರ ಅಲ್ಜೀರಿಯ ಹೇಳುತ್ತಿದೆ. ಮೊರೊಕ್ಕೋ, ಟ್ಯುನೀಶಿಯಾ, ಹೊಸದಾಗಿ ಸ್ವತಂತ್ರವಾದ ಮೊರಿಟಾನಿಯಾ ಎಲ್ಲವೂ ಸಹರಾದ ತುಂಡುಗಳಿಗಾಗಿ ಮೇಲಾಟ ಪ್ರಾರಂಭಿಸಿವೆ. *




ಕೋರ್ಟಿನಲ್ಲಿ ಒಂದು ಖಟ್ಲೆ ನಡೆದಿತ್ತು. ಆರೋಪಿ ತನ್ನ ವಕೀಲರಿಗೆ ಹೇಳಿದ: "ನ್ಯಾಯಾಧೀಶರಿಗೆ ಏನಾದರೂ ಲಂಚ ಕೊಟ್ಟು ಕೆಲಸ ಮುಗಿಸಬೇಕು."

ಆದರೆ ವಕೀಲರು ಹೇಳಿದರು: "ಊ-ಹೂ, ಇಂಥ ವಿಷಯದಲ್ಲಿ ನ್ಯಾಯಾಧೀಶರು ಬಹಳ ನಿಷ್ಠುರರು, ನೀನೇನಾದರೂ ಲಂಚ ಕೊಡಲು ಹೋದೆಯೋ, ಖಟ್ಲೆ ನಿನ್ನ ವಿರುದ್ಧ ಬೀಳುವುದು.''

ಖಟ್ಲೆಯ ತೀರ್ಪು ಹೊರಬಿದ್ದಾಗ್ಗೆ ಅದು ಆರೋಪಿಗೆ ಅನುಕೂಲವಾಗಿತ್ತು. ಆಗ ವಕೀಲರು ಹೇಳಿದರು: "ನೋಡಿದಿಯಾ, ನೀನು ಲಂಚ ಕೊಟ್ಟಿದ್ದರೆ, ನಿನ್ನ ವಿರುದ್ಧ ಆಗುತ್ತಿತ್ತು."

ಆರೋಪಿ ಹೇಳಿದ: "ಆದರೆ ನಾನು ಲಂಚ ಕೊಟ್ಟು ಬಂದಿದ್ದೆ."

ವಕೀಲ: "ಹ್ಞಾ, ಯಾರಿಗೆ? ನ್ಯಾಯಾಧೀಶರು ಬದಲಿಸಿದ್ದಾರೇನು?"

ಆರೋಪಿ: "ಇಲ್ಲ. ನಾನು, ಪ್ರತಿವಾದಿಯ ಹೆಸರಿನಿಂದ ಲಂಚ ಕೊಟ್ಟಿದ್ದೆ.''

—ವಿ. ಜೆ. ಪ್ಯಾಟ

*

ಗಣರಾಜ್ಯ ದಿನದಂದು, ತಾನು ಹಿಂದೊಮ್ಮೆ ಕಲಿತ ಶಾಲೆಯಲ್ಲಿ ಭಾಷಣ ಮಾಡುತ್ತಿದ್ದ ರಾಜಕಾರಣಿ ಪ್ರಶ್ನಿಸಿದ: "ನಿಮ್ಮ ನಗುಮುಖಗಳನ್ನು ನೋಡಿದರೆ ನನಗೆ ನನ್ನ ಬಾಲ್ಯದ ನೆನಪಾಗುವುದು. ನೀವೆಲ್ಲಾ ಏಕೆ ಹಸನ್ಮುಖಿಗಳಾಗಿದ್ದೀರಿ?"

"ನೀವು ದೊಡ್ಡ ಭಾಷಣ ಮಾಡಿದರೆ ನಮಗೆ ಗಣಿತ ಕ್ಲಾಸು ತಪ್ಪಿ ಹೋಗುತ್ತದೆ!''

*

ಆತ: ಏನೋ ಅದು ಚಿಂತೆ?

ಈತ: ಅಲ್ಲಾ, ನಿನ್ನೆಯ ಪೇಪರಿನಲ್ಲಿ ರಾತ್ರಿ ವಾಚಮನ್ ಬೇಕಂತ ಜಾಹೀರಾತು ಕೊಟ್ಟಿದ್ದೆ......

ಆತ: ಏನಾಯಿತು, ಯಾರೂ ಬಂದಿಲ್ಲವೇ?

ಈತ: ಊಂಹೂ, ಹಾಗಲ್ಲ..... ನಿನ್ನೆ ರಾತ್ರಿಯೇ ನನ್ನ ಅಂಗಡಿಯ ಸಾಮಾನುಗಳೆಲ್ಲಾ ಕಳವಾಗಿ ಹೋದವು!

*

"ಏಕಮ್ಮಾ ಅಳುತ್ತೀ?"

"ನನ್ನಣ್ಣಂಗೆ ರಜೆಯುಂಟು, ನಂಗೆ ರಜೆಯೇ ಇಲ್ಲ."

"ನಿನಗೇಕಮ್ಮಾ ರಜೆಯಿಲ್ಲ?"

"ನಾನಿನ್ನೂ ಶಾಲೆಗೆ ಹೋಗೋದಿಲ್ಲ."

ಸಂಗ್ರಹ: ಕೀರ್ತಿ

*

ಈಜು ಬಾರದ ಮಹಾಶಯರೊಬ್ಬರು ಉತ್ಸಾಹದಿಂದ ತಾನೂ ಈಜು ಕಲಿಯುವೆನೆಂದು ನೀರಿಗಿಳಿದರು. ಆದರೆ ನೀರಿನಲ್ಲಿ ಮುಳುಗಿದೊಡನೆ ಅವರ ಉಸಿರುಕಟ್ಟಿ ತುಂಬಾ ಪೇಚಾಡಬೇಕಾಗಿ ಬಂತು. ಅವರೊಡನಿದ್ದ ಮಿತ್ರರು ಅವರನ್ನು ಮೇಲೆಳೆದು ಗಾಳಿಹಾಕಿ ಉಪಚರಿಸುತ್ತಾ "ಏನು, ತುಂಬಾ ಪ್ರಯಾಸವಾಯಿತೇ?" ಎಂದು ಕೇಳಿದರು.

ಆ ಮಹಾಶಯರು ಸ್ವಲ್ಪ ಸಿಟ್ಟಿನಿಂದಲೇ ಹೇಳಿದರು-"ಹೂಂ, ಸಾಕಾಗಿಹೋಯ್ತು. ಇನ್ನು ಮೇಲೆ ಸರಿಯಾಗಿ ಈಜಲು ಕಲಿಯದೇ ನೀರಿಗಿಳಿಯುವುದೇ ಇಲ್ಲ!"

*

ಹೋಟೆಲಿನಲ್ಲಿ ಕಾಫಿ ಕುಡಿಯುತ್ತ ಒಬ್ಬ ತನ್ನ ಮಿತ್ರರೆದುರು ಹೇಳತೊಡಗಿದ— "ಯಾವ ಕೆಲಸವೂ ಅಸಾಧ್ಯವಾದುದಲ್ಲ. ಆ ವಿಷಯದಲ್ಲಿ ನಾವು ನೆಪೋಲಿಯನ್ನ ನನ್ನು ನೆನಪಿಟ್ಟುಕೊಳ್ಳಬೇಕು. ಅವನಿಗೆ ಅಸಂಭವವಾದ ಕಾರ್ಯವೇ ಇರಲಿಲ್ಲ."

"ಎಲ್ಲರೂ ನೆಪೋಲಿಯನ್ ಆಗಲು ಸಾಧ್ಯವೇ?" ಎಂದರು ಮಿತ್ರರು.

"ಅದೇ ಹೇಳಿದೆನಲ್ಲಾ? ಯಾವುದೂ ಅಸಂಭವವಾದುದಲ್ಲ. ಜಗತ್ತಿನಲ್ಲಿ ಅಸಾಧ್ಯವಾದ ಕಾರ್ಯವೆಂಬುದೇ ಇಲ್ಲ!"

"ಸರಿ. ಹಾಗಾದರೆ ಈಗ ಹೋಟೆಲಿನ ಬಿಲ್ಲು ತೀರಿಸು ನೋಡೋಣ."

*

ಒಬ್ಬ ಹೆಂಗಸು ತನ್ನ ವಠಾರವನ್ನು ಬಿಟ್ಟು ಬೇರೆ ಮನೆಗೆ ಬಿಡಾರ ಹೋಗುತ್ತಿರುವ ಸಂದರ್ಭದಲ್ಲಿ ತನ್ನ ನೆರೆಮನೆಯವಳಿಗೆ, "ನಾವೀಗ ಬೇರೆ ಮನೆಗೆ ಹೋಗುತ್ತಿದ್ದೇವೆ. ಅಲ್ಲಿ ನಮಗೆ ತುಂಬಾ ಒಳ್ಳೆಯ ನೆರೆಕರೆಯವರು ಸಿಗಬಹುದು" ಎಂದಳು.

ಕೂಡಲೇ ಆ ನೆರೆಮನೆಯಾಕೆ ಹೇಳಿದಳು— "ನಮಗೂ ಕೂಡಾ ಅದೇ ಆಸೆ ಇದೆ."

—ನಾಗೇಶರಾವ್

*

"ಅಮ್ಮಾ, ನೆರೆಮನೆಯಲ್ಲಿ ಮಂಗ ಆಡಿಸುವವ ಬಂದಿದ್ದಾನೆ. ಮಂಗನ ಆಟ ನೋಡಲು ಹೋಗಲೇನು?"

"ಬೇಡ. ಅಲ್ಲೊ, ಮನೆಗೆ ನಿನ್ನ ಕಕ್ಕನ ಮಗ ಬಂದಿರುವಾಗ ಮಂಗನ ಆಟ ನೋಡಲು ಬೇರೆ ಕಡೆಗೆ ಹೋಗೋದು ಸರಿಯೇ?"

*

"ಅಲ್ರೀ, ಈ ಸೈಕಲನ್ನು ನಾನು ಕೊಳ್ಳುವಾಗ ಏನಾದರೂ ಮುರಿದರೆ ದುರುಸ್ತಿ ಮಾಡಿಕೊಡುತ್ತೇನೆ ಎಂದಿದ್ದಿರಲ್ಲವೆ ನೀವು?"

"ಹೌದು. ಏನು ಮುರಿದಿದೆ ಹೇಳಿ."

"ನನ್ನ ಟೊಂಕದ ಎಲುವು."

*

"ಡಾಕ್ಟರರೇ, ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ವಿಚಾರ ನನಗೆ ಮೇಲಿಂದಮೇಲೆ ಬರುತ್ತದೆ. ಏನು ಮಾಡಲಿ?"

"ಆ ಕೆಲಸವನ್ನು ನನಗೆ ಒಪ್ಪಿಸಿ ಬಿಡಿ."

*

ಗಿರಾಕಿ—ಒಳ್ಳೆ ಬಟಾಟೆ ಇದೆಯೇನು?

ಅಂಗಡಿಕಾರ— ಇದೆ. ಎಷ್ಟು ಕೊಡಲಿ?

ಗಿರಾಕಿ— ಎರಡು ಕಿಲೊ ಕೊಡಿ. ಅದೇಕೆ, ಚಿಕ್ಕ ಚಿಕ್ಕವನ್ನು ಹಾಕ್ತೀರಪ್ಪಾ. ಅಷ್ಟು ದೊಡ್ಡ ಬಟಾಟೆಗಳನ್ನು ಹಾಕಿದರೆ ನಾನು ಮನೆಗೆ ಹೊತ್ತುಕೊಂಡು ಹೋಗುವುದು ಹೇಗೆ?



''ನಾನು ಹೇಳಿದ ಹಾಗೆ ಮಾಡಿಬಿಡಿಸ್ವಾಮಿ ಆಮೇಲೆ ನಿಮ್ಮ ಹಣೇಲಿ ಬರೆದಹಾಗಾಗುತ್ತದೆ."

❖❖❖❖❖❖❖❖❖

ಡೇವಿಡ್ ಕಾಪರ್‌ಫೀಲ್ಡ್, ಆಲಿವರ್ ಟ್ವಿಸ್ಟ್, ಟೇಲ್ ಆಫ್ ಟೂ ಸಿಟೀಸ್
ಮೊದಲಾದ ವಿಶ್ವಪ್ರಸಿದ್ಧ ಕಾದಂಬರಿಗಳ ಕರ್ತ ಡಿಕನ್ಸನ
ಪ್ರಣಯಪ್ರಸಂಗ ಕಟ್ಟುಕಥೆಯಂತೆಯೆ ಕಾಣುತ್ತದೆ

# ಚಾರ್ಲ್ಸ್ ಡಿಕನ್ಸನ ಪ್ರಣಯಿನಿ

ಮುಂಕ್ತಾ ರಾಜೆ

ನಡಿ, ಇಂದು ನಿನಗೆ ನನ್ನ ವಾಗ್ದತ್ತ ವಧುವನ್ನು ತೋರಿಸುವೆ. ಎಂಥ ಹುಡುಗಿಯನ್ನು ಆರಿಸಿದ್ದೇನೆ ಗೊತ್ತೇ? ಅವಳನ್ನು ಕಂಡೊಡನೆ ನಿನ್ನ ಮನಸ್ಸು ಮಾರಿಹೋಗದಿದ್ದರೆ ನನ್ನ ಹೆಸರು ಹೆನ್ರಿಯೆ ಅಲ್ಲ" ಹೆನ್ರಿ ತನ್ನ ಮಿತ್ರ ಚಾರ್ಲ್ಸ್‌ನಿಗೆ ತನ್ನ ಆನಂದ ಭರದಲ್ಲಿ ಹೇಳಿದ.

"ಇಲ್ಲ ಮಿತ್ರಾ, ಇಂದು ನನಗೆ ಕೆಲಸವಿದೆ."

"ಬಿಡು ಬಿಡು. ದೊಡ್ಡ ಕೆಲಸ ಮಾಡುವವ ನೀನು. ಬಲ್ಲೆ ನಿನ್ನನ್ನು. ಆಟ ಪಾಟ, ಕೂಟ-ವಿನೋದಗಳೆಂದರೆ ನಿ-ನಗೆ ವೈನಡುಕ ಬರುತ್ತದೆ. ಸ್ವಲ್ಪ ತಡಿ, ಒಂದಿಷ್ಟು ಅಪ್ರತಿಮ ಅತ್ತರನ್ನು ತರುತ್ತೇನೆ. ನಾನು ಬರುವುದರೊಳಗೆ ತಯಾರಾಗಿರು."

ಯಾವುದೇ ಸಮಾರಂಭಕ್ಕೆ ಹೋಗುವು-ದೆಂದರೆ ಚಾರ್ಲ್ಸ್‌ನಿಗೆ ಜೀವದ ಸುತ್ತು ಬಂದಂತಾಗುತ್ತಿತ್ತು. ಆದರೆ ಹೆನ್ರಿ ಅವನ ಮಿತ್ರ. ಇಂದವನ ವಿವಾಹ ನಿಶ್ಚಯ ಕಾರಣವಿತ್ತು. ಅವನ ವಾಗ್ದತ್ತ ವಧುವಿಗೆ ಇಬ್ಬರು ತಂಗಿಯರಿದ್ದಾರೆ. ಮೂವರೂ ಒಬ್ಬರಿಗಿಂತ ಒಬ್ಬರು ಸುಂದರರು. ಹಾಡಿ ಬಾರಿಸುವುದರಲ್ಲಿ ನಿಪುಣರು ಎಂದು ಚಾರ್ಲ್ಸ್ ಕೇಳಿದ್ದ. ಅದೇಕೋ ಇಂದ ಆತನಿಗೆ ಅಲ್ಲಿಗೆ ಹೋಗಬೇಕೆನಿಸಿತು. ಆತ ತನ್ನಲ್ಲಿದ್ದ ಅತ್ಯುತ್ತಮ ಉಡುಪು ಧರಿಸಿ ತಲೆಗೆ ತುಂಬ ಎಣ್ಣೆ ಹಚ್ಚಿಕೊಂಡು ತಯಾರಾದ.

ಮಿಸ್ಟರ್ ಬೆದಸೇಲರ ಮನೆ ಭವ್ಯವಾಗಿತ್ತು. ಅಲ್ಲಿಯ ವೈಭವವನ್ನು ಕಂಡು ಚಾರ್ಲ್ಸ್ ಪ್ರಭಾವಿತನಾದ. ಅಲ್ಲಿ ಮೇರಿಯಾಳ ಹಾರ್ಪ್, ಮಾರ್ಗ್ಗರೇಟಳ ಕ್ಲೆರೋನೆಟ್ ಮತ್ತು ಅವಳ ದೊಡ್ಡಪ್ಪನ ಮಗಳು ಎಮಿಲಿಯ ವಾಯೊಲಿನ್ ಇದ್ದವು. ತನಗೂ ಸಂಗೀತ ಬಂದಿದ್ದರೆ ಇವರೆಲ್ಲರ ಮೇಲೆ ತನ್ನ ಪ್ರಭಾವ ಬೀರಬಹುದಿತ್ತಲ್ಲ ಎಂಬ ವಿಚಾರ ಬಂದು ಚಾರ್ಲ್ಸ್ ವ್ಯಥಿತನಾದ.

ಅವನ ದೃಷ್ಟಿ ಮೇರಿಯಳ ಮೇಲೆ ಬಿತ್ತು. ಅರಳಿದ ಹೂವಿನಂತಿದ್ದ ಅವಳ ಸುಂದರ ರೂಪವನ್ನು ಕಂಡು ಚಾರ್ಲ್ಸ್ ಬೆಪ್ಪಾಗಿಹೋದ.

ತನ್ನ ಈ ಪ್ರಥಮ ಭೆಟ್ಟಿಯ ವಿಚಾರವನ್ನು

ಚಾರ್ಲ್ಸ್ ಡಿಕನ್ಸ್ ತನ್ನ "ಡೇವಿಡ್ಸ್ ಕಾಪರ್ ಫೀಲ್ಡ್" ಎಂಬ ಪ್ರಸಿದ್ಧ ಕಾದಂಬರಿಯಲ್ಲಿ ವರ್ಣಿಸಿದ್ದಾನೆ. ಆತ ಬರೆದಿದ್ದಾನೆ: "ಆಗ ಅಲ್ಲಿ ಯಾರಾರಿದ್ದರು ಎಂದು ನನಗೆ ಸುತರಾಂ ನೆನಪಿಲ್ಲ. ನನಗೆ ಕೇವಲ ಡೋರಿಯ ನೆನಪಿದೆ. ಅಲ್ಲಿ ಊಟಕ್ಕೆ ಕುಳಿತಾಗ ಏನೇನಾಯಿತು ಎಂಬುದೂ ನೆನಪಿಲ್ಲ. ಡೋರಿಯ ನೆನಪನ್ನು ಬಿಟ್ಟು ಮತ್ತಾವ ನೆನಪೂ ಇಲ್ಲ. ನಾನು ಸುಮಾರು ಐದಾರು ಪ್ಲೇಟು ತಿಂಡಿಯನ್ನಾದರೂ ಮುಟ್ಟದೆ ಬದಿಗೆ ಸರಿಸಿರಬೇಕು. ಕೇವಲ ಡೋರಿಯ ರೂಪರಾಶಿಯನ್ನು ಪಾನ ಮಾಡುತ್ತಲಿದ್ದೆ. ಅವಳ ಕಂಠ ಬಲು ಮಧುರವಾಗಿತ್ತು. ನಗೆ ಮೋಹಕವಾಗಿತ್ತು. ಅವಳ ನಡೆ, ನುಡಿ ಎಲ್ಲ ಆಕರ್ಷಕವಾಗಿದ್ದವು, ಸುಂದರವಾಗಿದ್ದವು. ನಾನೊಂದು ಸುಮಧುರ ಗುಂಗಿನಲ್ಲಿದ್ದೆ. ಏನನ್ನೂ ತಿನ್ನಲಿಲ್ಲ. ಕನ್ನಡಿಯಲ್ಲಿ ನೋಡಿದಾಗ ನಾನು ಬಲು ಅಶಕ್ತನಂತೆ, ಮೂರ್ಖನಂತೆ ಕಾಣಿಸುತ್ತಿದ್ದೆ. ತಿರುಗಿ ಮನೆಗೆ ಬಂದ ಮೇಲೆ ಕುಡುಕರಂತೆ ಗಲಿತ ಗಾತ್ರನಾಗಿ ಹಾಸಿಗೆಯಲ್ಲಿ ಬಿದ್ದುಕೊಂಡೆ. ಬೆಳಿಗ್ಗೆ ಎದ್ದಾಗ ಮನದಲ್ಲಿ ಮೋಹ ತುಂಬಿಕೊಂಡಿತ್ತು. ಮೈಯಲ್ಲಿ ಅಶಕ್ತಿ ತುಂಬಿಕೊಂಡಿತ್ತು."

ಮೇರಿಯಾ ಚಾರ್ಲ್ಸನ ಬಳಿ ಬಂದು ಮಾತಿಗಾರಂಭಿಸಿದಳು. "ಛೆ! ಛೆ! ಇದುವರೆಗೆ ನಿಮ್ಮ ಭೆಟ್ಟಿಯಾಗದ್ದು ಎಂಥ ಪ್ರಮಾದ! ಪ್ರಥಮ ದರ್ಶನದಲ್ಲೇ ನೀವು ನನ್ನ ಆತ್ಮೀಯರು ಎಂಬ ಭಾವನೆಯಾಗುತ್ತಿದೆ. ಅಂ. ನೀವೇನು ಮಾಡುತ್ತಿರುವಿರಿ?"

"ನಾನು ಲೇಖಕ."

"ಸರಿ. ಎಲ್ಲಿರುತ್ತೀರಿ? ಮತ್ತೇನಾದರೂ ಉದ್ಯೋಗ ಮಾಡುತ್ತೀರಾ? ನಿಮ್ಮ ವಿಚಾರವನ್ನೆಲ್ಲ ತಿಳಿಯುವ ಇಚ್ಛೆಯಾಗುತ್ತಿದೆ. ನಮ್ಮ ಗೆಳೆತನ ತುಂಬ ನಿಕಟವಾಗುವುದೆಂದು ಅನಿಸುತ್ತಿದೆ."

ಈ ಭೋಳೆ ಸ್ವಭಾವದ ನಾಚುಗುಳಿ ಯುವಕ ತನಗೆ ಮನಸೋತಿದ್ದಾನೆ ಎಂದು ಮೇರಿಗೆ ತಿಳಿದುಹೋಗಿತ್ತು. ಇಂಥವರನ್ನು ಕುಣಿಸುವ ಕಲೆಯಲ್ಲಿ ಅವಳು ಪರಿಣತಳಾಗಿದ್ದಳು. ಅವಳು ಹಾರ್ಪ್‌ನ್ನು ಕೈಗೆತ್ತಿಕೊಂಡು "ಈಗ ಬಾರಿಸುತ್ತೇನೆ," ಎಂದು ಚಾರ್ಲ್ಸನತ್ತ ಓರೆಗಣ್ಣಿನಿಂದ ನೋಡುತ್ತ, "ಕೇವಲ ನಿಮಗಾಗಿ" ಎಂದಳು.

ಅವಳ ಪುಟ್ಟ ಬೆರಳುಗಳು ಹಾರ್ಪಿನ ಮೇಲಾಡುತ್ತಿದ್ದಂತೆ ಚಾರ್ಲ್ಸನ ಮೋಹದ ಅಮಲು ಏರಹತ್ತಿತು. ಅವಳ ದೃಷ್ಟಿ ತನ್ನ ಮೇಲೆ ಬಿದ್ದಾಗ "ಅಹಾ! ಈ ದೃಷ್ಟಿಯಲ್ಲಿ ಅದೆಂಥೆಂಥ ಪ್ರಶ್ನೆಗಳಿವೆ!" ಎಂದೆನಿಸುತ್ತಿತ್ತು ಅವನಿಗೆ. ಅವಳ ದೃಷ್ಟಿ ಅಧೋಮುಖವಾದಾಗ ಅದರಲ್ಲಿ ಏನೇನೆಲ್ಲ ಭಾವನೆಗಳು ಅಡಗಿರಬಹುದು ಎನಿಸುತ್ತಿತ್ತು.

"ನಾನಿವಳ ಪ್ರೇಮದಲ್ಲಿ ಸಿಲುಕಿಕೊಂಡಿರುವೆನೆ?" ಚಾರ್ಲ್ಸ್ ತನ್ನನ್ನೆ ಪ್ರಶ್ನಿಸಿಕೊಂಡ. "ಛೆ! ಛೆ! ಇಲ್ಲ ಇಲ್ಲ" ಎಂದು ತನ್ನಷ್ಟಕ್ಕೆ ಅಂದುಕೊಂಡ.

ಬಾರಿಸುವುದು ಮುಗಿದಾಗ ಚಾರ್ಲ್ಸ್ ಎದ್ದು ಅವಳಿಗೊಂದು ಲೋಟ ಮದ್ಯವನ್ನು ಕೊಟ್ಟ. ಇಬ್ಬರೂ ಮಾತಾಡಿದರು, ನಕ್ಕರು, ನಲಿದರು. ಮೇರಿಯಳಿಗೆ ತಾನಾಡುವ ಆಟ ತಿಳಿದಿತ್ತು. ಆದರೆ ಪಾಪ! ಚಾರ್ಲ್ಸ್ ಮಾತ್ರ ಅಂಧನಂತೆ ಬಾವಿಗೆ ಧುಮುಕತೊಡಗಿದ್ದ.

ಅಹಾ! ಎಂಥ ಸುಂದರ ಸಂಜೆ! ಆಕಾಶ ಏಕೆ ನೀಲಿಯಾಗಿದೆ, ಹವೆಯಲ್ಲಿ ಈ ಮಧುರ ಉತ್ತೇಜನವೇಕಿದೆ ಎಂದು ಇಂದು ಚಾರ್ಲ್ಸನಿಗೆ ಪ್ರಥಮ ಬಾರಿ ಅನುಭವಕ್ಕೆ ಬಂದಂತಾಯಿತು. ಆತನಿಗಿಂದು ಮೊದಲನೆಯ ಸಲ ಹೃದಯದ ಬಡಿತದಲ್ಲಿ ಅಮಲೇರಿಸುವಂಥ ಸಂಗೀತ ಅಡಗಿದೆ ಎಂದು ತಿಳಿಯಿತು.

ಅವನ ಸ್ವಪ್ನಭಂಗವಾಯಿತು. ಹೆನ್ರಿ ಅವನನ್ನು ಕರೆದುಕೊಂಡು ಮನೆಗೆ ಹೊರಟ. ಆತ ವಿಪರೀತ ಕುಡಿದು ಹೊಟ್ಟೆನೋವೆಂದು ನರಳತೊಡಗಿದ್ದ. ಚಾರ್ಲ್ಸನಿಗೊ ಮೇರಿಯಳ ಧ್ಯಾಸ ಬಿಟ್ಟರೆ ಮತ್ತೇನೂ ಬೇಕಿರಲಿಲ್ಲ. ಈ ಮರ್ಮವನ್ನರಿತ ಹೆನ್ರಿ ಹೇಳಿದ: "ಮಿತ್ರಾ, ಅವಳು ಸುಂದರಿ, ನಿಜ. ಆದರೆ ಅವಳಿಗೆ ಹೃದಯವನ್ನರ್ಪಿಸಿ ಮೂರ್ಖನಾಗಬೇಡ."

ಚಾರ್ಲ್ಸ್ ಸಿಟ್ಟಿನಿಂದ "ನಿನ್ನ ಸಲಹೆ ಹೊತ್ತು ಮೀರಿ ಬಂದಿದೆ" ಎಂದ.

"ಹಾಗಿದ್ದರೆ ನಾನು ತಿಳಿದುಕೊಂಡಿದ್ದಕ್ಕಿಂತ ನೀನು ಹೆಚ್ಚು ಮೂರ್ಖನಾಗಿರುವಿ ಎನ್ನದೆ ವಿಧಿಯಿಲ್ಲ" ಎಂದ ಹೆನ್ರಿ.

ಮೇರಿಯಾ ಈಗ ತನ್ನ ಲಗ್ನದ ವಿಚಾರ ಮಾಡತೊಡಗಿದ್ದಳು. ತನಗೆ ಯೋಗ್ಯನಾದ ಪತಿಯನ್ನಾರಿಸಿಕೊಳ್ಳುವ ದೃಷ್ಟಿಯಿಂದ ತರುಣರ ಸ್ನೇಹ ಮಾಡಿಕೊಳ್ಳಹತ್ತಿದ್ದಳು ಎಂದು ಚಾರ್ಲಸನಿಗೆ ತಿಳಿದಿತ್ತು. ಮೇರಿಯಾಳಿಗೆ ಚಾರ್ಲಸನಲ್ಲಿ ಆಕರ್ಷಣೆಯಿತ್ತಾದರೂ ಚಾರ್ಲ್ಸ್ "ಟ್ರೂಸನ್" ಪತ್ರಿಕೆಯ ಸುದ್ದಿಗಾರನಾಗಿರುವ ವಿಷಯ ಅಸಮಾಧಾನಕರವೆನಿಸಿತ್ತು. ಪತ್ರಿಕಾ ಸುದ್ದಿಗಾರನಿಗೆ ಹೇಳಿಕೇಳಿ ಎಷ್ಟು ಸಂಬಳ ಸಿಕ್ಕೀತು? ಮುಂದಾದರೂ ಸಾಕಷ್ಟು ಸಿಗುವ ಭರವಸೆ ಎಲ್ಲಿತ್ತು?

ಮೇರಿಯ ಮತ್ತು ಅವಳ ತಾಯಿ ಇಬ್ಬರಿಗೂ ಹಣ ಬೇಕಾಗಿತ್ತು. ಹಣವಿಲ್ಲದೆ ಹೋದರೆ ಪ್ರೇಮವು ಬಹಳ ದಿನ ಜೀವ ಹಿಡಿದಿರುವುದಿಲ್ಲ ಎಂದು ಅವರಿಬ್ಬರೂ ತಿಳಿದಿದ್ದರು. ಆದ್ದರಿಂದ ಪತಿ ಎಂದು ಮೇರಿಯಳಿಗೆ ಆತ ಬೇಕಾಗಿರಲಿಲ್ಲ. ಆದರೆ ಪ್ರೇಮಿಯ ರೂಪದಲ್ಲಿ ಚಾರ್ಲಸ್ ಅವಳಿಗೆ ಇಷ್ಟನಾಗಿದ್ದ. ತನಗೆ ಯೋಗ್ಯನಾದ ಧನಿಕ ಪತಿ ಸಿಗುವವರೆಗೆ ಚಾರ್ಲಸನೊಡನೆ ಲಲ್ಲೆಯಾಡುತ್ತ ಕಾಲ ಕಳೆದರೇನು ತಪ್ಪು ಎಂದವಳು ಯೋಜಿಸಿ ಆ ದೃಷ್ಟಿಯಿಂದಲೇ ಚಾರ್ಲಸನಿಗೆ ಪ್ರೋತ್ಸಾಹವೀಯತೊಡಗಿದಳು.

ತಿಂಗಳುಗಳು ಕಳೆದವು. ಚಾರ್ಲಸ್ ಮತ್ತು ಮೇರಿಯಳ ದಿನಗಳು ಸಂತೋಷದಿಂದ ತುಂಬಿದ್ದವು. ಆಮೇಲೊಂದು ದಿನ ಮೇರಿಯಳಿಗೆ ನೃತ್ಯಮಂದಿರದಲ್ಲಿ ಧನಿಕ ಯುವಕನೊಬ್ಬನ ಪರಿಚಯವಾಯಿತು. ಅವನನ್ನು ಬಲೆಗೆ ಕೆಡವಿಕೊಳ್ಳಲು ಅನೇಕ ತರುಣಿಯರು ಯತ್ನಿಸುತ್ತಿದ್ದರು. ಮೇರಿಯಳಿಗೂ ಅದೇ ವಿಚಾರ ಬಂತು. "ಹಾಂ. ಮಿ. ವಿಂಟರ್ ನಿನಗೆ ಯೋಗ್ಯನಾದ ವರ" ಎಂದು ಅವಳ ತಾಯಿಯೂ ಅಂದಳು

ತಾಯಿಯ ಸಲಹೆಯಂತೆ ಮೇರಿಯಾ ವಿಂಟರನೊಡನೆ ಪರಿಚಯ ಬೆಳೆಸಿದಳು.

ಈ ವೇಳೆಗೆ ಚಾರ್ಲಸನಿಗೆ ೨೧ ವರ್ಷಗಳು ತುಂಬಿದ್ದವು. ಅವನಿಗೊಂದು ಹೊಸ ಜಗತ್ತು ದೃಷ್ಟಿಗೆ ಬಿದ್ದಂತಾಯಿತು. ಮೇರಿಯಳನ್ನೂ ಅವಳ ತಂದೆ-ತಾಯಿಗಳನ್ನೂ ತನ್ನ ಮನೆಗೆ ಆಮಂತ್ರಿಸಬೇಕು, ತಾನು ಪ್ರಾಪ್ತ ವಯಸ್ಕನಾದ ಸಂತೋಷಕ್ಕಾಗಿ ಔತಣವೇರ್ಪಡಿಸಬೇಕು ಎಂದಾತ ಯೋಚಿಸಿದ.

ಮೇರಿಯ ಮತ್ತು ಅವಳ ತಂದೆ-ತಾಯಿಗಳು ಬಂದರು. ಚಾರ್ಲಸನ ಮನೆ ಮೇರಿಯಳ ಮನೆಯಷ್ಟು ಸುಂದರವಾಗಿರಲಿಲ್ಲ. ಮೇರಿಯಳ ತಾಯಿಯ ಅನುಭವಿ ದೃಷ್ಟಿಗೆ ಚಾರ್ಲಸನ ಪರಿವಾರ, ಅವನ ಮನೆಯ ಸಾಮಾನುಗಳು ಎಲ್ಲ ಸಾಮಾನ್ಯ ದರ್ಜೆಯವು ಎಂದು ತಿಳಿದುಹೋಯಿತು. ಇಂದಿನ ಸಮಾರಂಭಕ್ಕಾಗಿ ತಂದಿದ್ದ ಹೆಚ್ಚಿನ ಫರ್ನಿಚರ್, ಸೇವಕರು ಎಲ್ಲ ಭಾಡಿಗೆಯದು ಎಂಬ ಸೂಕ್ಷ್ಮ ಅವಳಿಗೆ ಗೊತ್ತಾಗದಿರಲಿಲ್ಲ. ತನ್ನ ಮಗಳಿಗೆ ಚಾರ್ಲಸ್ ಎಂದೂ ತಕ್ಕವನಾಗಲಾರ ಎಂದವಳು ಖಂಡಿತ ಮಾಡಿಕೊಂಡಳು.

ಅತಿಥಿಗಳು ಖಾದ್ಯ ಪಾನೀಯ ಸೇವನೆಗಳ ಸಂಭ್ರಮದಲ್ಲಿದ್ದಾಗ ಚಾರ್ಲಸ್ ಮೇರಿಯಳಿಗೆ ಹೋಗಿ, "ಪ್ರಿಯೆ, ಒಂದು ಮಾತು ಹೇಳಬೇಕೆನ್ನುತ್ತೇನೆ" ಎಂದ.

ಮಾದಕ ದೃಷ್ಟಿಯಿಂದ ಅವನತ್ತ ನೋಡುತ್ತ "ಹೇಳಲ್ಲ, ಅದಕ್ಕೇನು?" ಎಂದಳು ಮೇರಿಯ. ಆದರೆ ಚಾರ್ಲಸ್, "ನಾನು ನಿನ್ನನ್ನು ಬಲು ಪ್ರೀತಿಸುತ್ತೇನೆ" ಎಂದಾಗ ಅವಳು ಅವನನ್ನು ಮಿಕಿಮಿಕಿ ನೋಡತೊಡಗಿದಳು. ಚಾರ್ಲಸ್ ಹೇಳಿದ: "ನಾನು ನಿನ್ನನ್ನು ಪ್ರೀತಿಸುತ್ತೇನೆ, ಮೇರಿಯಾ. ನೀನು ನನ್ನವಳಾಗಬೇಕು. ನನ್ನದೆಲ್ಲ, ನನ್ನ ಪ್ರಾಣ, ಧನ, ಮಾನ ಎಲ್ಲವನ್ನೂ ನಿನಗರ್ಪಿಸಬಯಸುತ್ತೇನೆ."

"ಎಂಥ ನಿಷ್ಫಲ ಮಾಡುತ್ತಿರುವಿ ಚಾರ್ಲಸ್!" ಮೇರಿ ಅಂದಳು.

"ಆದರೆ ನೀನು ನನ್ನ ಪ್ರಣಯಾರಾಧನೆಗೆ ಪ್ರೋತ್ಸಾಹವಿತ್ತಿರುವಿ ಮೇರಿಯಾ. ನೀನು ನನ್ನನ್ನು ಪ್ರೀತಿಸುವುದಿಲ್ಲವೆ?"

"ನಿನ್ನನ್ನು ನಾನು ಪ್ರೀತಿಯಿಂದ ಕಾಣುತ್ತಿದ್ದೇನೆ ನಿಜ. ನೀನೊಬ್ಬ ಒಳ್ಳೆಯ ಸ್ನೇಹಿತ. ಅಷ್ಟಲ್ಲದೆ ಬೇರೆ ದೃಷ್ಟಿಯಿಂದ ನಾನು ನಿನ್ನನ್ನು

ನೋಡಿಲ್ಲ."

"ಆದರೆ ನಿನ್ನನ್ನು ನಾನು ಪ್ರೀತಿಸುತ್ತೇನೆ." ಚಾರ್ಲ್ಸನ ದನಿ ಕಂಪಿಸಹತ್ತಿತ್ತು.

ಮೇರಿಯಾ ಕೈಲಿದ್ದ ಮದ್ಯದ ಗ್ಲಾಸನ್ನೇ ನೋಡುತ್ತಿದ್ದಳು. ಹತಾಶ ಸ್ವರದಲ್ಲಿ ಚಾರ್ಲ್ಸ್, "ಹೀಗೆ ಮಾಡಬೇಡ. ನಿರ್ದಯಿಯಾಗಬೇಡ" ಎಂದ. ಆದರೆ ಮೇರಿಯಾ "ನೀನು ಲೇಖಕನಲ್ಲವೆ? ನಿನ್ನಲ್ಲಿ ಕಲ್ಪನಾಶಕ್ತಿಯಿದೆ. ನೀನು ಒಂದಿಷ್ಟು ಹೆಚ್ಚೇ ಕಲ್ಪಿಸಿಕೊಂಡಂತಿದೆ" ಎಂದು ವ್ಯಂಗ್ಯವಾಗಿ ನಕ್ಕಳು. "ಛೀ! ಛೀ! ಹಾಗಲ್ಲ. ನೀನು ಯಾವಾಗಲೂ ನನಗೆ ಉತ್ತೇಜನವಿತ್ತೆ. ನೀನು ನನ್ನನ್ನು ಪ್ರೀತಿಸುತ್ತಿರುವಿ ಎಂದೇ ನಾನು ತಿಳಿದೆ. ಇಂದಿನ ಈ ಔತಣ ಕೇವಲ ನಿನಗಾಗಿಯೇ ಏರ್ಪಡಿಸಿದೆ. ಓಹ್! ನಾನಿಂದು ಅನಾಥನಾಗಿಬಿಟ್ಟೆ. ನಾನು-ನಾನು..." ಚಾರ್ಲ್ಸ್ ಕಂಠ ತುಂಬಿಬಂದು ಮಾತು ನಿಂತುಹೋಯಿತು.

ಮೇರಿಯಾ ಮಾತಾಡಲಿಲ್ಲ. ಅವಳು ತಟಕ್ಕನೆ ಎದ್ದು ತನ್ನ ತಾಯಿಯ ಬಳಿಗೆ ಹೋಗಿಬಿಟ್ಟಳು. ಅವಳ ತಾಯಿಗೆ ಏನು ನಡೆದಿರಬೇಕು ಎಂಬುದರ ಕಲ್ಪನೆ ಬಂತು. ಅವರಿಬ್ಬರೂ ಎದ್ದು ಮನೆಗೆ ನಡೆದುಬಿಟ್ಟರು. ಚಾರ್ಲ್ಸ್ ಭ್ರಾಂತನಂತೆ ನೋಡುತ್ತಲೇ ನಿಂತ

ಅಂದು ಚಾರ್ಲ್ಸ್ ಮನಸ್ವೀ ಕುಡಿದು ತನ್ನ ದುಃಖ ಮರೆಯಲೆತ್ನಿಸಿದ.

ಆಮೇಲಾತ ತಾನು ಬರೆದ ಪತ್ರಗಳನ್ನೆಲ್ಲ ಹಿಂತಿರುಗಿಸಲು ಮೇರಿಯಳನ್ನು ಕೇಳಿಕೊಂಡ. ಒಂದು ನೀಲಿ ರಿಬ್ಬನ್ನಿನಲ್ಲಿ ಗಂಟು ಕಟ್ಟಿ ಅವಳದನ್ನು ವಾಪಸು ಮಾಡಿದಳು. ಚಾರ್ಲ್ಸ್ ಮೇರಿಯಳನ್ನು ಏಕಾಂತದಲ್ಲಿ ಕಾಣಬೇಕೆನ್ನುವ ಪ್ರಯತ್ನಗಳೆಲ್ಲ ವ್ಯರ್ಥವಾದವು. ಮೇರಿಯ ಬೇಕೆಂದೇ ತನ್ನನ್ನು ದೂರವಿಡುತ್ತಿದ್ದಾಳೆಂದು ಅವನಿಗೆ ತಿಳಿಯಿತು. ಚಾರ್ಲ್ಸ್ ತನಗೆ ಮೇರಿಯ ಕೊಟ್ಟಿದ್ದ ವಸ್ತುಗಳನ್ನೆಲ್ಲ ಅವಳಿಗೆ ತಿರುಗಿ ಕಳಿಸಿದ. ಜೊತೆಗೊಂದು ಚೀಟಿಯನ್ನೂ ಕಳಿಸಿದ:

"ನೀನು ಸದಾ ಸುಖಿಯಾಗಿರುವಂತೆ ದೇವರು ಆಶೀರ್ವದಿಸಲಿ. ನಿನಗೆ ಸುಖ ಕೊಡಲು ನನ್ನಿಂದಾಗಲಿಲ್ಲವಲ್ಲ ಎಂದು ಖೇದವೆನಿಸುತ್ತದೆ. ಆದರೆ ನೀನೆಲ್ಲಿಯೆ ಇರಲಿ, ನೀನು ಸುಖಿಯಾಗಿರು. ನಿನಗೆ ಸುಖ ಕೊಡುವಾತನೂ ಸುಖಿಯಾಗಿರಲಿ. ನನ್ನ ಮೊದಲನೆಯ ಮತ್ತು ಕೊನೆಯ ಪ್ರೇಮದ ಒಡತಿಯಾದ ಮೇರಿಯಾ ಸುಖಿಯಾಗಿರುವ ಸಮಾಚಾರವನ್ನು ಕೇಳುತ್ತಿರುವುದಕ್ಕಿಂತ ಹೆಚ್ಚಿನ ಸುಖ ನನಗಿನ್ನು ಈ ಜಗತ್ತಿನಲ್ಲಿಲ್ಲವೆಂಬುದು ನನಗೆ ಗೊತ್ತಿದೆ.

"ನೀನು ಸುಖಿಯಾಗುವಿ ಎಂಬ ನಂಬಿಗೆ ನನಗಿದೆ. ಜಗತ್ತಿನ ಎಲ್ಲ ಸುಖ, ಮಂಗಲ ಆಶೀರ್ವಾದಗಳು ನಿನಗೆ ಸದಾ ಲಭ್ಯವಾಗುವಂತೆ ದೇವರು ಕರುಣಿಸಲಿ.

"ಚಾರ್ಲ್ಸ್ ಡಿಕನ್ಸ್"

*

ಇಪ್ಪತ್ತು ವರ್ಷಗಳ ನಂತರ......

"ಡೇವಿಡ್ ಕಾಪರ್‌ಫೀಲ್ಡ್" ಕಾದಂಬರಿ ಪ್ರತಿಯೊಂದು ಪುಸ್ತಕದ ಅಂಗಡಿಯಲ್ಲಿತ್ತು, ಪ್ರತಿಯೊಬ್ಬ ಸಾಹಿತ್ಯಪ್ರೇಮಿಯ ಮನೆಯಲ್ಲಿತ್ತು; ಪ್ರತಿಯೊಬ್ಬನ ಬಾಯಲ್ಲೂ ಅದರ ಬಗ್ಗೆ ಮಾತು ನಡೆದಿತ್ತು. ಇಡೀ ಜಗತ್ತೇ ಅದನ್ನು ಓದಿತ್ತು.

ಚಾರ್ಲ್ಸ್ ಡಿಕನ್ಸನಿಗೆ ಅದು ತನ್ನದೇ ಕಥೆ ಎಂದು ಗೊತ್ತಿತ್ತು. ಆದರೆ ತನ್ನ ಲೇಖಕ ಮನಸ್ಸು ಕೂಡ ಕಲ್ಪಿಸಲಾರದಂಥ ಒಂದು ಘಟನೆಗೆ ಈ ಪುಸ್ತಕದ ಕಥೆ ಕಾರಣವಾದೀತು ಎಂದು ಅವನಿಗೆ ತಿಳಿದಿರಲಿಲ್ಲ.

ಇಳಿವಯಸ್ಸಿನ ಮಹಿಳೆಯೊಬ್ಬಳು ಈ ಪುಸ್ತಕವನ್ನು ಬಲು ಲಕ್ಷ್ಯಗೊಟ್ಟು ಓದಿದಳು. ಕಥಾನಾಯಕನನ್ನು ಅವಳು ಗುರುತಿಸಿದಳು. ತನಗೆ ಅಷ್ಟೊಂದು ಗಾಢವಾದ ಪ್ರೇಮವನ್ನರ್ಪಿಸಿ ಆತ್ಮಸಮರ್ಪಣೆ ಮಾಡಿಕೊಂಡಿದ್ದ ಚಾರ್ಲ್ಸನೇ ಈ ಕಥಾನಾಯಕನಾಗಿದ್ದ.

ಡೋರಾಳ ವಿಷಯವನ್ನೋದಿದಾಗಂತೂ ಅವಳ ಕಣ್ಣಲ್ಲಿ ವಿದ್ಯುತ್ತು ಹರಿದಂತಾಯಿತು. ಹೌದು. ಶ್ರೀಮತಿ ವಿಂಟರಳೇ ಡೋರಾ- ಎಂಥ ಸಜೀವ ಚಿತ್ರಣ!

ತನ್ನ ಸ್ಮೃತಿಯ ಒಂದು ಅಕ್ಷರವನ್ನೂ ಬಿಟ್ಟುಕೊಡಲಾರದ ಜಾತಿಯವಳಾಗಿದ್ದ ಅವಳು ಪುಸ್ತಕದ ಒಂದೊಂದು ಶಬ್ದವನ್ನೂ ಓದಿದಳು. ಅಂ! ಚಾರ್ಲ್ಸ್ ತನ್ನನ್ನು ಇಷ್ಟೊಂದು ಮಾಧು-

ಕ್ಯದಿಂದ ಪ್ರೀತಿಸುತ್ತಿದ್ದನೆ? ಈಗಾತ ತುಂಬ ಶ್ರೀಮಂತನೂ ಆಗಿರಬಹುದು. ಅವನನ್ನು ತಿರಸ್ಕರಿಸಿ ತಾನು ದೊಡ್ಡ ತಪ್ಪು ಮಾಡಿದೆ. ಆದರೆ ಈಗೇನು ಮಾಡಲಾದೀತು? ತಾನೇ ಹೆಣೆದುಕೊಂಡ ಬಲೆಯಲ್ಲಿ ಸಿಕ್ಕುಬಿದ್ದಿದ್ದಳಾಕೆ. ಚಾರ್ಲ್ಸನ ಹೆಂಡತಿಯಾಗಿದ್ದರೆ ಇಂದು ಎಷ್ಟೊಂದು ಧನ, ಮಾನ ಸಿಗುತ್ತಿತ್ತು! ಇಂಥ ಮಹಾನ್ ಲೇಖಕನ ಹೆಂಡತಿಯಾಗುವುದೆಂದರೆ ಸಾಮಾನ್ಯವೆ? ವಿಂಟರನಂತೂ ಮದ್ಯದ ವ್ಯಸನದಲ್ಲಿ ತನ್ನೆಲ್ಲ ಸಂಪತ್ತನ್ನು ಹಾಳುಮಾಡಿಬಿಟ್ಟಿದ್ದ. ಈಗ ಬಡತನದ ಬಾಳು ಪಾಲಿಗೆ ಬಂದಿತ್ತು. ಮೇರಿಯಾಳಿಗೆ ಇಬ್ಬರು ಹುಡುಗಿಯರಿದ್ದರು. ಎಂದೂ ತೀರಿಸಲಾಗದ ಸಾಲದ ಹೊರೆ ಇತ್ತು.

ಅಂದು ರಾತ್ರಿ, ತನ್ನ ಪತಿ ವಿಂಟರ್ ಮನೆಗೆ ಬಂದಾಗ ಮೇರಿಯ ಹೇಳಿದಳು: "ಇಂದು ಈ ಪುಸ್ತಕ ಓದಿದೆ. ನಾನು ಈ ಪ್ರಖ್ಯಾತ ಲೇಖಕನ ಹೆಂಡತಿಯಾಗಬಹುದಿತ್ತು. ನಾನು ಅವನನ್ನೆ ಲಗ್ನವಾಗಬೇಕಿತ್ತು."

"ಯಾವ ಬದ್ಧೀಮಗ ಬೇಡವೆಂದಿದ್ದ ನಿನಗೆ?"

"ನಾನು ಮೂರ್ಖಳಾಗಿದ್ದೆ."

"ಸರಿ. ಹೆಂಗಸರಿಗೆ ಬುದ್ಧಿ ಬರುವುದು ಮುದುಕರಾದ ಮೇಲೆಯೆ," ಎಂದು ವಿಂಟರ್ ನಗುತ್ತ ತನ್ನ ಕೋಣೆಗೆ ಹೋಗಿಬಿಟ್ಟ.

ಚಾರ್ಲಸನೊಡನೆ ಕೊನೆಯ ಭೆಟ್ಟಿಯಾದಾಗ ಮೇರಿಯಾಳಿಗೆ ೧೬-೧೭ ವರ್ಷಗಳಾಗಿದ್ದಿರಬೇಕು, ಅಷ್ಟೆ. ಈಗವಳಿಗೆ ೪೦ ವರ್ಷಗಳಾಗುತ್ತ ಬಂದಿದ್ದವು. ಚಾರ್ಲಸನಿಗೆ ಪ್ರಿಯವಾಗಿದ್ದ ಅವಳ ಬಂಗಾರ ಬಣ್ಣದ ಕೂದಲು ಉದುರತೊಡಗಿತ್ತು. ಅವಳ ಸೌಕುಮಾರ್ಯ, ಮಾಧುರ್ಯ ಎಲ್ಲ ಮಾಯವಾಗಿದ್ದವು.

ಅವಳು ಕನ್ನಡಿಯ ಎದುರು ನಿಂತಾಗ "ಓ! ಡೋರಾ ಎಲ್ಲಿ, ನಾನೆಲ್ಲಿ?" ಎಂದುಕೊಳ್ಳುವಳು. ಆದರೆ ಮರುಕ್ಷಣವೇ "ಈಗ ಚಾರ್ಲಸನೂ ಮುದುಕನಾಗಿರಬೇಕು," ಎಂಬ ವಿಚಾರ ಬಂದು ಅವಳಿಗೆ ತುಸು ಹಾಯೆನಿಸಿತು. ಅವಳು ಚಾರ್ಲ್ಸನಿಗೊಂದು ಪತ್ರ ಬರೆದಳು. ಅದರಲ್ಲಿ ಕೊನೆಗೆ "ಆ ದಿನಗಳು ಎಷ್ಟೊಂದು ಮಧುರವಾಗಿದ್ದವು! ಅಯ್ಯೋ! ನನ್ನ ತಂದೆತಾಯಿಗಳು ನನ್ನ ಸರ್ವನಾಶ ಮಾಡಿದರು. ನನ್ನ ನಿಜವಾದ ಜೀವನ ಸಂಗಾತಿಯನ್ನು ನನ್ನಿಂದ ಕಸಿದುಕೊಂಡು ನನ್ನನ್ನು ಅಯೋಗ್ಯನಿಗೆ ಧಾರೆಯೆರೆದರು. ನಾನು ಸ್ವತಂತ್ರಳಂತೆ ನಡೆದುಕೊಳ್ಳಬಲ್ಲವಳಾಗಿದ್ದರೆ- ಹೋಗಲಿ ಆ ಮಾತು. ಇಂದು 'ಡೇವಿಡ್ ಕಾಪರ್‌ಫೀಲ್ಡ್' ಓದಿದೆ. ಎಲ್ಲ-ಎಲ್ಲ ನೆನಪುಗಳು ಮರುಕಳಿಸಿದವು. ಇಂಥ ಸುಂದರ ಕಾದಂಬರಿ ಬರೆದದ್ದಕ್ಕಾಗಿ ನಾನರ್ಪಿಸುವ ನಮ್ರ ಅಭಿನಂದನೆಗಳನ್ನು ಸ್ವೀಕರಿಸಿರಿ" ಎಂದು ಬರೆದಳು.

ಲಂಡನ್ನಿನಲ್ಲಿಯ ತನ್ನ ಮನೆಯಲ್ಲಿ ಆರಾಮಾಗಿ ಕುಳಿತಿದ್ದ ಚಾರ್ಲಸನಿಗೆ ಅವಳ ಪತ್ರ ಸಿಕ್ಕಿತು. ನಿತ್ಯವೂ ಅವನಿಗೆ ನೂರಾರು ಅಭಿನಂದನ ಪತ್ರಗಳು ಬರುತ್ತಿದ್ದುದರಿಂದ ಅವನು ಮೇರಿಯಳ ಪತ್ರವನ್ನೂ ಉದಾಸೀನತೆಯಿಂದ ಬದಿಗೆ ಸರಿಸಿದ.

ಮಾರನೆಯ ದಿನ ರಾತ್ರಿ ಆತ ಪತ್ರಗಳನ್ನೋದುತ್ತಿದ್ದಾಗ ಮೇರಿಯಳ ಪತ್ರ ಕಂಡು ಅವನಿಗೆ ಜೀವನದ ವಸಂತಮಾಸ ಮತ್ತೆ ಬಂದಂತನಿಸಿತು. ತಾನು ಮತ್ತೆ ತರುಣನಾದಂತೆ ಭಾಸವಾಯಿತು. ಆತ ತುಟಿಯಲ್ಲಿ, "ಮೇರಿಯಾ, ಡೋರಾ, ನನ್ನ ಮೇರಿಯಾ, ನನ್ನ ಡೋರಾ" ಎಂದು ಗೊಣಗಿಕೊಂಡ ತತ್‌ಕ್ಷಣ ಮೇರಿಯಾಳಿಗೆ ಉತ್ತರ ಬರೆದ:

"ತಾವಿಸ್ಟೊಕ್ ಹೌಸ್,
"ಶನಿವಾರ ೧೦-೩-೧೮೫೫

"ಪ್ರಿಯ ಮಿಸೆಸ್ ವಿಂಟರ್,

"ನಿಮ್ಮ ಪತ್ರ ತಲುಪಿ ತುಂಬ ಆನಂದವಾಯಿತು. ಎಷ್ಟು ಒಳ್ಳೆಯದಾದ, ಪ್ರೇಮಪೂರ್ಣ ಪತ್ರ ಬರೆದಿದ್ದೀರಿ! ಪ್ರೇಮ ತರಂಗಗಳ ಮೇಲೆ ಈಸಿದಂತಾಯಿತು ನನಗೆ. ನಿಮಗೆ ಇಬ್ಬರು ಹೆಣ್ಣು ಮಕ್ಕಳಿರುವುದು ತಿಳಿಯಿತು. ಪುಟ್ಟ ಪುಟ್ಟ ಹುಡುಗಿಯರ ಪ್ರಸ್ತಾಪ ನನ್ನನ್ನು ಹುಚ್ಚನನ್ನಾಗಿ ಮಾಡುವಂತನಿಸಿತು. ಆದರೆ ನಾನೂ ಈಗ ಒಂಬತ್ತು ಮಕ್ಕಳ ತಂದೆ ಎಂಬ ನೆನಪು ಬಂದು ಸ್ತಿಮಿತಕ್ಕೆ ಬಂದೆ. ಈ ಇಪ್ಪತ್ತು ವರ್ಷಗಳ ಕಾಲದ ಚಿತ್ರ ನನ್ನ ಕಣ್ಮುಂದೆ ಸುಳಿಯಿತು. ಈ ಜೀವನವಾದರೂ ಎಷ್ಟು ವಿಚಿತ್ರವಾ

ಗಿದೆ! ನಿಮಗಿಂತಲೂ ಹೆಚ್ಚಾಗಿ ನಾನು ಆ ಗತ ದಿನಗಳನ್ನು ಸ್ಮರಿಸುತ್ತಿರುತ್ತೇನೆ.

"ನಿಮ್ಮನ್ನೊಮ್ಮೆ ಭೆಟ್ಟಿಯಾಗಿ ಮಾತಾಡಲು ಅವಕಾಶ ಸಿಕ್ಕರೆ ನನಗೆ ಬಹು ಆನಂದವಾದೀತು. ಇಷ್ಟೊಂದು ದೀರ್ಘ ಕಾಲದ ನಂತರ ನಿಮ್ಮನ್ನು ಕಂಡರೆ ಅದೆಷ್ಟು ಸುಖವಾದೀತು......"

ಅವರೀರ್ವರಲ್ಲಿ ಇಂಥ ಹಲವಾರು ಪ್ರೇಮ ಪತ್ರಗಳು ಓಡಾಡಿದವು, ೧೮೫೫ ರ ಮಾರ್ಚ್ ತಿಂಗಳ ಒಂದು ರವಿವಾರದ ವರೆಗೆ.

ಆ ರವಿವಾರ ಮಧ್ಯಾಹ್ನ ೩ ರಿಂದ ೪ ರ ವರೆಗೆ ತಾನೊಬ್ಬನೇ ಮನೆಯಲ್ಲಿರುವುದಾಗಿ ಚಾರ್ಲ್ಸ್ ಮೇರಿಯಳಿಗೆ ತಿಳಿಸಿದ್ದ. ಆ ಸಮಯಕ್ಕೆ ಸರಿಯಾಗಿ ಆತ ತನ್ನ ದಿವಾಣಖಾನೆಯಲ್ಲಿ ಅವಳ ಹಾದಿ ಕಾಯುತ್ತ ಕುಳಿತಿದ್ದ. ಸರಿಯಾಗಿ ಮೂರು ಗಂಟೆಗೆ ಬಾಗಿಲ ಗಂಟೆ ಬಾರಿಸಿದಾಗ ತನ್ನ ಜೀವನದಲ್ಲಿ ಇಂಥ ಮಧುರ ಶಬ್ದವೇ ಕಿವಿಗೆ ಬಿದ್ದಿರಲಿಲ್ಲವೆಂದಾತನಿಗೆ ಅನಿಸಿತು.

"ಬಾ ಬಾ!" ಎನ್ನುತ್ತಲೇ ಆತ ಬಾಗಿಲ ಬಳಿ ಹೋದ. ಸ್ವರ್ಗದ ಬಾಗಿಲೇ ತೆರೆಯುತ್ತಿದೆ ಎಂಬ ಭ್ರಮೆಯುಂಟಾಗಿತ್ತಾತನಿಗೆ.

ಆತ ಬಾಗಿಲು ತೆರೆದ. ನೋಡಿದ. ಸ್ವಪ್ನ ಚೂರುಚೂರಾಯಿತು. ಓಹ್! ಎಷ್ಟು ಸ್ಥೂಲಳಾಗಿ, ಅಸಹ್ಯವಾಗಿ ಬೆಳೆದಿದ್ದಾಳೆ ಮೇರಿಯಾ. ಒಳಗಿನ ಚಿತ್ರ ಮಾಯವಾಗಿ ಬರೀ ಚೌಕಟ್ಟು ಮಾತ್ರ ಉಳಿದಿತ್ತು.

"ಇಷ್ಟು ದೀರ್ಘ ಕಾಲದ ಮೇಲೆ ನಿನ್ನನ್ನು ಕಾಣುವುದು ಎಷ್ಟು ಸಂತಸದ ಮಾತು. ನೀನು ಏನೇನೂ ಬದಲಾಯಿಸಿಲ್ಲ" ಮೇರಿಯಾ ಹೇಳಿದಳು. ಅವಳ ಕಂಠದಲ್ಲಿ ಕರ್ಕಶತೆ ಇತ್ತು.

"ನೀನೂ ಬದಲಾಗಿಲ್ಲ" ಚಾರ್ಲಸನೂ ಸುಳ್ಳು ಹೇಳಿ ಅವಳನ್ನು ಚಹದ ಟೇಬಲ್ಲಿಗೆ ಕರೆದೊಯ್ದ.

ಚಹ ತರಿಸಿದ. ಅವನ ಉತ್ಸಾಹ ಕರಗಿತ್ತು. ಕನಸು ಮಾಯವಾಗಿತ್ತು.

"ನಿನ್ನನ್ನು ಕಂಡು ಎಷ್ಟು ಆನಂದವಾಗುತ್ತಿದೆ ಬಲ್ಲೆಯಾ, ಚಾರ್ಲಸ್?" ಮೇರಿಯಾ ಹೇಳಿದಳು.

"ನನ್ನ ಹೆಂಡತಿ ಮನೆಯಲ್ಲಿಲ್ಲದಿರುವುದು ವಿಷಾದದ ಸಂಗತಿ" ಚಾರ್ಲಸ್ ಉತ್ತರವಿತ್ತ.

"ಮತ್ತೊಮ್ಮೆ ಬಂದು ನೋಡುತ್ತೇನೆ."

"ಅಗತ್ಯವಾಗಿ ಬಾ. ಮತ್ತೆ ನಿನ್ನ ಗಂಡ—ಮಿಸ್ಟರ್ ವಿಂಟರರ ಸುದ್ದಿಯೇನು?"

"ಇಂದವರ ಆರೋಗ್ಯ ಚೆನ್ನಾಗಿಲ್ಲ. ನಮ್ಮ ದಿನಗಳು ಬಲು ಕಷ್ಟದಿಂದ ಕಳೆಯುತ್ತಿವೆ. ಅವರೀಗ ನಿರುದ್ಯೋಗಿಗಳಾಗಿದ್ದಾರೆ."

"ಛೆ! ಛೆ! ಬಹಳ ದುಃಖವಾಗುತ್ತಿದೆ ಈ ಮಾತು ಕೇಳಿ."

"ನಿಮ್ಮ ಹೆಂಡತಿ ಸುಂದರಿಯೂ ಸುಶೀಲೆಯೂ ಆಗಿರಬೇಕು ಎಂದು ನನಗೆ ಅನಿಸುತ್ತದೆ" ಮೇರಿಯಾ ಬಲಾತ್ಕಾರವಾಗಿ ತನ್ನ ಶಬ್ದಗಳಲ್ಲಿ ಮಾಧುರ್ಯವನ್ನು ತುಂಬುತ್ತ ಹೇಳಿದಳು.

ಸುಳ್ಳು ಹೇಳುವುದೆಂದರೆ ಎಂದೂ ಒಗ್ಗದ ಚಾರ್ಲ್ಸ್ ಮತ್ತೊಮ್ಮೆ ಸುಳ್ಳು ಆಡಿದ: "ಹೌದು. ಅವಳು ತುಂಬ ಸುಂದರಿಯೂ ಸುಶೀಲಳೂ ಆಗಿದ್ದಾಳೆ."

"ನಿಮ್ಮ ಪುಸ್ತಕಗಳಂತೂ ಸರ್ವಶ್ರೇಷ್ಠವಾಗಿವೆ. ಒಂದಿಲ್ಲೊಂದು ದಿನ ನೀವು ಪ್ರಖ್ಯಾತ ಲೇಖಕರಾಗುವಿರಿ ಎಂದು ನಾನು ನನ್ನ ತಂದೆ-ತಾಯಿಗಳಿಗೆ ಸದಾ ಹೇಳುತ್ತಿದ್ದೆ. 'ಡೇವಿಡ್ ಕಾಪರ್ ಫೀಲ್ಡ್'ನ ಗುಟ್ಟು ಅರಿತಾಗ ನನಗೆಷ್ಟು ಅಭಿಮಾನವೆನಿಸಿತು ಬಲ್ಲಿರಾ?"

"ಹೌದೇ?"

"ಹೌದು. ಅದರಲ್ಲಿ ನಮ್ಮಿಬ್ಬರನ್ನೂ ನಾನು ಗುರುತಿಸಿದ್ದೇನೆ. ಆ ಪುಸ್ತಕ ಓದಿದಾಗ ನನ್ನಲ್ಲಿ ಮೂಡಿದ ಭಾವನೆಗಳನ್ನು ವರ್ಣಿಸುವುದು ನನಗೆಂದೂ ಸಾಧ್ಯವಾಗದು."

ಹೀಗೆಯೇ ಸಂಬಂಧ ಪಟ್ಟ, ಸಂಬಂಧವಿಲ್ಲದ ಮಾತುಗಳನ್ನಾಡುತ್ತ ಅವರು ಚಹ ಕುಡಿದರು. ಇಬ್ಬರಿಗೂ ಈ ಭೆಟ್ಟಿ ಸುಖಕರವಾಗಿರದೆ, ದುಃಖಕರವಾಗುತ್ತಿದೆ, ಅಸಹ್ಯವಾಗುತ್ತಿದೆ ಎಂಬುದರ ಕಲ್ಪನೆಯಿದ್ದರೂ ಬಾಹ್ಯದಲ್ಲಿ ಅವರು ಸುಖವಾಗಿದೆಯೆಂದೇ ನಟಿಸುತ್ತಿದ್ದರು. ಕೊನೆಗೆ ಮೇರಿಯಾ ಎದ್ದು "ಹೊತ್ತಾಯಿತು. ಇನ್ನು ಹೋಗುವೆ. ಮನೆಯಲ್ಲಿ ಅವರು ನನ್ನ ಹಾದಿ ಕಾಯುತ್ತಿರುತ್ತಾರೆ. ನನ್ನ ಮೇಲೆ ಅವರಿಗೆ ಬಲು ಜೀವ" ಎಂದಳು.

"ಹೌದು. ಅವರನ್ನು ನೀನು ಕಾಯಿಸಬಾರದು."

ಚಾರ್ಲ್ಸ್ ಬಾಗಿಲವರೆಗೂ ಅವಳೊಡನೆ ಹೋದ. ಬಾಗಿಲು ತೆರೆದೊಡನೆ ಅವನ ಮನದಲ್ಲಿ ಹೃದಯದಲ್ಲಿ ಸಾಹಿತ್ಯದಲ್ಲಿ ಬೇರುಬಿಟ್ಟಿದ್ದ ಒಂದು ಕಿಶೋರಾವಸ್ಥೆಯ ಸ್ವಪ್ನ ಶಾಶ್ವತವಾಗಿ ಕರಗಿ ಹೋಗಲಿತ್ತು. ಬಾಗಿಲು ತೆರೆಯುವಾಗ, "ಈ ಹೆಂಗಸು ಎಷ್ಟೊಂದು ಆಶೆಯಿಟ್ಟುಕೊಂಡು ಬಂದಿದ್ದಳು! ಈಗ ಹತಾಭಿಮಾನವನ್ನು ಜೊತೆ ಮಾಡಿಕೊಂಡು ಹೋಗುತ್ತಿದ್ದಾಳಲ್ಲ" ಎಂಬ ವಿಚಾರ ಬಂದು ಆತ ಪ್ರೇಮದಿಂದಲ್ಲ, ದಯೆಯಿಂದ "ಮತ್ತೆ ಬರುತ್ತೀ ತಾನೇ?", ಎಂದು ಕೇಳಿದ.

"ಅವಶ್ಯವಾಗಿ"

ಆದರೆ ಈ ಪ್ರಶ್ನೆ ಉತ್ತರಗಳು ಹೃತ್ಪೂರ್ವವಾಗಿ ಬಂದವುಗಳಾಗಿರದೆ ಅವರಿಬ್ಬರೂ ಬರಿದಾದ ತಮ್ಮ ಹೃದಯಗಳನ್ನು ಮುಚ್ಚಿಕೊಳ್ಳಲು ಮಾಡಿದ ಯತ್ನವಾಗಿತ್ತು.

ಮೇರಿಯಾ ಹೋದಳು. ಚಾರ್ಲ್ಸ್ ತಿರುಗಿ ದಿವಾಣಖಾನೆಗೆ ಬಂದ. ಕೆಲಸದಾಕೆ ಅವನನ್ನೇ ನೋಡುತ್ತಲಿದ್ದಳು. ಅವಳೇನಾದರೂ ತಿಳಿದುಕೊಳ್ಳಬಾರದಲ್ಲ—ಆದರೆ ಮರುಕ್ಷಣದಲ್ಲೆ ಆತನಿಗೆ "ಆದದ್ದಾದರೂ ಏನು ? ತಿಳಿದುಕೊಳ್ಳಲು ಏನಿದೆ?" ಎಂದು ಅನಿಸಿತು.

ಆತ ಆರಾಮ ಖುರ್ಚಿಯಲ್ಲೊರಗಿ ಪೈಪ್ ಹೊತ್ತಿಸಿದ. ಅವನಿಗ 'ಡೇವಿಡ್ ಕಾಪರ್ ಫೀಲ್ಡ್'ನಲ್ಲಿಯ ಡೋರಾಳ ಸಾವಿನ ವರ್ಣನೆಯಿದ್ದ ಪ್ರಕರಣ ನೆನಪಿಗೆ ಬಂತು. ಆ ಚಿತ್ರ ಎಷ್ಟೊಂದು ಕರುಣಾಪೂರ್ಣವಾಗಿ ಎಷ್ಟೊಂದು ಹೃದಯಸ್ಪರ್ಶಿಯಾಗಿತ್ತು! ಆದರೆ ನಿಜ ಡೋರಾಳ ಮರಣ ಈ ರೀತಿಯಲ್ಲಾದೀತು ಎಂದು ಅವನಿಗೇನು ಗೊತ್ತಿತ್ತು? ಅವಳು ಇಷ್ಟೊಂದು ಸಾಮಾನ್ಯ ಸ್ವರೂಪದಲ್ಲಿ ಬಂದು ಎದುರಿಗೆ ನಿಂತಾಳು, ಅವಳ ಮೇಲೆ ಆಧೃತವಾದ ತನ್ನ ಸ್ವಪ್ನ ಶಾಶ್ವತವಾಗಿ ಒಡೆದುಹೋದೀತು ಎಂಬ ಕಲ್ಪನೆಯೂ ಅವನಿಗಿರಲಿಲ್ಲ. ಆತನೇನೊ ಬರೆದುಬಿಟ್ಟಿದ್ದ. ಆದರೆ ನಿಜವಾಗಿಯೆಂದರೆ ಇಂದು ಮಧ್ಯಾಹ್ನ ಡೋರಾ ಸತ್ತಿದ್ದಳು. *

"ಜ್ಞಾನೋದಯ" ದಿಂದ



## ಮರುಭೂಮಿಯ ಕತೆ

ಆ ಉತ್ತಾನವಾದ ಪರ್ವತವು ತನ್ನ ಮೇಲ್ಮೈ ತುರಿಕೆಯನ್ನು ಕಡಿಮೆ ಮಾಡಿಕೊಳ್ಳಲು ಗಾಳಿಗೆ ತನ್ನ ಬೆನ್ನನ್ನು ಸವರಿಕೊಂಡು ಹೋಗಲು ಅನುಮತಿ ಇತ್ತಿತು.

ಒಂದು ಸಾವಿರ ವರುಷಗಳು ಉರುಳಿದವು. ಇಂದು ಅಲ್ಲಿ ಒಂದು ವಿಶಾಲವಾದ ಮರುಭೂಮಿ ಮಲಗಿದೆ. ಸಂಗ್ರಹ: ಅರವಿಂದ ಪರ್ವತೀಕರ

## ಜ್ಞಾಪಕ

ಆಸ್ಪತ್ರೆಯಲ್ಲಿ ಶಸ್ತ್ರಕ್ರಿಯೆಯಿಂದ ಎಚ್ಚರವಾದ ಬಳಿಕ ತಾನು ಬದುಕಿದ ಸಂತೋಷದಿಂದ ರೋಗಿ ದೇವರನ್ನು ವಂದಿಸಿದ.

ಅವನ ಪಕ್ಕದಲ್ಲೇ ಮಲಗಿದ ಇನ್ನೊಬ್ಬ ರೋಗಿ ಹೇಳಿದ: "ಹಾಗೆ ಒಮ್ಮೆಲೆ ಹಿಗ್ಗಬೇಡ. ಮೊನ್ನೆ ನನ್ನ ಶಸ್ತ್ರಕ್ರಿಯೆ ಮುಗಿದ ಬಳಿಕ ಡಾಕ್ಟರರು ತಮ್ಮ ಕತ್ತರಿಯನ್ನು ನನ್ನ ಹೊಟ್ಟೆಯೊಳಗೇ ಮರೆತಿದ್ದರು.

ಬಲಬದಿಯಲ್ಲಿ ಮಲಗಿದ್ದ ಇನ್ನೊಬ್ಬ ರೋಗಿ ಹೇಳಿದ: "ನನ್ನ ಶಸ್ತ್ರಕ್ರಿಯೆ ಮುಗಿಸಿ ಹೊಟ್ಟೆ ಹೊಲಿದಾಗ ಚಾಕು ಒಳಗೇ ಉಳಿದಿತ್ತು."

ಅಷ್ಟರಲ್ಲಿ ಆಪರೇಶನ್ ಮಾಡಿದ ಡಾಕ್ಟರರು ಒಳಗೆ ಪ್ರವೇಶಿಸಿ ಆ ರೋಗಿಯನ್ನು ಕೇಳಿದರು: "ನನ್ನ ಹ್ಯಾಟು ನೋಡಿದ್ದೀರಾ ?" —ಸಿ. ಎಚ್. ಕೃಷ್ಣರಾವ್

# ಜಗತ್ತಿನಲ್ಲಿ ಎಲ್ಲೆಲ್ಲಿಯೂ ವನಸ್ಪತಿ!




**ವನಸ್ಪತಿ ಮತ್ತು ಅದರಂತಹ ಸ್ನಿಗ್ಧ ಪದಾರ್ಥಗಳು ಜಗತ್ತಿನಲ್ಲೆಲ್ಲ—ಉಚ್ಚ ಜೀವನ-ಮಟ್ಟವಿರುವ ದೇಶಗಳಲ್ಲಿ ಕೂಡ—ಉಪಯೋಗಿಸಲ್ಪಡುತ್ತವೆ. ಬೆಣ್ಣೆ ಹೇರಳವಾಗಿ ದೊರೆಯುವ ಡೆನ್‌ಮಾರ್ಕ್, ಹಾಲೆಂಡ್ ಮತ್ತು ಅಮೆರಿಕಾದಲ್ಲಿ ಕೂಡ ಈ ಸ್ನಿಗ್ಧ ಪದಾರ್ಥಗಳಿಗೆನೇ ಹಾಲಿನಿಂದ ತಯಾರಿಸಿದ ಸ್ನಿಗ್ಧ ಪದಾರ್ಥಗಳಿಗಿಂತಲೂ ಹೆಚ್ಚು ಬೇಡಿಕೆಯಿರುತ್ತದೆ.**

ಜಗತ್ತಿನಲ್ಲಿ ವನಸ್ಪತಿಯ ಆವಿಷ್ಕಾರವಾಗುವ ಮೊದಲು ಅಡಿಗೆಗೆ ಸಿಗುತ್ತಿದ್ದ ಸ್ನಿಗ್ಧ ಪದಾರ್ಥಗಳೆಂದರೆ ಪ್ರಾಣಿಗಳ ಚರಬಿ, ಹಾಲಿನಿಂದ ತಯಾರಿಸಿದ ಸ್ನಿಗ್ಧ ಪದಾರ್ಥಗಳು ಮತ್ತು ಸಸ್ಯ ಎಣ್ಣೆಗಳು ಮಾತ್ರ! ಪ್ರಾಣಿಗಳ ಚರಬಿ ಮತ್ತು ಹಾಲಿನ ಸ್ನಿಗ್ಧ ಪದಾರ್ಥಗಳು ಬೇಕಾದಷ್ಟು ಸಿಗುತ್ತಿರಲಿಲ್ಲ. ಎಣ್ಣೆಗಳು ಅನಾನುಕೂಲವಾದ ದ್ರವರೂಪದಲ್ಲಿರುವುದು ಮಾತ್ರವಲ್ಲದೆ ಅವುಗಳಲ್ಲಿ ಅನೇಕ ಅಶುದ್ಧತೆಗಳೂ ಇರುತ್ತವೆ. ವಿಟಮಿನ್‌ಗಳು ಅವುಗಳಲ್ಲಿ ಇಲ್ಲವೇ ಇಲ್ಲ. ಈ ಕಾರಣಗಳಿಂದಾಗಿ, ಅಡಿಗೆಗೆ ಕಡಿಮೆ ಬೆಲೆಯ, ಪುಷ್ಟಿಕರವಾದ, ಗಟ್ಟಿಯಾದ ಒಂದು ಸ್ನಿಗ್ಧ ಪದಾರ್ಥವನ್ನು ಕಂಡುಹಿಡಿಯಲು ಜಗತ್ತಿನಲ್ಲೆಲ್ಲ ಪ್ರಯತ್ನಗಳು ಪ್ರಾರಂಭಿಸಲ್ಪಟ್ಟವು. ಅವುಗಳ ಫಲವೇ ವನಸ್ಪತಿ!

ವನಸ್ಪತಿ ಎಂದರೆ ಶುದ್ಧೀಕರಿಸಿದ, ಹೈಡ್ರೋಜನೇಟ್ ಮಾಡಿದ, ವಾಸನೆ ತೆಗೆದ ಮತ್ತು ವಿಟಮಿನ್ ಸೇರಿಸಿದ ಸಸ್ಯ ಎಣ್ಣೆ. ಶುದ್ಧೀಕರಣದಿಂದ, ಕಚ್ಚಾ ಸಸ್ಯ ಎಣ್ಣೆಗಳಲ್ಲಿ ಯಾವಾಗಲೂ ಅಡಕವಾಗಿರುವ, ಆಕ್ಷೇಪಣೀಯವಾದ ಜಿಡ್ಡು, ಕೊಳೆ, 'ಫ್ರೀ ಫ್ಯಾಟ ಆಸಿಡ್'ಗಳು ಮತ್ತು ಬಣ್ಣ ತೆಗೆಯಲ್ಪಡುತ್ತವೆ. ಹೈಡ್ರೋಜನೇಟ್ ಮಾಡುವುದರಿಂದ ದ್ರವರೂಪೀ ಎಣ್ಣೆ ಗಟ್ಟಿಯಾಗುತ್ತದೆ ಮತ್ತು ದೀರ್ಘಕಾಲ ಹಾಳಾಗದೆ ಇರುತ್ತದೆ. ಎಣ್ಣೆಯನ್ನು ವಾಸನೆರಹಿತಗೊಳಿಸುವ ವಿಧಿಯಿಂದ, ಮನಸ್ಸಿಗೆ ಒಗ್ಗದ ವಾಸನೆ ಮತ್ತು ರುಚಿ ತೆಗೆಯಲ್ಪಡುತ್ತವೆ. ಮತ್ತು ವಿಟಮಿನ್ ಸೇರಿಸುವುದರಿಂದಂತೂ ವನಸ್ಪತಿ ಸಸ್ಯ ಎಣ್ಣೆಗಿಂತ ಹೆಚ್ಚು ಪೌಷ್ಟಿಕವಾಗುವುದಲ್ಲದೆ ಹಾಲಿನಿಂದ ತಯಾರಿಸಲ್ಪಡುವ ಪರಿಶುದ್ಧ ಸ್ನಿಗ್ಧ ಪದಾರ್ಥಗಳಷ್ಟೇ ಪುಷ್ಟಿಕರವಾಗುತ್ತದೆ.

**ವನಸ್ಪತಿ ಮತ್ತು ಅದರಂತಹ ಸ್ನಿಗ್ಧ ಪದಾರ್ಥಗಳು ಜಗತ್ತಿನಲ್ಲೆಲ್ಲಾ ಉಪಯೋಗಿಸಲ್ಪಡುತ್ತವೆ!**

ವನಸ್ಪತಿ ಕೇವಲ ಕಡಿಮೆ ಬೆಲೆಯ, ಗಟ್ಟಿಯಾದ ಅಡಿಗೆಯ ಸ್ನಿಗ್ಧ ಪದಾರ್ಥವಾಗಿರುವುದು ಮಾತ್ರವೇ ಅಲ್ಲ, ಒಂದು ಅಮೂಲ್ಯ ಆಹಾರಪದಾರ್ಥವೂ ಆಗಿರುತ್ತದೆ! ಗೋಧಿ ಅಥವಾ ಅಕ್ಕಿಗಿಂತ 2½ ಪಾಲು ಹೆಚ್ಚು ಶಕ್ತಿಯನ್ನು ನಮಗೆ ನೀಡುತ್ತದೆ. ಮಾತ್ರವಲ್ಲ, ನಾವು ಕೊಂಡುಕೊಳ್ಳುವಾಗಲೂ ಅದು ಕಾರ್ಖಾನೆಯಿಂದ ಬರುವಾಗ ಇದ್ದಷ್ಟೇ ಚೊಕ್ಕಟ, ಆರೋಗ್ಯಕರ ಹಾಗೂ ಹಸನಾಗಿರುತ್ತದೆ. ಪ್ರತಿಯೊಂದು ಗ್ರಾಮ್ ವನಸ್ಪತಿಯಲ್ಲಿಯೂ ಬೆಳವಣಿಗೆಗೆ ನೆರವಾಗುವ, ಚರ್ಮ ಮತ್ತು ಕಣ್ಣುಗಳನ್ನು ರಕ್ಷಿಸುವ ವಿಟಮಿನ್ 'ಎ' ಧಾರಾಳವಾಗಿರುತ್ತದೆ.

ಹೆಚ್ಚಿನ ವಿವರಗಳಿಗೆ ಈ ವಿಳಾಸಕ್ಕೆ ಬರೆಯಿರಿ :
ದಿ ವನಸ್ಪತಿ ಮ್ಯಾನ್ಯುಫ್ಯಾಕ್ಚರರ್ಸ್
ಅಸೋಸಿಯೇಶನ್ ಆಫ್ ಇಂಡಿಯಾ
ಇಂಡಿಯಾ ಹೌಸ್, ಫೋರ್ಟ್ ಸ್ಟ್ರೀಟ್,
ಬೊಂಬಾಯಿ-1

75–11

ಅದು ಕಾಯಕಲ್ಪ ಮಾಡಬಲ್ಲದು

# ರಾಜಶಾಹಿ ರಸದ ಪವಾಡ

ಬಾಕರ್ಡರು ರಾಮನಾಥ ಜೋಶಿ




ಮುಪ್ಪನ್ನು ಮುಂದೂಡಬಲ್ಲ "ಸಂಜೀವಿನಿ"ಯೊಂದರ ಮೃಗಜಲವನ್ನು ಮಾನವನು ಶತಮಾನಗಳಿಂದ ಬೆಂಬತ್ತಿದ್ದಾನೆ. ಕಾಯಕಲ್ಪ ಚಿಕಿತ್ಸೆಯ ಕುರಿತು ನಾವು ಕೇಳುತ್ತಿರುವೆವಾದರೂ ಕಬ್ಬಿಣದಿಂದ ಬಂಗಾರವನ್ನು ಮಾಡಬಹುದೆಂಬ ಮೂಢ ನಂಬಿಕೆಗೆ ಸರಿದೂಗಬಲ್ಲ ಕತೆಯಿದೆಂದು ನಮಗನಿಸದೇ ಇಲ್ಲ. ಆದರೆ ಮುಪ್ಪು ನಮ್ಮ ಬಾಗಿಲನ್ನು ತಟ್ಟದಂತೆ ಭರವಸೆಯೀಯುವ ಸುಲಕ್ಷಣಗಳು ಈಗ ಕಂಡುಬರುತ್ತಿವೆ.

ನಿಮಗೆ ಗೊತ್ತಿರುವಂತೆ ಜೇನ್ನೊಣಗಳ ಕುಟುಂಬದಲ್ಲಿ ದಿನವೊಂದಕ್ಕೆ ಸಾವಿರಾರು ತತ್ತಿಯನ್ನೀಯಬಲ್ಲ ಒಬ್ಬಳೇ ಒಬ್ಬಳು ರಾಣಿಯಿರುತ್ತಾಳೆ. ಆಕೆಯ ಸಾಮ್ರಾಜ್ಯದಲ್ಲಿ ಸಹಸ್ರಾರು ಕೆಲಸಗಾರ ನೊಣಗಳಿರುತ್ತವೆ. ಇವಕ್ಕೆ ತಾಯ್ತನವಿಲ್ಲ. ರಾಣಿ ಮೂರು ವರ್ಷಕ್ಕೂ ಮಿಕ್ಕಿ ವೈಭವಯುಕ್ತವಾಗಿ ಬದುಕುವಳಾದರೆ, ಕೆಲಸಗಾರ ನೊಣಗಳು ಸುಗ್ಗಿಯ ವೇಳೆಯಲ್ಲಿ ಮೂರು ತಿಂಗಳು ಬದುಕುವುದೂ ಕಠಿಣ.

ಅಚ್ಚರಿಯೆಂದರೆ ಮುಂದೆ ರಾಣಿಯಾಗುವವಳೂ ಕೆಲಸಗಾರರಾಗುವವರೂ ಒಂದೇ ಬಗೆಯ ತತ್ತಿಯಿಂದ ಹೊರಬೀಳುತ್ತಾರೆ. ದಿನವೊಂದಕ್ಕೆ ತನ್ನ ತೂಕಕ್ಕೂ ಮಿಕ್ಕಿ ತತ್ತಿಯಿಡಬಲ್ಲ ದೀರ್ಘಾಯುವಾದ ರಾಣಿ ತತ್ತಿಯ ಅವಸ್ಥೆಯಲ್ಲಿದ್ದಾಗ ಸ್ವೀಕರಿಸಿದ ವಿಶಿಷ್ಟ ಆಹಾರವೇ ಆಕೆಯ ರೂಪಾಂತರಕ್ಕೆ ಕಾರಣ. ರಾಣಿ ಅಕಸ್ಮಾತ್ ಸತ್ತಳೆನ್ನಿ. ಆಗ ಸಾಮಾನ್ಯವಾಗಿ ತತ್ತಿಯಿಂದ ಕೆಲಸಗಾರ ನೊಣವಾಗಿ ಹೊರಬೀಳಬೇಕಾಗಿದ್ದ ಹುಳಕ್ಕೇ ವಿಶಿಷ್ಟ ಆಹಾರ ಕೊಟ್ಟು ಕುಟುಂಬವು ಹೊಸ ಬಲಿಷ್ಠವಾದ ರಾಣಿಯನ್ನು ತಯಾರಿಸುವುದು. ಈ ವಿಶಿಷ್ಟ ಆಹಾರವೇ "ರಾಯಲ್ ಜೆಲ್ಲಿ" ಅಥವಾ ರಾಜಶಾಹಿ ರಸ. ಕೀಟಕ ಜೀವನದ ಮೇಲೆ ಇಂಥ ಪವಾಡ ಸದೃಶ ಪರಿಣಾಮವನ್ನು ಈ ರಸ ಬೀರಬಲ್ಲದಾದರೆ ಮಾನವನೇಕೆ ಅದರ ಲಾಭ ಪಡೆಯಬಾರದೆಂದು ವಿಜ್ಞಾನಿಗಳಿಗಿಂತ ಹೆಚ್ಚು ಕಲ್ಪನಾವಿಲಾಸಿಗಳು ತರ್ಕಿಸಿದರು.

ಪೂಜ್ಯ ಪೋಪರ ಖಾಸಗೀ ವೈದ್ಯರಾದ ಡಾ ರಿಚಾರ್ಡ್ ಗಲೇಜಿ- ಲಿಸಿಯವರು ೧೯೫೪

ರಲ್ಲಿ ಗುರುಗಳು ಗುಣಮುಖವಾದುದಕ್ಕೆ ರಾಜಶಾಹಿ ರಸದ ಸೇವನೆಯೇ ಕಾರಣವೆಂದು ಪ್ರಕಟಿಸಿದಾಗ ಅದೊಂದು ಆಶಾದಾಯಕ ಸುದ್ದಿಯಾಗಿತ್ತು. ಎಂಭತ್ತು ವಯಸ್ಸಿನ ಚಿಲೀ ದೇಶದ ಅಧ್ಯಕ್ಷ ತನ್ನ ದೇಹದಾರ್ಢ್ಯದ ಕೀರ್ತಿ ರಾಜಶಾಹಿ ರಸಕ್ಕೆ ಸಲ್ಲಬೇಕೆಂದು ೧೯೫೭ ರಲ್ಲಿ ಹೊರಗೆಡಹಿದಾಗ ಅದು ಮತ್ತಷ್ಟು ಭರವಸೆ ಕೊಟ್ಟಿತು

ಸುದೈವದಿಂದ ವಿದೇಶಗಳಲ್ಲಿ ಅಲೆಯನ್ನೆಬ್ಬಿಸಿದ ಈ ಸುದ್ದಿ ಫ್ರೆಂಚ್ ಸರಕಾರದ ಕೃಷಿ ಸಂಶೋಧನಾ ಕೇಂದ್ರದ ಡೈರೆಕ್ಟರರಾದ ಡಾ. ರೇಮಿ ಚಾವಿನ್ ಅವರನ್ನು ಹುರಿದುಂಬಿಸಿತು. ಇತ್ತೀಚಿನ ಲೇಖವೊಂದರಲ್ಲಿ ಡಾ. ಚಾವಿನ್ನರು ವಿಖ್ಯಾತ ವೈದ್ಯಕೀಯ ವಿಜ್ಞಾನಿ ಡಾ. ಡೆಸ್ಟ್ರೈಮ್ ಅವರ ಸಂಶೋಧನೆಗಳ ಫಲಿತಾಂಶಗಳನ್ನು ಪ್ರಕಟಿಸಿದ್ದಾರೆ. ೭೧ ರಿಂದ ೭೫ ವಯಸ್ಸಿನ ೧೩ಳ ಜೀರ್ಣಶಕ್ತಿಯಿಲ್ಲದ ದುರ್ಬಲ ಮತ್ತು ಅರಳು-ಮರುಳು ಮುದುಕರಿಗೆ ದಿನ ಬಿಟ್ಟು ದಿನ ೨೦ ಮಿಲಿಗ್ರಾಂ ಇಂಟ್ರಾಮಸ್ಕ್ಯುಲರ್ ಚುಚ್ಚುಮದ್ದಿನ ರೂಪದಲ್ಲಿ ರಾಜಶಾಹಿ ರಸವನ್ನು ಕೊಡಲಾಯಿತು. ಆರು ಬಾರಿಯೊಳಗೆ ಜೀರ್ಣಶಕ್ತಿ ಲಭಿಸಿ ತೂಕ ಹೆಚ್ಚುವುದಕ್ಕೆ ಕಾರಣವಾಯಿತು. ಡಾ ಚಾವಿನ್ ಅವರ ಮಾತಿನಲ್ಲೇ ಹೇಳುವುದಾದರೆ, "ಇದೇ ರಾಜಶಾಹೀ ರಸದ ಎದ್ದು ಕಾಣುವ ಪ್ರಭಾವ."

ಡಾ. ಡೆಸ್ಟ್ರೈಮ್ ಚಿಕಿತ್ಸೆ ನಡೆಸಿದ ೭೦–೭೫ ವಯಸ್ಸಿನ ಮಿತಿಯ ಹೊರಗಿನ ನಾಲ್ಕು ರೋಗಿಗಳ ವಿವರವನ್ನು ಡಾ. ಚಾವಿನ್ ಆ ಬಳಿಕ ಮುಂದಿಡುತ್ತಾರೆ.

ಎಂಭತ್ನಾಲ್ಕರ ಮುದುಕಿಯೊಬ್ಬಳು ಚುರುಕಾಗಿದ್ದರೂ ಮಾನಸಿಕ ದೌರ್ಬಲ್ಯ ಆಕೆಗೆ ತಲೆದೋರಿತ್ತು. ಬಹು ದೀರ್ಘಕಾಲದ ಇನ್‌ಫ್ಲೂಯೆಂಝಾ ಪೀಡೆಯಿಂದಾಗಿ ಆಕೆಗೆ ಇಳಿ ರಕ್ತಒತ್ತಡದ ಬೇನೆ ಜೇರೆ. ಮೊದಲನೆಯ

ಚುಚ್ಚುಮದ್ದಿನ ಬಳಿಕ ಮುದುಕಿ ಹಾಸಿಗೆ ಬಿಟ್ಟಿದ್ದಳು. ಅವಳ ತೂಕ ಹೆಚ್ಚಿ ದಿನಚರಿಯಲ್ಲಿ ಆಸಕ್ತಿ ವಹಿಸತೊಡಗಿದಳು. ಎಂಟು ತಿಂಗಳ ತನಕವೂ ಸುಧಾರಣೆಯ ವೇಗ ಕುಗ್ಗಲಿಲ್ಲ.

೬೮ ಮಳೆಗಾಲ ಕಳೆದವನೊಬ್ಬ ಬಲು ದುರ್ಬಲನಾಗಿದ್ದ. ಮಾನಸಿಕ ಶಾಂತಿಯಿಲ್ಲದ ಅವನು ಬವಳಿ ಬೀಳುತ್ತಿದ್ದ. ಹನ್ನೆರಡು ಚುಚ್ಚುಮದ್ದುಗಳ ನಂತರ ತಾನು ಕಳೆದುಕೊಂಡ ತೂಕವನ್ನೂ ಜೀರ್ಣಶಕ್ತಿಯನ್ನೂ ಆತ ಸಂಪಾದಿಸಿದ.

ಐವತ್ತರ ಹೆಂಗಸಿಗೆ ಐದು ವರ್ಷಗಳಿಂದ ಮುಟ್ಟು ನಿಂತಿತ್ತು. ಆಕೆಯಲ್ಲಿ ಸ್ಥಿರತೆಯಿರಲಿಲ್ಲ. ಬಿಡುವಿಲ್ಲದ ತಲೆನೋವು, ಗಂಟಲ ಬೇನೆ, ಬೆನ್ನು ಸಿಡಿತ, ಮೂರ್ಛೆ ನಿದ್ರಾನಾಶ ಇವುಗಳ ಬಾಧೆಯೊಂದಿಗೆ ಆಕೆಗ ಆತ್ಮಹತ್ಯೆಯ ಯೋಚನೆ. ಆರು ಚುಚ್ಚುಮದ್ದು ಸೇರಿದೊಡನೆ ಆಕೆಯ ಆತ್ಮಹತ್ಯೆಯ ಹಂಬಲ ಹೊರಟುಹೋಯಿತು. ಆಕೆ ತನ್ನ ದೈನಂದಿನ ಕೆಲಸಗಳಲ್ಲಿ ಅಭಿರುಚಿ ತೋರಿಸತೊಡಗಿದಳು ಆಕೆಯ ಮನೋರೋಗ ಇನ್ನಿಲ್ಲವಾಯಿತು, ನಿದ್ರೆಯಿಲ್ಲವೆಂಬ ಕೊರಗು ತಪ್ಪಿತು ಆಕೆ ಎಲ್ಲರಂತೆ ವಿಷಯಜೀವನ ನಡೆಸತೊಡಗಿದಳು.

೬೨ ರ ಮುದುಕಿ ರಕ್ತಹೀನವಾಗಿರುವುದರ ಜತೆಗೆ ಅತ್ಯಂತ ನಿಶ್ಶಕ್ತಳಾಗಿದ್ದಳು. ಎಂಟಿಬಾಯಟಿಕ್ ಚಿಕಿತ್ಸೆಗೆ ಬಗ್ಗದ ಮೊಮೊಳಿ... ಹುಣ್ಣಿನಿಂದಾಗಿ ಆಕೆ ಮನೋದೌರ್ಬಲ್ಯದಿಂ... ಬಳಲುತ್ತಿದ್ದಳು. ನಾಲ್ಕು ತಿಂಗಳೊಳಗೆ ರೋಗಾ...ಣುಗಳೆಲ್ಲ ನಾಶವಾಗಿ ಆಕೆ ಗುಣಮುಖಿ...ವಾದಳು.

ಡಾ ಡೆಸ್ಟ್ರೆಮ್, ಆತ್ಮಹತ್ಯೆಯ ಬಯಕೆಯು...ಳ್ಳವರಿಗೆ, ಜೀವನದಲ್ಲಿ ಜುಗುಪ್ಸೆ ಹೊಂದಿದಂ...ವರಿಗೆ, ಎಳೆಯ ವಯಸ್ಸಿನಲ್ಲಿಯೇ ಮನೋ...ರೋಗಕ್ಕೆ ತುತ್ತಾದವರಿಗೆ ರಾಜಶಾಹೀ ರಸ... ಚಿಕಿತ್ಸೆಯನ್ನು ನೀಡಿದರು. ಇವರಲ್ಲಿ ಹೆಚ್ಚಿನವರ... ಬೇರೆ ಚಿಕಿತ್ಸೆಯಿಂದ ನಿರಾಶರಾದಂಥವರು... ರೋಗಿಗಳು ಕಳೆದು ಹೋದ ತಮ್ಮ ಆರೋಗ್ಯ...ವನ್ನು ಮರಳಿ ಪಡೆದರು.

ಮನೋರೋಗಿಗಳ ಚಿಕಿತ್ಸೆಯಲ್ಲಿ ಅದು ಹ...ವೆಯನ್ನು ಕ್ಷಿಪ್ರವಾಗಿ ಹೆಚ್ಚಿಸುವುದು. ಪಿತ್ತರಸ...ದ್ರಾವಣದ ಬದಲಾವಣೆಯೆ ಮನೋರೋಗಕ್ಕೆ... ಕಾರಣವೆಂದು ಒಪ್ಪುವ ಆಧುನಿಕ ವೈದ್ಯವರ್ಗ... ಪಿತ್ತಕೋಶವನ್ನು ಉತ್ತೇಜಿಸುವ ಈ ಚಿಕಿತ್ಸೆಯ... ವಿಧಾನಕ್ಕೆ ತಲೆ ಬಾಗಿದ್ದಾರೆ

ಚಿಕ್ಕ ಮಕ್ಕಳ ಕುಂಠಿತವಾದ ಬೆಳವಣಿಗೆ...ಯನ್ನು ಗುಣಪಡಿಸಲು ರಾಜಶಾಹೀ ರಸವನ್ನು... ಡಾ ಸರೋಯ್, ಡಾ ರಫಿ, ಡಾ. ಲುಟೆಂಜರ್... ಮತ್ತು ಡಾ. ಎಲ್ಲರ್ ಮೊದಲಾದವರು ಬಳಸಿ...ದಾಗ ಇತರ ಮದ್ದುಗಳಿಗೆ ಹಿಮ್ಮೆಟ್ಟದಿರುವ...

ಪ್ರಸಂಗಗಳಲ್ಲಿಯೂ ತೂಕ ಹೆಚ್ಚಿತು. ಮಕ್ಕಳ ಅಳು ಮೋರೆ ಕಾಣದಾಯಿತು. ಅವರ ಆಲಸ್ಯ ಪಲಾಯನ ಮಾಡಿತು.

ವಿಜ್ಞಾನಿ, ಔಷಧಜ್ಞ, ಡಾ. ಆರ್ಡೈರ್ ಫ್ರೆಂಚ್ ಸೈನಿಕ ಆಸ್ಪತ್ರೆಯಲ್ಲಿ ರಾಜಶಾಹೀ ರಸವನ್ನು ಉಪಯೋಗಿಸಿದರು. ಉಳಿದ ವಿಜ್ಞಾನಿಗಳು ವರದಿ ಮಾಡಿದ ಗುಣಗಳೆಲ್ಲವೂ ರಾಜಶಾಹೀ ರಸದಲ್ಲಿರುವುದಾಗಿ ಅವರು ಅನುಭವದಿಂದ ಮನಗಂಡರು. "ರಾಜಶಾಹೀ ರಸದಲ್ಲಿರುವ ಜೀವಸತ್ವಗಳ ಸಾವಿರಪಟ್ಟು ಚುಚ್ಚುಮದ್ದಿತ್ತರೂ ಅದರ ಪರಮೋತ್ಕೃಷ್ಟ ಪ್ರತಿಕ್ರಿಯೆ ಕಂಡುಬರಲಿಲ್ಲ" ವೆಂದು ಅವರು ಸುಯೋಗ್ಯ ಅಧ್ಯಯನದ ಬಳಿಕ ಹೇಳಿದ್ದಾರೆ. ವಿಟಮಿನ್ ಬಿ. ೧೨ ರ ಚಿಕಿತ್ಸೆಯಿಂದ ಗುಣ ಹೊಂದದ ಮುದುಕರು ಈ ರಸದಿಂದ ಆರೋಗ್ಯ ಲಾಭವನ್ನು ಪಡೆದುದು ಅವರ ಅನುಭವಕ್ಕೆ ಬಂದ ಕಾರಣ ರಕ್ತದ ಕೆಲವೊಂದು ಅಂಶಗಳು ಪುನರ್ಜನ್ಮ ಹೊಂದಿ ಅದರಿಂದಾಗಿ ಸೂಕ್ಷ್ಮ ಸ್ನಾಯುಗಳು ಒಳಿತಾಗಿ ಕೆಲಸ ಮಾಡುವುದೆಂದೂ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುವುದೆಂದೂ ವೈದ್ಯರ ತಜ್ಞ ಮಂಡಲಗಳು ಒಪ್ಪಿವೆ.

ರಾಜಶಾಹೀ ರಸದ ನಿರ್ಮಾಣ ಕೂಡ ಅತ್ಯಂತ ಸೋಜಿಗದ ಕತೆ. ಕೆಲಸಗಾರ ಹುಳದ ನೆತ್ತಿಯಲ್ಲಿರುವ ಗ್ರಂಥಿಗಳು ದ್ರವಿಸುವ ರಸ ಅದು. ಕ್ರಿಮಿ ಅವಸ್ಥೆಯಲ್ಲಿರುವಾಗ ರಾಣಿಗೆ ಐದು ದಿನಗಳ ಕಾಲ ವಿಪುಲವಾಗಿ ಈ ರಸ ಉಣಿಸಲ್ಪಡುವುದರಿಂದ ಆಕೆ ರಾಣಿಯಾಗಿ ಹೊರಬೀಳುವಳು.

ಈ ರಸದ ಅನುಪಮ ಖ್ಯಾತಿಯನ್ನು ತಮ್ಮ ಲಾಭಕ್ಕೆ ಬಳಸಿಕೊಂಡವರೂ ಇಲ್ಲದಿಲ್ಲ. 'ರಾಜ-ಶಾಹೀ ರಸದ ಪವಾಡ'ವೆಂಬ ಹೊತ್ತಿಗೆಯ ೧೫,೦೦೦ ಪ್ರತಿಗಳು ಕೆಲವೇ ವಾರಗಳಲ್ಲಿ ಫ್ರಾನ್ಸಿನಲ್ಲಿ ಮಾರಾಟವಾದವು. ರಾಯಲ್ ಜೆಲ್ಲಿಯ ಪೌಡರುಗಳು, ಕ್ರೀಮುಗಳು ಫ್ರೆಂಚ್ ಮಾರುಕಟ್ಟೆಗೆ ಬಂದವು. ಇವು ಕೇವಲ ಮೋಸದ ವಸ್ತುಗಳೆಂದು ಸಿದ್ಧವಾಗಿ ಅವುಗಳ ತಯಾರಕರಿಗೆ ಶಿಕ್ಷೆ ವಿಧಿಸಲ್ಪಟ್ಟಿತೆನ್ನಿ. ರಾಜ-ಶಾಹೀ ರಸಕ್ಕೆ ವಿದೇಶದಲ್ಲಿ ಎಷ್ಟು ಪ್ರಚಾರವಿದೆ ಯೆಂಬುದಕ್ಕೆ ಈ ವಿನೋದ ಕತೆಯನ್ನು ಓದಿ:

ಒಬ್ಬ ನಾವಿಕ ಅಮೇರಿಕದಿಂದ ಹಿಂದಿರುಗುವಾಗ ಕೆಲವು ಭರಣಿ ರಾಜಶಾಹೀ ರಸವನ್ನು ತನ್ನ ಮುದಿ ತಾಯಿತಂದೆಗಳಿಗಾಗಿ ತಂದ. ಅದರ ಗುಣವನ್ನು ಕೊಂಡಾಡಿ ತಾಯಿ ಅದನ್ನು ಸೇವಿಸುವಂತೆ ಮನವೊಲಿಸಿದ. ಆತ ಸಮುದ್ರಯಾನಕ್ಕೆ ಆ ಬಳಿಕ ಹೊರಟ. ನಾವಿಕ ಸುಮಾರು ಒಂದು ವರ್ಷದ ಬಳಿಕ ಮನೆಗೆ ಹಿಂದಿರುಗಿದಾಗ ಕೆಂದುಟಿಯ ಸುಂದರ ತರುಣಿಯೋರ್ವಳು ಅವನ ಕತ್ತನ್ನು ತೋಳಲ್ಲಿ ಬಳಸಿ ಹಾರ್ದಿಕವಾದ ಸ್ವಾಗತವಿತ್ತಳು. ನಾವಿಕ ಅಚ್ಚರಿಗೊಂಡು ಆಕೆಯ ಪರಿಚಯ ಕೇಳಿದ. "ನಾ ನಿನ್ನ ತಾಯಲ್ಲವೆ? ನೀ ಕೊಟ್ಟ ರಸ ನನ್ನ ಮೇಲೆ ಅದ್ಭುತ ಪರಿಣಾಮ ಬೀರಿತು ನೋಡು" ಎಂದಳಾಕೆ. ತೊಟ್ಟಿಲಲ್ಲಿ ಆಡುತ್ತಿರುವ ಮಗುವನ್ನು ನೋಡಿ ನಾವಿಕ ತಾಯಿಯನ್ನು ಮೂದಲಿಸಿದ: "ನನಗೆ ತಮ್ಮನಾದ ಸುದ್ದಿಯನ್ನೇಕೆ ಹೇಳಲಿಲ್ಲ?" ತಾಯಿಯ ಉತ್ತರ ನಿಮ್ಮನ್ನು ದಂಗುಬಡಿಸೀತು, ಜೋಕೆ: "ಮಗನೆ, ಅದು ನಿನ್ನ ತಂದೆ. ಆತ ಅದನ್ನು ಪ್ರಮಾಣ ಮೀರಿ ತಿಂದ."



ಅಪಾಯವೂ ಆನಂದವೂ ಒಂದೇ ದೇಟಿನ ಕಾಯಿಗಳು. —ಜಾನ್ ಲಿಲಿ

ಜೀವ ಉಂಟಾಯಿತೋ ಅಪಾಯವೂ ಉಂಟಾಯಿತು. —ಎಮರ್ಸನ್

ಅಳ್ಳೆದೆಯವನು ಅಪಾಯಕ್ಕೆ ಮೊದಲೇ ಅಂಜುತ್ತಾನೆ, ಹೇಡಿ ಅಪಾಯ ಬಂದಾಗ ಅಂಜುತ್ತಾನೆ, ಧೀರ ಅಪಾಯ ಕಳೆದ ಮೇಲೆ ಅಂಜುತ್ತಾನೆ.

—ಜೆ. ಪಿ. ರಿಚ್‌ಟರ್

# ಕೈಮಡಚಿ ಕಾಲು ನೀಡಿದರು!

ದಿಲ್ಲಿಯಲ್ಲಿ ಈಗಲೂ ಬಾಬಾ ಬಲೀರಾಮರ ಸಮಾಧಿ ಇದೆ. ಬಲೀರಾಮರು ಶಾಹಜಹಾನನ ಆಸ್ಥಾನದಲ್ಲಿ ಮೂವತ್ತು ಕುದುರೆಗಳ ಮನಸಬದಾರರಾಗಿದ್ದರು. ಬಲೀರಾಮರು ರಾಜಸೇವೆಯನ್ನು ತೊರೆದು ಸಂತರಾದ ಕಥೆ ಬಳ್ಳೀ ಸ್ವಾರಸ್ಯವಾಗಿದೆ. ಮನಸಬದಾರರಾಗಿದ್ದರೂ ದೊಡ್ಡ ಸಂಸ್ಕೃತ ವಿದ್ವಾಂಸರೂ ಸಾತ್ವಿಕರೂ ಆಗಿದ್ದ ಅವರು ಶಾಹಜಹಾನನ ಜೇಷ್ಠಪುತ್ರ ದಾರಾ ಶಿಕೋಹನಿಗೆ ಸಂಸ್ಕೃತ ಪಾಠ ಹೇಳುತ್ತ ಸಂಸ್ಕೃತದಿಂದ ಉಪನಿಷತ್ತುಗಳನ್ನು ಪರ್ಶಿಯನ್ ಭಾಷೆಗೆ ಅನುವಾದಿಸಲು ನೆರವಾಗುತ್ತಿದ್ದರು. ಹೀಗೆ ರಾಜಪುತ್ರನ ಪ್ರೀತಿಪಾತ್ರರಾಗಿದ್ದ ಅವರಿಗೆ ಆಸ್ಥಾನದಲ್ಲಿ ತುಂಬ ಗೌರವವಿತ್ತು. ಅವರ ದರ್ಜೆಯ ಇತರ ಮನಸಬದಾರರು ಆಸ್ಥಾನದಲ್ಲಿ ನಿಂತೇ ಇರಬೇಕೆಂಬ ನಿಯಮವಿದ್ದರೂ ಬಲೀರಾಮರಿಗೆ ಮಾತ್ರ ಕುಳಿತಿರಲು ಅನುಮತಿಯಿತ್ತು.

ಇಷ್ಟಿದ್ದರೂ ಬಲೀರಾಮರು ರಾಜಸೇವೆಯನ್ನು ತ್ಯಜಿಸಿ ಬೈರಾಗಿಯಾದರು. ಇದಕ್ಕೆ ನಿಮಿತ್ತವಾದದ್ದು ಒಂದು ಕಟಜೀರಿಗೆ ಹುಳ. ಶಾಹಜಹಾನನ ಅಂತರಂಗ ಸಭೆಯಲ್ಲೊಂದು ದಿನ ಇತರ ಸರದಾರರೊಡನೆ ಶಿಸ್ತಿನಲ್ಲಿ ನಿಂತಿದ್ದಾಗ ಬಲೀರಾಮರ ಬೆನ್ನಿಗೆ ಈ ಕಡಜೀರಿಗೆ ಹುಳ ಬಂದು ಕಡಿಯಿತು. ಬಾದಶಾಹನ ಮುಂದೆ ತುರಿಸಿಕೊಳ್ಳುವುದು ನಿಷೇಧಿಸಲ್ಪಟ್ಟಿತ್ತು. ಆದ್ದರಿಂದ ಅವರು ಬಲು ಕಷ್ಟದಿಂದ ಅದರ ನೋವು ತುರಿಕೆಗಳನ್ನು ನುಂಗಿಕೊಂಡು ಬಿಮ್ಮಗೆ ನಿಲ್ಲಬೇಕಾಯಿತು.

ಆಸ್ಥಾನದಿಂದ ಮರಳುವಾಗ ಪರಸೇವೆಯಿಂದ ತಮಗಾದ ಈ ಅವಸ್ಥೆಯಿಂದ ಬಲೀರಾಮರಿಗೆ ಅತ್ಯಂತ ಆತ್ಮಗ್ಲಾನಿಯಾಯಿತು. ತುರಿಸಿಕೊಳ್ಳಲಿಕ್ಕೂ ಸ್ವಾತಂತ್ರ್ಯವಿಲ್ಲ! ಅವರು ಮನೆಗೆ ಹೋದವರೇ ತಮ್ಮ ಹುದ್ದೆಯನ್ನು ತ್ಯಜಿಸಿ ಸಾಧುವಾದರು. ಜೀವಮಾನವೆಲ್ಲ ಅವರು ಪರಮಾತ್ಮಭಕ್ತಿಯ ಉಪದೇಶದೊಡನೆ ನರಸೇವೆಯನ್ನು ತಿರಸ್ಕರಿಸಿ ಸ್ವತಂತ್ರ ಉದ್ಯೋಗ ಮಾಡಬೇಕೆಂದು ಉಪದೇಶಿಸಿದರು. ತಮ್ಮ ವಂಶದಲ್ಲಿ ಯಾರೂ ನೌಕರಿಗೆ ಕೈಯೊಡ್ಡಕೂಡದೆಂದು ಶಾಸ್ತಿ ಮಾಡಿದರು.

ಒಮ್ಮೆಲೇ ತನ್ನನ್ನು ಬಲೀರಾಮರು ತ್ಯಜಿಸಿ ಹೋದದ್ದರಿಂದ ವ್ಯಥೆಗೊಂಡ ದಾರಾ ಬಹುಕಾಲದ ನಂತರ ದೇಶಾಟನೆ ಮಾಡುತ್ತ ಬಲೀರಾಮರು ದಿಲ್ಲಿಗೆ ಬಂದಿದ್ದ ವಾರ್ತೆ ಕೇಳಿ ಅವರನ್ನುನೋಡಲು ಬಂದ. ಯಮುನಾತೀರದಲ್ಲಿ ಒಂದೆಡೆ ಕಾಲುನೀಡಿ ಆರಾಮವಾಗಿ ಒರಗಿದ್ದರು ಬಲೀರಾಮರು. ತನ್ನ ಹಿಂದಿನ ಯಜಮಾನ ದಾರಾ ಬಂದದ್ದನ್ನು ಕಂಡರೂ ಅವರು ಕೈಕಟ್ಟಿ ಎದ್ದು ನಿಲ್ಲುವುದಂತಿರಲಿ, ಚಾಚಿದ್ದ ಕಾಲನ್ನು ಮಡಚಲೂ ಇಲ್ಲ.

ಚಕಿತನಾದ ದಾರಾ ಕೇಳಿದ: "ಬಲೀರಾಮರು ಎಂದಿನಿಂದ ಕಾಲುನೀಡಲು ಕಲಿತರು?"

ಒರಗಿದ್ದಲ್ಲಿಂದಲೇ ಬಲೀರಾಮರು ಉತ್ತರಿಸಿದರು: "ಕೈ ನೀಡುವುದನ್ನು ಬಿಟ್ಟೆಂದಿನಿಂದ!"

*



# ಇಂದ್ರಜಾಲ ಭವನ: ರಾಕ್‌ಫೆಲರ್ ಕೇಂದ್ರ

ಅನುವಾದ: ಜಿ. ಎಸ್. ಬಲರಾಮಗುಪ್ತ

ಇಂದ್ರಜಾಲಿಕ ಭವನವೆಂದೊಡನೆ ಅದೇನೊ ಕೇವಲ ಕಲ್ಪನೆಯ ವಸ್ತುವಿರಬಹುದೆಂದು ಭಾವಿಸುವ ಅಗತ್ಯವಿಲ್ಲ. ಅಂಥ ಅದ್ಭುತ ರಮ್ಯವಾದ ಕಟ್ಟಡ ಈಗಲೂ ಇದೆ. ಯಾರು ಬೇಕಾದರೂ ಹೋಗಿ ನೋಡಿಕೊಂಡು ಬರಲು ಅಡ್ಡಿಯಿಲ್ಲ.

೧೯೩೧ ರಲ್ಲಿ ಆ ಬೃಹದ್ಭವನದ ಉದ್ಘಾಟನೆ ನಡೆಯಿತು. ಅದರಲ್ಲಿ ಎಪ್ಪತ್ತು ಅಂತಸ್ತುಗಳಿವೆ. ಇದರಿಂದಲೇ ಅದರ ಎತ್ತರವನ್ನು ಊಹಿಸಬಹುದಾಗಿದೆ. ಆ ಭವನದ ನಿರ್ಮಿತಿಯ ಶ್ರೇಯಸ್ಸು ಅಮೇರಿಕಾದ ಅತ್ಯಂತ ಧನಿಕನಾದ ರಾಕ್‌ಫೆಲರ್‌ಗೆ ಸಲ್ಲತಕ್ಕದ್ದು.

ಹಲವಾರು ವರ್ಷಗಳಿಂದ ರಾಕ್‌ಫೆಲರ್ ಒಂದು ಸ್ವಪ್ನವನ್ನು ಕಾಣುತ್ತ ಬಂದಿದ್ದ. ಪ್ರಪಂಚದ ಎಲ್ಲ ಸುಖ-ಸೌಂದರ್ಯಗಳನ್ನೊಳಗೊಂಡ ಒಂದು ಭವ್ಯ ಭವನವನ್ನು ನಿರ್ಮಿಸಬೇಕೆಂಬುದೇ ಆ ಕನಸು. ಕನಸು ನನಸಾಯಿತು.

ಭವನದ ಉದ್ಘಾಟನೆಯ ಸಮಾರಂಭದಂದು ದಿವಂಗತ ರಾಕ್‌ಫೆಲರ್‌ರವರ ಪುತ್ರರಾದ ನೆಲ್‌ಸನ್ ರಾಕ್‌ಫೆಲರ್ ನುಡಿದರು: "ನಮ್ಮ ತಂದೆಯವರು 'ರಾಕ್‌ಫೆಲರ್' ಕೇಂದ್ರವನ್ನು ನಿರ್ಮಿಸಬೇಕೆಂದು ಯೋಚಿಸಿದಾಗ ಅವರ ಮನಸ್ಸಿನಲ್ಲಿದ್ದುದು ಕೇವಲ ಕಲ್ಲುಇಟ್ಟಿಗೆಗಳ ವಿಶಾಲ ಭವನದ ಚಿತ್ರವಲ್ಲ. ಈ ಕಲ್ಲು ಇಟ್ಟಿಗೆಗಳ ಸೀಮೆಯೊಳಗೆ ಒಂದು 'ಮಾಯಾದೇಶ'ವನ್ನೇ ಸೃಜಿಸಬೇಕೆಂದು ಬಯಸಿದ್ದರು. ಅದನ್ನು ಕಂಡವರು ಅದರಿಂದ ಸ್ವಲ್ಪ ಜ್ಞಾನವನ್ನು ಗಳಿಸುವುದಲ್ಲದೆ ಅವರ (ನಮ್ಮ ತಂದೆಯವರ) ನಿರ್ಮಾಣಶಕ್ತಿಯನ್ನು ಕಂಡು ಹೆಮ್ಮೆಯಿಂದ ತಲೆಯೆತ್ತಲೆಂಬುದೇ ಅವರ ಆಶಯವಾಗಿತ್ತು"

ಜಾನ್ ಡಿ. ರಾಕ್‌ಫೆಲರ್‌ರವರ ಯೋಜನೆಯ ಮೇರೆಗೆ ನಿರ್ಮಿತವಾದ ಈ ಗಗನಚುಂಬಿ ಭವನದ ನೇಕಡಾ ೮೦ರಷ್ಟು ಸ್ಥಳವು ಕೊಲಂಬಿಯಾ ವಿಶ್ವವಿದ್ಯಾಲಯಕ್ಕೆ ಸೇರಿದೆ. ಇದರಿಂದಾಗಿ ಆ ವಿಶ್ವವಿದ್ಯಾಲಯಕ್ಕೆ ವರ್ಷಂಪ್ರತಿ ೩೫,೦೦,೦೦೦ ಡಾಲರ್ (ರೂ. ೧.೫೦ ಕೋಟಿ) ಹಣ ಕಾಣಿಕೆಯಾಗಿ ದೊರೆಯುತ್ತದೆ. ಕ್ರಿ. ಶ. ೨೦೧೫ ರಲ್ಲಿ ಈ ಭವನ ಮತ್ತು ಅದರ ಎಲ್ಲ ಸಂಪತ್ತೂ ಕೊಲಂಬಿಯಾಕ್ಕೆ ಸೇರಿಬಿಡುವುದು.



ನ್ಯೂಯಾರ್ಕ್ ನಗರದ ಮಧ್ಯೆ 'ಲೋವರ್ ಪ್ಲಾಜಾ' ಎಂಬ ಸ್ಥಳದಲ್ಲಿ ಈ ಕಟ್ಟಡವನ್ನು ಕಟ್ಟಲಾಗಿದೆ. ನಗರದ ಸುತ್ತಮುತ್ತಲ ಪ್ರದೇಶಗಳಲ್ಲಿ ಗಜಿಬಿಜಿಯೇ ತುಂಬಿದ್ದರೂ ಈ ಭವನದ ತೋಟದ ಮಖಮಲ್ಲಿನಂತಹ ಹುಲ್ಲು ಮೇಲೆ ಬೆಳದಿಂಗಳಿನಷ್ಟು ಬೆಳ್ಳಗಿರುವ ಕಾರಂಜಿಯ ನೀರು ಆಟವಾಡುತ್ತಿರುತ್ತದೆ. ತೋಟದ ಪುಟ್ಟ ಹಾದಿಗಳ!.ಗುಂಟ ಬಣ್ಣ ಬಣ್ಣದ ಹೂಗಳ ಮುಗುಳ್ನಗೆ ಚಿಮ್ಮುತ್ತಿರುತ್ತದೆ. ಈ ಕೇಂದ್ರದ ಒಂದು ಕಡೆಗೆ 'ಬ್ರಿಟಿಷ್ ಸಾಮ್ರಾಜ್ಯಭವನ'ವಿ-ದ್ದರೆ ಮತ್ತೊಂದೆಡೆಗೆ 'ಫ್ರೆಂಚ್ ಭವನ'ವಿದೆ. ಮಧ್ಯದಲ್ಲಿ 'ಇಂಗ್ಲಿಷ್ ಚಾನೆಲ್'ನ ಹಾಗೆಯೇ ರಚಿಸಲಾದ ಒಂದು ಕೃತ್ರಿಮ ಸರಿತೆ ಹರಿಯುತ್ತದೆ. ಅದರ ದಡಗಳ ತುಂಬ ಹೂಗಳೇ ಹೂಗಳು. ಉದ್ಯಾನದ ಮಧ್ಯಭಾಗಕ್ಕೆ ಸರಿಯಾಗಿ ಒಂದು ಸುಂದರವಾದ ಕಾರಂಜಿ ಇದೆ. ಅದನ್ನು "ಪ್ರಾಮೆಥ್ಯೂಜ್" ಎನ್ನುತ್ತಾರೆ. ಆ ಕಾರಂಜಿಯಿಂದ ಸ್ವಲ್ಪ ಮುಂದೆ ನಡೆದರೆ ಪಾತಾಳದಂತಹ ಒಂದು ಸ್ಥಳ ಸಿಗುತ್ತದೆ. ಅಲ್ಲಿ ವರ್ಷದ ಹನ್ನೆರಡು ಮಾಸಗಳಲ್ಲೂ ಮಂಜುಗಡ್ಡೆಗಳು ತುಂಬಿರುತ್ತವೆ. ಮರಗಳ ಬೆತ್ತಲೆಯ ರೆಂಬೆಗಳ ಮೇಲೆ ಹತ್ತಿಯಂತಹ ಹಿಮ! ಕೆಳಗೆಲ್ಲ ಸ್ಕೇಟಿಂಗ್‌ಗೆ ಬೇಕಾಗುವ ಸಲಕರಣೆಗಳ ಜೋಡಣೆ! ನೀವಲ್ಲಿಗೆ ಹೋದರೆ ನೀವಿರುವ ಕಾಲ ಅದಾವ ತಿಂಗಳೆಂಬುದರ ಪರಿವೆಯೇ ನಿಮಗಿರುವುದಿಲ್ಲ.

ಆಗಾಗ ಈ ಭವನದಲ್ಲಿ ರಾಷ್ಟ್ರೀಯ ಹಬ್ಬಗಳನ್ನೂ ಆಚರಿಸುವುದುಂಟು. ಮಹಾಯುದ್ಧದಲ್ಲಿ ಪ್ಯಾರಿಸ್‌ಗೆ ದೊರೆತ ಸ್ವಾತಂತ್ರ್ಯವನ್ನು ಕಂಡು ಹರ್ಷಿಸಲು ಇಲ್ಲೊಂದು ಸಮಾರಂಭವನ್ನು ಅತ್ಯಂತ ವಿಜೃಂಭಣೆಯಿಂದ ನಡೆಸಲಾಯಿತು. ಜಾನಪದ ನೃತ್ಯಗಳ ನಡುವೆ ಫ್ರಾನ್ಸಿನ ರಾಷ್ಟ್ರಗೀತೆಯಾದ 'ಲಾ-ಮಾರ್ಸಾಯೀ'ಯನ್ನೂ ಹಾ-ಡಲಾಯಿತು. ನೋಡುವವರು ಉಸಿರು ಹಿಡಿದು ಹಾಗೆಯೇ ಅಚ್ಚರಿಯಿಂದ ನೋಡುತ್ತ ನಿಂತುಬಿಟ್ಟಿದ್ದರು.

ಈ ಐಂದ್ರಜಾಲಿಕ ಭವನದ ಸಿಂಗಾರವೂ

ವೈಶಿಷ್ಟ್ಯಪೂರ್ಣವಾದುದು. ಸಮುದ್ರ ಸಿಂಹಗಳು ಅಲ್ಲಿನ ಕೆರೆಗಳಲ್ಲಿ ನಿಶ್ಚಿಂತೆಯಿಂದ ಇದ್ದುಬಿಡುತ್ತವೆ. ಕಡವೆಗಳು ಅಲ್ಲಿಂದಿಲ್ಲಿ ಸ್ವಚ್ಛಂದವಾಗಿ ಸಂಚರಿಸುತ್ತವೆ.

ಈ ಕೇಂದ್ರದಲ್ಲಿ ಕೆಲಸ ಮಾಡುವವರನ್ನು ಸುಖವಾಗಿಡುವ ಸಲುವಾಗಿ 'ಈಸ್ಟರ್ನ್ ಏರ್ ವೈನ್ಸ್' ಭವನದಲ್ಲಿ ಬಗೆಬಗೆಯ ಆಟಗಳ ವ್ಯವಸ್ಥೆಯೂ ಇದೆ. ಅನೇಕ ಕ್ಲಬ್ಬುಗಳಿವೆ. ಈ ನಡುವೆ ಅಲ್ಲಿ ಪುಷ್ಪಪ್ರದರ್ಶನಗಳೂ ನಡೆಯುತ್ತವೆ.

'ಕ್ರಿಸ್‌ಮಸ್ ಮರ'ವನ್ನು ನಡುವ ದಿನವೇ ಅಲ್ಲಿನ ಜನರ ಅತ್ಯಂತ ಆಹ್ಲಾದಮಯವಾದ ದಿನ. ಇದು ಸುಮಾರು ೭೦-೮೦ ಅಡಿಗಳಷ್ಟು ಎತ್ತರವಿರುತ್ತದೆ. ಅದನ್ನು ವಿದ್ಯುದ್ಬುರುಡೆಗಳಿಂದ ಅಲಂಕರಿಸುತ್ತಾರೆ. ಆಗಸ್ಟ್ ತಿಂಗಳಲ್ಲಿಯೇ ಉಪಯುಕ್ತವಾದ ಇಂತಹ ಮರವೊಂದನ್ನು ಹುಡುಕಲು ಪ್ರಾರಂಭಿಸುತ್ತಾರೆ. ಅದನ್ನು ಹುಡುಕಲೆಂದೇ ನೇಮಿಸಲ್ಪಟ್ಟ ಒಂದು ವಿಶೇಷ ಸಮಿತಿಯಿರುತ್ತದೆ. ಹತ್ತಾರು ಮಂದಿ ವೃಕ್ಷ ವಿಶೇಷಜ್ಞರು ಪತ್ರಗಳ ಮೂಲಕ ಇದರ ಬಗ್ಗೆ ಸಲಹೆಗಳನ್ನು ಕೊಡುತ್ತಾರೆ. ಅನೇಕ ವೇಳೆ ಈ ಕ್ರಿಸ್‌ಮಸ್ ತರುವನ್ನು ಶೃಂಗರಿಸಲು ಪರದೇಶಗಳಿಂದಲೂ ಹೂಗಳನ್ನು ತರಿಸಿರುವುದುಂಟು. ೧೯೪೫ ರಲ್ಲಿ ಈ ಕೇಂದ್ರವು ಇದೇ ವಿಷಯದಲ್ಲಿ ತನ್ನ ಪುಷ್ಪವಿಶೇಷಜ್ಞರಾದ ಮಾರಿಯಸ್‌ರವರನ್ನು ಹಾಲೆಂಡಿಗೆ ಕಳಿಸಿತ್ತು.

ಈ ವಿಚಿತ್ರವಾದ ಭವನದಲ್ಲಿ ಸ್ವಂತ ಪೋಲೀಸರಿದ್ದಾರೆ, ಬೆಂಕಿಯಾರಿಸುವ ಮಂದಿಯಿದ್ದಾರೆ; ಔಷಧಾಲಯ, ಅಂಚೆಕಛೇರಿ-ಎಲ್ಲವೂ ಭವನಕ್ಕೆ ಸಂಬಂಧಿಸಿದುವೇ. ಅಲ್ಲಿನ ಬಹು ದೊಡ್ಡ ಕೆಲಸವೆಂದರೆ ೨೦,೦೦೦ ಕೋಣೆ, ಕೈಸಾಲೆ ಮೊದಲಾದುವನ್ನು ಕೂಡಿಸುವುದು. ಪ್ರತಿ ೪೮ ಗಂಟೆಗಳಿಗೊಮ್ಮೆ ಮಾತ್ರ ಇಲ್ಲಿ ಗುಡಿಸುವ ಕೆಲಸ ನಡೆಯುತ್ತದೆ. ಅಷ್ಟು ತಡ ಮಾಡುವುದರಿಂದ ಯಾವುವಾದರೂ ವಸ್ತು ಕಳೆದು ಹೋದಲ್ಲಿ ಅದು ಮತ್ತೆ ಸಿಗುವ ಸಂಭವವಿದೆ. ಹೆಮ್ಮೆ ಇಲ್ಲಿ ಒಬ್ಬ ರತ್ನಪಡಿ ವ್ಯಾಪಾರಿಯ ಬಹುಮೂಲ್ಯ ವಜ್ರಗಳು ದೊರೆತವು. ಮತ್ತೊಮ್ಮೆ ಒಬ್ಬ ವಿದೇಶೀ ರಾಜದೂತನ ನಕಲಿ ಹಲ್ಲು ಸಿಕ್ಕಿತು.

ನಾಲ್ಕು ಜನ ಕಮ್ಮಾರರು ಅಲ್ಲಿನ ಬೀಗಗಳನ್ನು ತೆರೆಯುವುದರಲ್ಲಿ ತೊಡಗಿರುತ್ತಾರೆ. ಸ್ವತಃ ಮುಚ್ಚಿ ತೆರೆಯುವ ಬಾಗಿಲುಗಳನ್ನು ನೋಡಿಕೊಳ್ಳಲೆಂದೇ ಒಬ್ಬ ಇಂಜನಿಯರ್ ಇದ್ದಾನೆ. ಆಗಾಗ ಬಲ್ಬುಗಳನ್ನು ಬದಲಾಯಿಸಲು ನಾಲ್ಕೈದು ಮಂದಿ ನಿಯುಕ್ತರಾಗಿದ್ದಾರೆ. ಕೆಳಗೆ ಬಿದ್ದ, ಅರ್ಧ ಸುಟ್ಟ ಸಿಗರೇಟುಗಳನ್ನು ತೆಗೆಯಲೆಂದೇ ಆರು ನೌಕರರಿದ್ದಾರೆ.

ಇಲ್ಲಿ ನಿಯುಕ್ತವಾಗಿರುವ ಪಹರೆಯವರು ಮತ್ತು ಗೂಢಚಾರರು ಇಪ್ಪತ್ನಾಲ್ಕು ಗಂಟೆಯೂ ಜಾಗರೂಕವಾಗಿರಬೇಕಾಗುತ್ತದೆ. ಪ್ರತಿಯೊಂದು ಕೋಣೆಯಲ್ಲಿಯೂ ಬೆಲೆಬಾಳುವ ವಸ್ತುಗಳಿರುತ್ತವೆ. ಆದ್ದರಿಂದ ಅಲ್ಲಿನ ಪಹರೆಯ ರೀತಿಯೂ ಅತ್ಯಂತ ವೈಜ್ಞಾನಿಕವಾಗಿರುತ್ತದೆ. ಕದಿಯಬೇಕೆಂಬ ಆಸೆಯಿಂದ ಯಾರಾದರೂ ಒಂದು ಬಾಗಿಲಲ್ಲಿ ನುಗ್ಗಿದರೆ ಅದು ಹಾಗೆಯೇ ಮುಚ್ಚಿಕೊಂಡುಬಿಡುತ್ತದೆ. ಅಂತಹ ವೇಳೆ ಕಳ್ಳನಿಗೆ ಉಳಿಯುವುದು ಎರಡೇ ಮಾರ್ಗ—ಎಪ್ಪತ್ತು ಅಂತಸ್ತಿನ ಭವನವನ್ನು ಮೆಟ್ಟಲು ಮೆಟ್ಟಲಾಗಿ ಇಳಿದು ಬರುವುದು, ಅಥವಾ ಅಲ್ಲಿಯೇ ಇರುವ ಟೆಲಿಫೋನಿನಲ್ಲಿ ಮಾತನಾಡಿ ತನ್ನನ್ನು ತಾನೇ ಬಂಧನಕ್ಕೊಪ್ಪಿಸಿಕೊಳ್ಳುವುದು. ಅಷ್ಟೂ ಮೆಟ್ಟಿಲುಗಳನ್ನು ಇಳಿದು ಬರುವ ಸಾಹಸವನ್ನು ಯಾರಾದರೂ ಮಾಡಬಹುದು. ಆದರೆ ಆ ಸಮಯಕ್ಕೆ ಸರಿಯಾಗಿ ಗುಪ್ತ ರೀತಿಯಲ್ಲಿ ನಿಯೋಜಿಸಲಾದ ವಿದ್ಯುತ್ ಗಂಟೆಗಳು ಹೊಡೆಯಹತ್ತುತ್ತವೆ. ಕೆಳಗಿರುವ ಕಾವಲುಗಾರರು ತಕ್ಷಣ ಬಂದು ಅವನನ್ನು ಹಿಡಿದುಬಿಡುತ್ತಾರೆ.

ಕಟ್ಟಡದ ಮಧ್ಯಭಾಗಕ್ಕೆ ಸರಿಯಾಗಿ ಒಂದು

ರಕ್ಷಣಾ ವಿಭಾಗವಿದೆ. ಅದು ಭವನದ ಸಮಸ್ತ ರಕ್ಷಣೆಯನ್ನು ಮಾಡುತ್ತದೆ. ಎಲ್ಲ ವ್ಯವಸ್ಥಾ ಕಾರ್ಯಗಳು ಹೆಚ್ಚಾಗಿ ಟೆಲಿಫೋನುಗಳ ಮೂಲಕವೇ ನಡೆದುಹೋಗುತ್ತವೆ.

ಈ ಕಟ್ಟಡದ ನಿರ್ಮಾಣವಾಗುತ್ತಿದ್ದಾಗಲೇ ಒಂದು ಮನೋರಂಜಕವಾದ ಘಟನೆ ನಡೆಯಿತು. ನಿರ್ಮಾಣವಾಗುತ್ತಲಿದ್ದ ಕಟ್ಟಡದ ಸುತ್ತಲೂ ಒಂದು ದೊಡ್ಡ ಸುತ್ತುಗೋಡೆಯನ್ನು ನಿರ್ಮಿಸಲಾಗಿತ್ತು. ಒಂದು ದಿನ ರಾಕ್‌ಫೆಲರ್‌ರವರೇ ಗೋಡೆಗಳ ಸುತ್ತ ತಿರುಗಾಡುತ್ತಿದ್ದರು. ಸನಿಹದಲ್ಲೇ ಒಂದು ಇಟ್ಟಿಗೆಗಳ ರಾಶಿಯಿತ್ತು. ಅದರ ಮೇಲೆ ನಿಂತು ಅವರು ಒಳಭಾಗವನ್ನು ವೀಕ್ಷಿಸಲು ಯತ್ನಿಸಿದರು. ಸ್ವಲ್ಪ ದೂರದಿಂದ ಆ ಕಟ್ಟಡವು ಹೇಗೆ ಕಾಣಬಹುದೆಂಬುದನ್ನು ತಿಳಿಯುವುದೇ ಅವರ ಉದ್ದೇಶವಾಗಿತ್ತು. ಆದರೆ ಅವರನ್ನು ಅರಿಯದ ಒಬ್ಬ ಕೆಲಸಗಾರ ಹೇಳಿದ, "ಬಾಬೂಸಾಬ, ನಡೆಯಿರಿ ಇಲ್ಲಿಂದ. ಬಗ್ಗಿ ಬಗ್ಗಿ ಏನು ನೋಡುತ್ತೀರಿ!" ಪಾಪ, ಬಡ 'ಬಾಬೂಸಾಹೇಬ'ರು ತಮ್ಮ ದಾರಿ ಹಿಡಿದರು. ಆದರೆ ಒಳಗಿನ ಭವನವು ಹೊರಗಿನ ದಾರಿಗರಿಗೆ ಕಾಣುವಂತೆ ಗೋಡೆಯಲ್ಲಿ ಕಿಟಕಿಗಳನ್ನಿಡಬೇಕೆಂದು ರಾಕ್‌ಫೆಲರ್ ಆಜ್ಞೆಮಾಡಿದರು. ಭವನವನ್ನು ನೋಡಬೇಕೆಂದು ಅಲ್ಲಿಗೆ ಬಂದವರಿಗೆ ಪ್ರವೇಶಪತ್ರಗಳನ್ನು ನೀಡಲು ಒಂದು ಕಚೇರಿಯನ್ನೇ ತೆರೆಯಲಾಯಿತು. ಒಮ್ಮೆ ರಾಕ್‌ಫೆಲರ್‌ರವರೇ ಪ್ರವೇಶಪತ್ರವನ್ನು ಪಡೆದು ಒಳಬಂದರು.

ಬಿಸಿಲುಗಾಲದಲ್ಲಿಯೂ ಈ ಭವನದ ಹವೆ ತಂಪಾಗಿಯೇ ಇರುತ್ತದೆ. ಸೂರ್ಯನ ಕಿರಣಗಳು ಗೋಡೆಗಳ ಮತ್ತು ಕಿಟಕಿಗಳ ಗಾಜುಗಳ ಮೂಲಕ ಪ್ರತಿಫಲಿತವಾಗಿಯೇ ಒಳಹೋಗುತ್ತವೆ. ಕೆಳಗಿನ ತಾಪಮಾನವು ಹೆಚ್ಚಾದಾಗ ಬೆಚ್ಚಗಿರುವ ಗಾಳಿಯು ಮೇಲೇರುತ್ತದೆ, ಗಾಳಿಯಲ್ಲಿ ಗತಿಯುಂಟಾಗುತ್ತದೆ. ಆದ್ದರಿಂದಲೇ ಕೆಳಗಿರುವ ಹೂಗಳಿಗಿಂತಲೂ ಮೇಲಿರುವ ಹೂಗಳು ಒಂದೆರಡು ವಾರಗಳ ಮುನ್ನವೇ ಚೆನ್ನಾಗಿ ಅರಳಿಬಿಡುತ್ತವೆ.

ವಸ್ತುತಃ 'ರಾಕ್‌ಫೆಲರ್ ಕೇಂದ್ರ'ವು ಒಂದು ಪ್ರೇಕ್ಷಣೀಯ ಭವನವಾಗಿದೆ. ರಾಕ್‌ಫೆಲರ್‌ನ ಉತ್ಕೃಷ್ಟವಾದ ಕಲ್ಪನೆ ಹಾಗೂ ಆಧುನಿಕ ವಿಜ್ಞಾನದ ಅನುಪಮ ಸಂಯೋಗದಿಂದ ನಿರ್ಮಿತವಾದ ಈ ಭವನವು ಇಂದ್ರಜಾಲವಲ್ಲದೆ ಮತ್ತೇನು? *



## ಕಡ ಕೊಡುವವರಿಲ್ಲ

ಒಮ್ಮೆ ಪ್ರಸಿದ್ಧ ಸಾಹಿತಿ ಮಾರ್ಕ್ ಟ್ವೈನರ ಮನೆಗೆ ಅತಿಥಿಗಳೊಬ್ಬರು ಆಗಮಿಸಿದರು. ಟ್ವೈನರ ಕೋಣೆಯಲ್ಲಿ ಹಲವಾರು ಪುಸ್ತಕಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಅದನ್ನು ನೋಡಿದ ಅತಿಥಿಗಳು: "ಇದನ್ನೆಲ್ಲಾ ಒಂದು ಕಪಾಟನಲ್ಲಿ ವ್ಯವಸ್ಥಿತವಾಗಿ ಇಡಬಾರದೆ?" ಎಂದು ಕೇಳಿದರು. ಆದಕ್ಕೆ ಟ್ವೈನರು ನಗುತ್ತಾ "ನೀವು ಹೇಳುವುದೇನೋ ಸರಿ. ಆದರೆ ಕಪಾಟನ್ನು ಮಾತ್ರ ಯಾರೂ ಕಡ ಕೊಡುವುದಿಲ್ಲವಲ್ಲ!" ಎಂದುತ್ತರವಿತ್ತರು. —'ರಾಗ', ಬಲ್ಮಾರಿ

---

'ಗೆಳೆತನ'ವೆಂಬ ಚಿನ್ನಕ್ಕೆ 'ಆಪತ್ಕಾಲ'ವೆಂಬುದೇ ಒರೆಗಲ್ಲು. —ಸುಭಾಷಿತ

ಕಳೆದ 55 ವರ್ಷಗಳಿಂದಲೂ ಜನಾದರಣೆಯನ್ನು ಕಾಯ್ದಿಟ್ಟುಕೊಂಡು, ಏಳಿಗೆಯ ಪಥದಲ್ಲಿ-ದಿನದಿಂದ ದಿನಕ್ಕೆ ಮುನ್ನಡೆಯುತ್ತಿರುವ ದಕ್ಷಿಣ ಕನ್ನಡದ, ಏಕೆ? ದಕ್ಷಿಣ ಭಾರತದ ಮೊದಲನೇ ಸಂಸ್ಥೆ....

ಮತ್ತದರ ಬೃಹತ್ ಉದ್ಯಮದ ಉತ್ಪಾದನೆಗಳು

P.V.S. BEEDIES PRIVATE LTD. MANGALORE 3.

MANGALORE

# P.V.S BEEDIES

P.V.S BEEDIES LTD MANGALORE 3

*Manufacturers:* **P. V. S. BEEDIES PRIVATE LTD.**

Post Box No. 7, Kodiyalbail MANGALORE - 3

Telegrams: "PUTHUBIDIS" PHONE: 83, 83 A RESIDENCE: 593,

ಶ್ರೀಪ್ರಭಾಕಂಡನ ನಿಲಯ

# ಇದುವೆ ಜೀವ ಇದು ಜೀವನ

ನಾನು ಕೂನೂರಿಗೆಂದು ಮೋಟಾರಿನಲ್ಲಿ ಹೊರಟಿದ್ದೆ. ಕೂನೂರಿಗೆ ಇನ್ನೂ ನಾಲ್ಕು ಮೈಲುಗಳಿವೆಯೆನ್ನುವಾಗ, ಅತ್ತ ಕಡೆಯಿಂದ ಹೊರಟ ಮೋಟಾರೊಂದು ರಸ್ತೆಯಂಚಿನಲ್ಲಿ ನಿಂತದ್ದು ಕಂಡಿತು. ಅದರ ಡ್ರೈವರ ಮತ್ತು ಕೆಲವು ಪ್ರಯಾಣಿಕರು, ಮೋಟಾರು ನಿಂತ ಸ್ಥಳದಿಂದ ಸುಮಾರು ಇನ್ನೂರು ಅಡಿಗಳಷ್ಟು ದೂರದಲ್ಲಿ ನಿಂತು ಏನೋ ಮಾತನಾಡಿಕೊಳ್ಳುತ್ತಿದ್ದರು.

ನಾವು ಕುಳಿತಿದ್ದ ಮೋಟಾರಿನ ಚಾಲಕ "ಏನಾಯಿತು ಅಣ್ಣಾ......ಏನಾದರೂ ಯಂತ್ರದ ತಕರಾರೇ?"-ಎಂದು ಕೇಳಿದ.

ದಾರಿಯಲ್ಲಿ ನಿಲ್ಲಿಸಿದ್ದ ಮೋಟಾರಿನ ಚಾಲಕ ರಹಸ್ಯಪೂರ್ಣವಾಗಿ "ಪ್ರಸವಕ್ಕಾಗಿ ನಿಲ್ಲಿಸಿದ್ದೇನೆ!" ಎಂದ.

"ಆ ಬಸ್ಸು ಈಗೊಂದು ಬೇಬಿ ಟ್ಯಾಕ್ಸಿಯನ್ನು ಹಡೆಯುತ್ತದೆ!"-ಎಂದು ನಮ್ಮಲ್ಲೊಬ್ಬರು ನಮ್ಮನ್ನು ನಗಿಸಿದರು.

ಆದರೆ ಅನಂತರ ನಮಗೆ ಇದು ನಗೆಯ ಸಂಗತಿಯಲ್ಲೆಂದು ತಿಳಿಯಿತು. ಆ ಮೋಟಾರಿನಲ್ಲಿ ಕುಳಿತು ಪಕ್ಕದ ಎಸ್ಟೇಟಿಗೆಂದು ಹೊರಟಿದ್ದ ಯಾರೋ ತುಂಬು ಗರ್ಭಿಣಿಯೊಬ್ಬಳಿಗೆ ಅಲ್ಲಿಗೆ ಬರುವಾಗ ನೋವು ಕಾಣಿಸಿಕೊಂಡಿತಂತೆ. ಹತ್ತಿರದಲ್ಲಿ ಮನೆಗಳೇ ಇಲ್ಲದ ಆ ರಸ್ತೆಯಲ್ಲಿ ಡ್ರೈವರನಾದರೂ ಏನು ಮಾಡಿಯಾನು? ಆದರೆ ದೈವವಶಾತ್ ಅದೇ ಬಸ್ಸಿನಲ್ಲಿ ಇಬ್ಬರು ಸ್ತ್ರೀಯರಿದ್ದುದರಿಂದ, ಅವರನ್ನು ಅಲ್ಲಿ ಬಿಟ್ಟು, ಕಂಡಕ್ಟರನನ್ನು ಕೂನೂರಿಗೆ ಓಡಿಸಿ, ಡ್ರೈವರನು ಪ್ರಯಾಣಿಕರೊಡನೆ ದೂರ ಹೋಗಿ ದಾರಿಯಲ್ಲಿ ನಿಂತಿದ್ದ.

"ಗಂಡು ಮಗು!"-ಎಂದು ಬಸ್ಸಿನಿಂದ ಸ್ತ್ರೀಯೊಬ್ಬಳು ಕೂಗುವ ಹೊತ್ತಿಗೆ ಸರಿಯಾಗಿ ಕೂನೂರಿನಿಂದ ಅಂಬುಲೆನ್ಸ್ ವ್ಯಾನ ಸಹಿತ ಕಂಡಕ್ಟರ ಬಂದ.

—'ಪರಂಜ್ಯೋತಿ'

ಹಳ್ಳಿಯಿಂದ ನಮ್ಮ ತಾತನವರು ಬೆಂಗಳೂರಿಗೆ ನಮ್ಮಲ್ಲಿಗೆ ಬಂದಿದ್ದರು. ಒಂದು ಸಂಜೆ ಅವಸರದಲ್ಲಿ ದೀಪ ಮರೆತು ಸೈಕಲ್ ತೆಗೆದುಕೊಂಡು ಪೇಟೆಗೆ ಹೋದರು. ಪೋಲೀಸಿನವ ಅರ್ಧದಾರಿಯಲ್ಲಿ ಅವರನ್ನು ಕೂಗಿದ: "ಏಯ್, ಎಲ್ಲಿ ದೀಪ ಸೈಕಲ್ಲಿಗೆ?"

ತಾತ ಸೈಕಲ್ಲಿನಿಂದಿಳಿದು ವಿಷಯವೇ ತಿಳಿಯದವರಂತೆ ಕೇಳಿದರು: "ಸೈಕಲ್ಲಿಗೆ ದೀಪ! ರಸ್ತೆಯಲ್ಲಿ ಇಷ್ಟೊಂದು ದೀಪದ ಕಂಬಗಳು ಬೆಳಗುತ್ತಿವೆಯಲ್ಲ!"

"ಯಾವೂರವರು ರೀ ನೀವು? ರಾತ್ರಿ ದೀಪವಿಲ್ಲದೆ ಸೈಕಲ್ ಬಿಡಬಾರದೆಂದು ತಿಳಿಯದೆ?" ಎಂದು ಗದರಿಸಿದ ಪೋಲೀಸಿನವ.

"ನಾನು ಗ್ರಾಮದವನಪ್ಪ. ನಮ್ಮಲ್ಲಿ ರಸ್ತೆ ದೀಪಗಳಿಲ್ಲ. ಆದ್ದರಿಂದ ಸೈಕಲ್ ದೀಪವಿಲ್ಲದಿದ್ದರೆ ಆಗದು. ಇಲ್ಲೇಕೆ ಇಷ್ಟು ಬೆಳಕಿನ ನಡುವೆ ದೀಪ ಎಂದೇ ನಾನು-" ಇದನ್ನು ಅವರು ಎಷ್ಟು ಮನಮುಟ್ಟುವಂತೆ ಹೇಳಿದರೆಂದರೆ ಪೋಲೀಸಿನವ ಕೂಡಲೆ ಸೌಮ್ಯನಾಗಿ, "ಹೋಗಿ ಹೋಗಿ. ಇನ್ನು ದೀಪವಿಲ್ಲದೆ ರಾತ್ರಿ ಸೈಕಲ್ ಓಡಿಸಬೇಡಿ" ಎಂದು ಅವರನ್ನು ಬಿಟ್ಟುಬಿಟ್ಟ.

—ಲಕ್ಷ್ಮೀ ರಾಮನ್

ಬೆಂಗಳೂರಿಗೆ ಆಗಿನ್ನೂ ಹೊಸಬರಾಗಿದ್ದ ನಾವು ಅಲ್ಲಿಯ ಬೀದಿ ನಂಬರುಗಳ ರಹಸ್ಯದಲ್ಲಿ ಅಜ್ಞಾನಿಗಳಾಗಿದ್ದೆವು. ಒಂದು ದಿನ ಬೆಳಿಗ್ಗೆ ಚಾಮರಾಜ ಪೇಟೆಯಲ್ಲಿರುವ ನಮ್ಮ ಸಂಬಂಧಿಕರೊಬ್ಬರನ್ನು ಭೇಟಿಯಾಗಿ ಬರಲು ನಮ್ಮ ಯಜಮಾನರು ಮತ್ತು ಇಬ್ಬರು ಮಕ್ಕಳೊಡನೆ ಬಸ್ಸಿನಲ್ಲಿ ಹೋಗಿ ವಾಣಿವಿಲಾಸ ಆಸ್ಪತ್ರೆಯ ಹತ್ತಿರ ಇಳಿದು ನಮ್ಮ ಸಂಬಂಧಿಕರಿರುವ ೫ ನೇ ಬೀದಿಯನ್ನು ಮುಟ್ಟಿದೆವು. ಆದರೆ ಎಷ್ಟು ಹುಡುಕಿದರೂ ನಮಗೆ ಬೇಕಾದ ಮನೆ ಸಿಗಲಿಲ್ಲ. ಕಡೆಗೆ ನೋಡಿದರೆ ಆ ಮನೆಯ ಮುಂದೇ ಎರಡು ಸಲ ಹಾದುಹೋಗಿದ್ದೆವು. ಬೀದಿಯಲ್ಲಿ ಆ ಬೆಳಗಿನ ಹೊತ್ತಿನಲ್ಲಿ ವಿರಳವಾಗಿ ಸಿಕ್ಕಿದವರನ್ನು ಕೇಳಿದರೆ ತಿಳಿಯಲಿಲ್ಲ.

ಆಗ ನಮಗೆ ನಾವು ನಿಂತ ರಸ್ತೆಯೇ ತಪ್ಪು ರಸ್ತೆಯೋ ಎಂಬ ಸಂದೇಹ ಬಾಧಿಸತೊಡಗಿತು. ಅಷ್ಟರಲ್ಲಿ ಅಲ್ಲೊಬ್ಬ ಕಾಲೇಜ್ ವಿದ್ಯಾರ್ಥಿನಿಯಂತೆ ಕಾಣುವ ಯುವತಿ ಕಣ್ಣಿಗೆ ಬಿದ್ದಳು. ಕೈಯಲ್ಲಿ ಪುಸ್ತಕಗಳಿದ್ದವು. ನಾನು ಅವಳನ್ನು ಸಮೀಪಿಸಿ— "...ಇವರ ಮನೆ ಗೊತ್ತೇ ?" ಎಂದು ಕೇಳಿದೆ. ಇಲ್ಲವೆಂದು ಉತ್ತರ ಬಂತು.

ಹಾಗಾದರೆ "ಚಾಮರಾಜಪೇಟೆ ಐದನೇ ರಸ್ತೆ ಇದೇ ಅಲ್ಲವೇ?" ಎಂದು ಕೇಳಿದೆ.

"ಇದಲ್ಲ, ಐದನೇ ರಸ್ತೆ ಆಚೆಗಿನದು" ಎಂದು ಅವಳು ಹೇಳಿದಳು. ಅರ್ಧ ಗಂಟೆ ಇದೇ ಆ ರಸ್ತೆ ಎಂದು ಭ್ರಮಿಸಿದ್ದ ನಾನು ಬೆರಗಾಗಿ, "ಹಾಗಾದರೆ ಇದು ಯಾವ ರಸ್ತೆ?" ಎಂದು ವಿಚಾರಿಸಿದೆ.

"ಇದು ಫಿಫ್ತ್ ಮೈನ್ ರೋಡು" ಎಂದು ಉತ್ತರ ಬಂತು.

ನನಗೆ ನಗೆ ತಡೆದುಕೊಳ್ಳುವುದು ಕಷ್ಟವಾಯಿತು. —ಶ್ರೀಮತಿ ಸುಶೀಲಾ ದಾನಿ

ನಾನು ನನ್ನ ಹೆಂಡತಿಯೊಡನೆ ಹುಬ್ಬಳ್ಳಿಗೆ ರೈಲಿನಲ್ಲಿ ಹೊರಟಿದ್ದೆ. ಪ್ರವಾಸದಲ್ಲಿ ವೇಳೆ ಕಳೆಯಲೆಂದು ಸ್ವಭಾವತಃ ಹೆಚ್ಚು ಸಿಗರೇಟು ನಾನು ಸೇದುವವ. ಕೊಪ್ಪಳದಿಂದ ಗದುಗಿನ ವರೆಗೂ ಮೇಲಿಂದ ಮೇಲೆ ನಾನು ಸಿಗರೇಟು ಸೇದಿದ್ದು, ಅವಳನ್ನು ಘಾಸಿಗೊಳಿಸಿತು. ಮೂರು ನಾಲ್ಕು ಸಲ 'ಸಾಕು ಮಾಡಿರಿ' ಎಂದು ತಾಕೀತೂ ಕೊಟ್ಟಳು. ಆದರೆ ನಾನೇನೂ ಅವಳ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ.. ಅವಳು ಸಿಡಿಮಿಡಿಗೊಂಡಳು.

ಗದಗ ನಿಲ್ದಾಣದಲ್ಲಿ ನಾನು ಇಳಿದು ಕಾಫೀ ತೆಗೆದುಕೊಂಡು ಬಂದು ಪುನಃ ಸಿಗರೇಟು ಹೊತ್ತಿಸಿದೆ. ಆಗಲೇ ಅವಳಿಗೆ ಸಾಕುಬೇಕಾಗಿಹೋಗಿತ್ತು. ನನಗೇನು ಪುನಃ ಪುನಃ ಹೇಳುವಂತೆ ಇರಲಿಲ್ಲ. ಅಷ್ಟರಲ್ಲಿ ನಾವು ಕುಳಿತ ಡಬ್ಬದ ಮುಗ್ಗುಲಲ್ಲೇ ಗಾರ್ಡ್ ಹೊರಟಿದ್ದ. ಅವಳು ಅವನನ್ನು ಕರೆದು ತಾನು ಎಷ್ಟು ಹೇಳಿದರೂ ಸಿಗರೇಟು ಸೇದುವುದನ್ನು ನಾನು ಬಿಡದೇ ಇರುವ ಬಗ್ಗೆ ತಿಳಿಸಿದಳು. ಗಾರ್ಡ್ "ನೀವು ಸಿಗರೇಟು ಸೇದಕೂಡದು" ಎಂದು ಸೌಮ್ಯವಾಗಿ ತಿಳಿಸಿದ. ನಾನು ನಗುತ್ತ "ಅವಳು ನನ್ನ ಹೆಂಡತಿ. ಅವಳ ಮಾತನ್ನು ಹಚ್ಚಿಕೊಳ್ಳಬೇಡಿ" ಎಂದು ಹೇಳಿದೆ. ಗಾರ್ಡ್ "ನಿಮ್ಮ ಹೆಂಡತಿಯೇ ಇರಲಿ ಯಾರೇ ಇರಲಿ, ಈಗ ಅವರು ನಮ್ಮ ಪ್ಯಾಸೆಂಜರು. ಅವರ ಸುಖಚಿಂತನೆ ನಮಗೆ ಸೇರಿದ್ದು. ಮೇಲಿನ ಬೋರ್ಡ್ ನೋಡಿರಿ" ಎಂದ.

ನನ್ನ ಸಿಗರೇಟು ಮೆಲ್ಲಗೆ ಡಬ್ಬಿಯ ಹೊರಗೆ ಹೋಗಿತ್ತು.

—ಎ. ಬಿ. ಮುತಾ

ಒಂದು ಹದಬಂಸ್ಕೃರ್ತಿ

ಕಥೆ



# ಅಡಿಕೆಬೆಟ್ಟ

ಮೂಲ ಮರಾಠಿ:
ಯ. ಗೋ. ಜೋಶಿ

ಅನುವಾದ:
ದ. ಬಾ. ಕುಲಕರ್ಣಿ

ಆಗ ನನ್ನ ತಂಗಿಗೆ ಹನ್ನೆರಡರ ಪ್ರಾಯ; ನನಗೆ ಹದಿನೆಂಟು, ಅಂದು ಭಾವಬಿದಿಗೆ. ಕೊಂಕಣದ ನನ್ನ ಕಕ್ಕನ ಮಕ್ಕಳಿಬ್ಬರು ಆ ಹಬ್ಬಕ್ಕಾಗಿಯೆ ಬಂದಿದ್ದರು.

ನನ್ನ ತಂಗಿ ಸುಭದ್ರಾ, "ಇಂದು ಭಾವ-ಬಿದಿಗೆ. ಇಂದಿನ ಅಡಿಗೆಯನ್ನೆಲ್ಲ ನಾನೇ ಮಾಡುವವಳು" ಎಂದು ಹಟ ಹಿಡಿದಳು.

'ಸೋನೂ'— ನನ್ನ ತಂಗಿಯನ್ನು ಕರೆಯುವ ಹೆಸರದು—"ಅಕ್ಕಿಯನ್ನೆಷ್ಟು ಇಟ್ಟುಕೊಂಡಿರುವಿಯೆ?" ಅವ್ವ ಕೇಳಿದಳು.

"ಅವ್ವ, ನೀ ಮಾತಾಡಬೇಡ. ನಾನು ನನ್ನ ಅಂದಾಜಿನಿಂದ ಎಲ್ಲಾ ಮಾಡುತ್ತೇನೆ. ಪಲ್ಯಕ್ಕೆ ಉಪ್ಪು-ಖಾರ ಸಹಿತ ನಾನು ನನ್ನ ಅಂದಾಜಿನಿಂದಲೇ ಹಾಕುವವಳು. ಹುಳಿ-ಬೆಲ್ಲ-ಎಲ್ಲಾ."

"ಆಗಲಿ. ಫಜೀತಿ ಮಾತ್ರ ಮಾಡಿಕೊಳ್ಳಬೇಡ—ಅಂ!"

ಸುಮಾರು ಒಂದು ಗಂಟೆಯಾಗುವಾಗ ನಮ್ಮ ತಂಗೆವ್ವ 'ಎಲೆ ಬಡಿಸಿದೆ' ಎಂದು ವರದಿ ಮಾಡಿದಳು. ನಾವೆಲ್ಲ ಬಂಧುಗಳು ಊಟಕ್ಕೆ ಕೂತೆವು.

"ಆಮಟಿ ಹೇಗಾಗಿದೆಯೋ—ಅಣ್ಣ?"

"ವಾ, ಉತ್ಕೃಷ್ಟ!" ಆಮಟಿಯನ್ನು ಸುರಿದುಕೊಳ್ಳುತ್ತ ನಾನೆಂದೆ.

"ಹೌದೋ, ಛಲೋ ಆಗೇದ ಅಂತೀ. ಮತ್ತ ಬಟ್ಟಲದಲ್ಲಿದ್ದದ್ದು ಮಾತ್ರ ಮುಗಿಯುವುದಿಲ್ಲ!"

ನನ್ನ ತಂಗಿ ಏನಾದರೊಂದು ಮಾಡಿದಳು, ಅದು ಚಲೋ ಆಗಿದೆಯೆಂದು ನಾನೆಂದೆ—ಎಂದರೆ ಆ ಪದಾರ್ಥ ಮುಗಿಯುವವರೆಗೆ ನಾನು ತಿಂದೇ ತೀರಬೇಕು. ಏಕೆಂದರೆ ಆ ಪದಾರ್ಥದ ಕೊರತೆಯಾಗುವುದೇ ಅದು ಚೆನ್ನಾಗಿರುವುದರ ಲಕ್ಷಣ. ಇದು ನನ್ನ ತಂಗಿಯ ತರ್ಕಶಾಸ್ತ್ರ.

ಆಗ ಕಡೆಯ ಅನ್ನದ ಸಮಯ ಬಂದಿತ್ತು

ಒಳಗೆ ಅನ್ನ ಕೆದರುವಾಗಿನ ಪಾತ್ರೆಯ ಸಪ್ಪಳ ಕೇಳಿಬಂದಾಗ ಅನ್ನ ಸಂಪುಷ್ಟಕ್ಕೆ ಬಂದಿದೆ ಎಂಬುದು ನನಗೆ ತಿಳಿಯದಿರಲಿಲ್ಲ.

ಅನ್ನ ಬಡಿಸಲು ಬಂದಾಗ ನನ್ನ ತಮ್ಮ ಕೇಳಿದ: "ಏನು ಸೋನೂತಾಯಿ, ಅನ್ನ ತೀರಿದ ಹಾಗೆ ಕಾಣತದೆ?"

"ಹೂಂ—ತೀರೀತು"—ಎಂದೆನ್ನುತ್ತ ಅವಳು ಜುಲುಮೆ ಮಾಡಿ ಅವನಿಗೆ ಅನ್ನ ಬಡಿಸಿದಳು. ತಟ್ಟೆಯಲ್ಲಿ ಕೇವಲ ನಾಲ್ಕು ಅಗಳು ಅನ್ನ ಮಾತ್ರ ಉಳಿದಿತ್ತು. ನನಗಿನ್ನೂ ಅನ್ನ ಬೇಕಾಗಿತ್ತು.

ಸೋನೂತಾಯಿ ನನ್ನ ಎಲೆಗೆ ಬಂದು, ಉಳಿದ ಆ ನಾಲ್ಕು ಅಗಳು ನನ್ನ ಎಲೆಗೆ ಸರಿಸಿ ಗಾಬರಿಯಿಂದ ಬೆವರಿದ ತನ್ನ ಮುಖವನ್ನು— ಕೈ ಮುಸುರೆಯಾದ್ದರಿಂದ— ಮುಂಗೈಯಿಂದ ಒರೆಸಿಕೊಳ್ಳುತ್ತ, "ಅಣ್ಣಾ, ಇನ್ನು ನೀನು ಏಳಲ್ಲ! ನಿನ್ನ ಹೊಟ್ಟೆ ತುಂಬಿದೆ" ಎಂದಳು.

ನಾನು ಕುತೂಹಲದಿಂದ ಅವಳ ಕಡೆಗೆ ನೋಡಿದೆ.

"ಏಳಲ್ಲ!"

"ಅಲ್ಲವೇ—ಹೂಂ, ಆಯಿತು!"

ಆ ನಂತರ ಅವಳು ಅಡಿಗೆಮನೆ ಸೇರಿದವಳು ನಾವು ಎಲೆ ಬಿಟ್ಟು ಏಳುವವರೆಗೂ ಹೊರಗೆ ಬರಲಿಲ್ಲ. ನಮಗೆ ನಕ್ಕುನಕ್ಕು ಸಾಕಾಯಿತು.

ಒಡಹುಟ್ಟಿದ ಅಣ್ಣ—ಅವನನ್ನು ಹಕ್ಕಿನಿಂದ ಉಪವಾಸ ಎಬ್ಬಿಸಲು ಏನಡ್ಡಿ? ನನ್ನ ಹೊಟ್ಟೆ ಒಂದಿಷ್ಟು ತೆರವಾಗಿದ್ದರೂ ನಾನು ಆನಂದದಿಂದ ಎದ್ದೆ. ಹಾಗೆ ಅರೆಹೊಟ್ಟೆಯಿಂದ ಏಳುವುದೆಂದರೆ ನನಗೆ ಎಂದಿಲ್ಲದ ಆನಂದವಾಗಿತ್ತು.

*

ಸೋನೂತಾಯಿ ಮದುವೆಯಾಗಿ ತನ್ನ ಅತ್ತೆಯ ಮನೆಗೆ ಹೋಗಿದ್ದಳು. ಅವಳಿಗೊಂದು ಪುತ್ರರತ್ನವಾಗಿತ್ತು. ಆ ಮಗುವಿಗಾಗ ಐದು ವರುಷ. ಅಂದು ಕೂಡ ಭಾವಬಿದಿಗೆ. ಆದರೆ ನಾವಿದ್ದದ್ದು ಪುಣೆಯಲ್ಲಿ; ಅವಳಿದ್ದದ್ದು ಬೇರೆ ಊರಿನಲ್ಲಿ. ಪುಣೆಯಲ್ಲೂ ನನಗಿನ್ನೊಬ್ಬ ತಂಗಿ ಇದ್ದಳಾದ್ದರಿಂದ ನಾನು ಸೋನೂತಾಯಿಯ ಕಡೆಗೆ ಹೋಗಿರಲಿಲ್ಲ. ಅನಂತರ ಅವಳು ಹೇಳಿದ ಸಂಗತಿಗಳ ಮೇಲಿಂದ, ಆ ಸಂಗತಿಗಳಿಗೆ ನನ್ನ ಊಹೆಯ ನೆರವು ಪಡೆದು ಈ ಸಮಾಚಾರವನ್ನು ಬರೆಯುತ್ತಿದ್ದೇನೆ.

*

ಹತ್ತು-ಹತ್ತೂವರೆ ಗಂಟೆ ರಾತ್ರಿಯಾಗಿತ್ತು. ಸೋನೂತಾಯಿಯ ಅತ್ತೆಮನೆಯಲ್ಲಿ ಭಾವಬಿದಿಗೆಯ 'ಪ್ರೋಗ್ರಾಂ' ಆಗಿಹೋಗಿತ್ತು. ಆದರೆ ಸೋನೂತಾಯಿ ಅಂದು ಯಾರಿಗೆ ಆರತಿ ಮಾಡಬೇಕು? "ಏನೇ—ನಿನ್ನ ಅಣ್ಣ ಇಲ್ಲಿ ಇಲ್ಲವಾದರೆ ಶಕುನದ ದೇವರಿಗೆ—ಮತ್ತು ಚಂದ್ರನಿಗೆ ಆರತಿ ಬೆಳಗು" ಎಂದು ಯಾರೋ ಅವಳಿಗೆ ಹೇಳಿದರು.

"ಆಗಲಿ."

ಆದಿನ ಸಂಜೆಯ ಸಮಯದಿಂದ ಸೋನೂತಾಯಿಯ ಅಂತಃಕರಣದಲ್ಲಿ ಕಲಮಲವೆದ್ದಿತ್ತು. ಮನಸ್ಸಿನಲ್ಲಿ ವಿಚಾರಗಳು ಕುದಿದೇಳುತ್ತಿದ್ದವು. ಮತ್ತೆ ಸಮುದ್ರದ ನೀರ ಮೇಲಿನಿಂದ ತಂಗಾಳಿ ಬೀಸುವಂತೆ ಅವಳ ಉಸಿರಾಟ ನಡೆದಿತ್ತು. ಅವಳು ಎದುರು ನೋಡುವಳು. ತೀರ ದೂರಕ್ಕೆ —ದಿಟ್ಟಿ ನಿಲುಕುವ ವರೆಗೂ ನೋಡುವಳು. ಈ ಮನೆಗಳು, ಈ ಗಿಡಗಳು, ಆ ಬೆಟ್ಟ ಉನ್ಮತ್ತರಂತೆ ನಡುವೆ ನಿಂತಿವೆ. ಇಲ್ಲವಾದರೆ ನನ್ನ ಅಣ್ಣಯ್ಯ ನನಗೆ ಇಲ್ಲಿಂದ ಕಾಣುತ್ತಿದ್ದ— ಎನ್ನಿಸುವುದವಳಿಗೆ. ದೀಪ ಹಚ್ಚಿದಳು. ಸುಮ್ಮನೆ ಬಾಗಿಲಿಗೆ ಕೈ-ಕೊಟ್ಟು ನಿಂತಳು. ಬಾಯಿಂದ ಮಾತಿಲ್ಲ ದೇಹದ ಚಲನೆಯಿಲ್ಲ. ಶ್ವಾಸೋಚ್ಛ್ವಾಸ ಕೂಡ ಒಂದೆರಡು ನಿಮಿಷ ನಿಂತಿತ್ತೆಂದೇ ನನ್ನೆಣಿಕೆ ಇದ್ದರೂ ಇರಬಹುದು.

ನಿಜವಾಗಿ ಆಹೊತ್ತು ಎಂಥದೋ ಶ್ರೀಹರಿಗೆ ಗೊತ್ತು. ಅದೇ ಹೊತ್ತಿಗೆ ಪುಣೆಯಲ್ಲಿದ್ದ ನನಗೂ ಸ್ವಲ್ಪ ಹಿಡಿದುಬಿಟ್ಟಂತೆನಿಸಿಬಿಟ್ಟಿತ್ತು. ಆ ಹೊತ್ತಿಗೆ ನಾನು ಪುಣೆಯಲ್ಲಿದ್ದ ನನ್ನ

ತಂಗಿಯ—ಮಾಯೀ ಎಂದವಳ ಹೆಸರು—ಕೈಯಿಂದ ಆರತಿ ಮಾಡಿಸಿಕೊಳ್ಳಲು ಮಣೆಯ ಮೇಲೆ ಕುಳಿತವನು ಆರತಿ ತಾ ಎಂದು ಹೇಳಲು ಅವಳನ್ನು ಕರೆದೆ: "ಏ–ಸೋನೀ–"

"ಸೋನೂತಾಯಿ ಬೇರೆ ಊರಿನಲ್ಲಿದ್ದಾಳೆ-ಗೊತ್ತಾಯಿತೇ?" ಎನ್ನುತ್ತ ನಿರಾಂಜನವಿಟ್ಟ ತಬಕವನ್ನು ಕೈಗೆ ತಕ್ಕೊಳ್ಳುತ್ತ ಮಾಯಿ ಯೆಂದಳು.

ಮತ್ತೆ ಅನುಸಂಧಾನದಿಂದ ಹೇಳಬಹುದಾದರೆ ಬಹುಶಃ ಅದೇ ವೇಳೆಗೆ ಸೋನಿ ಬಾಗಿಲಿಗೆ ಸ್ತಬ್ಧಳಾಗಿ ನಿಂತಿರಬೇಕು—ಅವಳು ತನ್ನ ದೇಹವನ್ನು ಮಾತ್ರ ಆ ಸ್ಥಳದಲ್ಲಿ ಬಿಟ್ಟು ಮನಸ್ಸಿನಿಂದ ಪುಣೆಗೆ ಬಂದಳು. ಬಹುಶಃ ಅದಕ್ಕೆಂದೇ ನಾನು ಮಾಯಿಯನ್ನು 'ಸೋನೀ' ಎಂದು ಕರೆದೆ, ಆಯಿತು; ಅವಳ ಮನಸ್ಸಿಗೂ ಸಮಾಧಾನವೆನಿಸಿರಬೇಕು. ಎಂತಲೇ ಅವಳ ಮನಸ್ಸು ತಿರುಗಿಹೋಯಿತು. ಅವಳು ನಕ್ಕಳು!

ಇದು, ನಡುವಿನ ಸಂಗತಿ ಹೇಳಿದ್ದು— ತಿಳಿಯಿತೇ? ಆಮೇಲೆ ಅವಳು ದೇವರಿಗೆ ಆರತಿ ಮಾಡಿದಳು— ಮತ್ತು ಅಂಗಳಕ್ಕೆ ಹೋಗಿ ಚಂದ್ರನಿಗೆ ಆರತಿ ಮಾಡಿದಳು.

ಚಂದ್ರನಿಗೆ ಆರತಿ ಮಾಡುವವರಿಗೆ,- ಈ ನೆಲದ ಮೇಲೆ ಅವನಿಗೆ ಅದೆಷ್ಟೋ ಸೋದರಿಯರು—ಅವನು ಪ್ರತಿಯೊಬ್ಬಳಿಗೆ ಏನೆಂದು ಉಡುಗೊರೆ ಕೊಟ್ಟಾನು? ಮತ್ತೆ ಸೋದರಿಯಾದವಳಿಗೆ ನಿಜವಾಗಿ ಯಾವ ವಸ್ತು ಆರತಿಯ ಉಡುಗೊರೆಯಾಗಿ ಬೇಕಾಗಿರುವುದೋ— ಅದು ಕೊಟ್ಟರೆ ಎಂದಿಗೂ ತೀರುವಂಥದಲ್ಲ. ಚಂದ್ರ ಆರತಿ ತಟ್ಟೆಯಲ್ಲಿ ಸಮಾಧಾನದ ಮತ್ತು ಉತ್ಸಾಹದ ಕಾಣಿಕೆ ಹಾಕಿದ.

ನೀಲಾಂಜನ ಇಡುವುದಕ್ಕೆಂದು ಅವಳು ದೇವರ ಜಗುಲಿಯ ಬಳಿಗೆ ಹೋದಳು. ಅವಳ ಮುದ್ದುಮಗ ಮಧು ಆಕೆಯ ಬೆನ್ನೇರಿ ಅವಳ ಹೆಗಲಮೇಲಿನಿಂದ ತನ್ನ ಪುಟ್ಟ ಕೈ ತೆಗೆಯುತ್ತ- "ಅವ್ವಾ, ಇಲ್ನೋಡು, ಮಾಮಾನ ಮನೆಯ ಕಾಣಿಕೆ ಹಾಕುವೆ ನೋಡು— ನಿನಗೆ" ಎನ್ನುತ್ತ ಸರ್ದಾರ ಒಂದು ಅಡಿಕೆಬೆಟ್ಟವನ್ನು ತಬಕದಲ್ಲಿ ಚೆಲ್ಲಿದ. ತಬಕದಲ್ಲಿಯ ಬೆಟ್ಟವನ್ನು ತನ್ನ ಸೊಂಟಕ್ಕೆ ಸಿಕ್ಕಿಸಿಕೊಂಡು ಅವಳು ಮಗುವನ್ನು—ತನ್ನ ಮಧೂನನ್ನು ಎತ್ತಿಕೊಂಡಳು. ಮತ್ತವಳು ಉಕ್ಕುವ ಪ್ರೀತಿಯಿಂದ— ಎಂದಿಗೂ ಸಾಕೆನಿಸದಂಥ ಮುತ್ತನ್ನಿತ್ತಳು.

*

ಈ ಕತೆ ಬರೆಯಬೇಕೆನ್ನುವಾಗ ನನ್ನ ಸ್ಥಿತಿ ಬಹಳ ಗೊಂದಲಗೆಟ್ಟಿದೆ. ಕತೆ ಬರೆಯಬೇಕೆಂದು ಬರೆದದ್ದಲ್ಲವಿದು. ನನ್ನ ಮನಸ್ಸಿನ ಸಮಾಧಾನಕ್ಕೆಂದು ಬರೆದದ್ದು. ಎಂತಲೇ ಹೇಗೆ ಹೇಗೆ ನೆನಪು ಬರುವುದೋ ಹಾಗೆ ಹಾಗೆ ಬರೆಯುತ್ತಿದ್ದೇನೆ. ಅದರಿಂದ ಕಥಾಪ್ರಸಂಗ ಹಿಂದು ಮುಂದಾಗಬಹುದು. ಆದರೆ ಅದಕ್ಕೆ ಉಪಾಯವೇ ಇಲ್ಲ.

ನಡುವಿನ ಒಂದು ಪ್ರಸಂಗ ಹೇಳಬೇಕಾವದ್ದು ಉಳಿದುಬಿಟ್ಟಿತು. ಪುಣೆಯ ನಮ್ಮ ತಂಗೆಮ್ಮ ನಿದ್ದಾಳಲ್ಲ— ಅವಳು ಸ್ವಭಾವದಿಂದ ಒರಟು. ಯಾವುದಾದರೂ ಒಂದು ಪ್ರಶ್ನೆಗೆ ಉತ್ತರಿಸುವದೆಂದರೆ ಗುಡುಗು ಸಿಡಿಲಿನದೇ ಆರ್ಭಟ. ಆದರವಳು ಅಷ್ಟೇ ಪ್ರೇಮಮಯಿಯೂ ಹೌದು.

ಒಂದು ದೀಪಾವಳಿಯಲ್ಲಿ ಏನಾಯಿತೆನ್ನುತ್ತೀರಿ— ನನ್ನದೇ ಏನೋ ತಪ್ಪಿತ್ತು. ಅಂತಲೇ ಅವ್ವ ನನಗೆ ಏನೋ ಅಂದಳು. ಅದಕ್ಕೆ ನಾನೂ ಅವಳಿಗೆ ಎದುರು ವಾದಿಸಿದೆ. ಆಗ ನಮ್ಮ ತಂಗೆಮ್ಮ ಅಲ್ಲೇ ಇದ್ದಳು. ಅದೇ ಹೊತ್ತಿಗೆ ನಾನವಳಿಗೆ ಏನೋ ಕೆಲಸ ಹೇಳಿದೆ. ಸಿಡಿಲಿನದೇ ಆರ್ಭಟ! "ನಿನಗೆ ಅವ್ವನದೇನೂ ಕಿಮ್ಮತ್ತಿಲ್ಲವಾದರೆ ನನಗಾದರೂ ಯಾಕೆ ಕೆಲಸ ಹೇಳುತ್ತೀ? ನಾನು ನಿನ್ನದೇನೂ ಕೆಲಸ ಮಾಡುವವಳಲ್ಲ. ಮತ್ತೆ ನೀನು ಅವ್ವನಿಗೆ ಇಂಥ ಸೊಕ್ಕಿನ ಮಾತಾಡುವಿಯಾದರೆ ನನ್ನೊಡನೆ ಇನ್ನು ಮಾತೇ ಆಡಬೇಡ. ನನಗೆ ನಿನ್ನದೇನೂ ಬೇಕಾಗಿಲ್ಲ— ನೀನೂ ಬೇಡ!" ಮತ್ತವಳ

ಕಣ್ಣು ನೀರಿನಿಂದ ತುಂಬಿಬಂತು.

ನಾನು ಗಂಡಿನ ಗಡಸುತನದಿಂದ "ಆಗಲಿ, ಆಗಲಿ— ನನ್ನೊಡನೆ ಮಾತಾಡಬೇಡ—" ಎಂದೆ. ಅವಳೊಡನೆ ಮಾತು ಬಿಟ್ಟೆ. ದೀಪಾವಳಿ ಹತ್ತಿರ ಬಂದಿತ್ತು. ಅಲ್ಲ—ಅಂದು ನರಕಚತುರ್ದಶಿಯೇ ಇತ್ತು. ನನ್ನ ತಂಗಿ ಮನೆಗೆ ಬಂದಿದ್ದಳು. ನಾವಿನ್ನೂ ಪರಸ್ಪರ ಮಾತಾಡುತ್ತಿದ್ದಿಲ್ಲ.

ಮಧ್ಯಾಹ್ನ ತಾಯಿ-ಮಗಳು ಮಾತಾಡುತ್ತ ಕುಳಿತಿದ್ದರು. ಮಗ್ಗುಲ ಕೋಣೆಯಿಂದ ನನಗವರ ಮಾತು ಕೇಳುತ್ತಿತ್ತು.

"ಅವ್ವ, ಅಣ್ಣ ನನ್ನಿಂದ ಭಾವಬಿದಿಗೆಯ ಆರತಿ ಮಾಡಿಸಿಕೊಳ್ಳುವನೇನವ್ವಾ?" ಬೆದರಿದವಳಂತೆ ಅವಳು ಅವ್ವನನ್ನು ಕೇಳಿದಳು.

"ಅಂದರೇನೆ?" ಅವ್ವನೆಂದಳು.

"ಇಲ್ಲವೇ—ಅವನಿನ್ನೂ ನನ್ನೊಡನೆ ಮಾತಾಡುವುದಿಲ್ಲವೆಂದುಕೇಳಿದೆ" ನಡುವೆ ಸ್ವಲ್ಪಸಮಯ ಸರಿಯಿತು. ಮತ್ತವಳೆಂದಳು: "ಅವನಿಗೆ ಹೇಳು, ನನ್ನಿಂದ ಆರತಿ ಮಾಡಿಸಿಕೋ ಎನ್ನು! ಹಾಕಿಟ್ಟ ಆ ಆರತಿಯನ್ನು ನಾನೇನು ಎತ್ತಿ ಇಡುವವಳಲ್ಲ!" ಸೆರಗಿನ ತುದಿಯಿಂದ ಕಣ್ಣೀರೊರೆಸುತ್ತ ಅವಳೆಂದಳು.

ನಾನು ಚಟ್ಟನೆದ್ದು ಅಲ್ಲಿಗೆ ಧಾವಿಸಿ "ಮಾಯೀ" ಎಂದೆ.

"ಏನು?" ಬೋರಲು ಹಾಕಿದ ಪಾತ್ರೆಯನ್ನು ಎತ್ತಿ, ಮೈ ಮುರಿದುಕೊಳ್ಳುತ್ತ ಅವಳೆಂದಳು: "ಏನೂ ಇಲ್ಲ!"

ನಾವು ಒಬ್ಬರನ್ನೊಬ್ಬರು ನೋಡುತ್ತ ಮನಸೋಕ್ತ ನಕ್ಕೆವು. ಅವ್ವನೂ ನಮ್ಮ ನಗೆಯಲ್ಲಿ ಪಾಲುಗೊಂಡಳು.

ಆಯಿತು—ಮುಂದೇನು ಬರೆಯಲಿ? ಪ್ರಸಂಗವೇ ಮುಗಿದಾಗ ಬಣ್ಣಿಸುವುದೇನನ್ನು? ನಾನು ಮನಸ್ಸಿನಲ್ಲಿ ಏನದು ಗುಣುಗುಣಿಸುತ್ತಿದ್ದುದು? ಹಾಂ, ಕೇಶವ ಸುತರ ಕಾವ್ಯದ ಒಂದು ಪಾದವದು—

ಹೀಗೆ ಹರಡುವುದು ಆತ್ಮಾನಂದಾ!
ಧ್ವನಿಯುದರದು ದಿಡದಾs ದಿಡದಾs
ದಿಡದಾs

*

ಆರತಿ ಮಾಡಿಸಿಕೊಳ್ಳುವುದರಲ್ಲಿ ಮತ್ತುಆರತಿ ಮಾಡುವುದರಲ್ಲಿ ಏನಿದ್ದೀತು? ದುಡ್ಡು ಎಬ್ಬಿಸುವುದಿದ್ದೀತೆ? ಊಟ ಹೊಡೆಯುವುದಿದ್ದೀತೆ? ಇಲ್ಲ, ಏನಾದರೂ ಕೊಡುವುದಿರುವುದೆ? ಕೊಳ್ಳುವುದಿರುವುದೆ? ಈಗಂತೂ ನನ್ನ ಕೊರಳ ಸಿರ ಉಬ್ಬಿ ಬಂದಿದೆ. ಯಾಕೆಂದರೆ ಯಾರ ಪ್ರಸಂಗಕ್ಕಾಗಿ ಎಂದು ಈ ಕಥೆ ಬರೆಯತೊಡಗಿದೆನೋ ಆ ಪ್ರಸಂಗದ ನೆನಪಿನಿಂದ ನನಗೇನೂ ಹೊಳೆಯದಂತಾಗಿದೆ. ಮಾಗಿ—ಬೇಸಿಗೆ—ಮಳೆಗಾಲ! ನನ್ನ ಸಂಸಾರದ ಬೇಸಿಗೆ ಆಗಷ್ಟೆ ಬಂದಿತ್ತು.

ನನ್ನ ತಂಗಿಯರಿಗೆ ನಾನೊಬ್ಬನೇ ಒಬ್ಬನಚ್ಚಿನ ಅಣ್ಣ. ಈಗ ನಮ್ಮ ಮನೆಯಲ್ಲಿ ಉಳಿದವರೆಂದರೆ ನಾನು ಮತ್ತು ಅವ್ವ ಇಬ್ಬರೇ. ನನ್ನ ಹೆಂಡತಿ ಆಗಷ್ಟೆ ವಿಧಿವಶಳಾಗಿದ್ದಳು. ಅಲ್ಲದೆ ಸಾಂಪತ್ತಿಕ ದೃಷ್ಟಿಯಿಂದ ನನ್ನ ಪರಿಸ್ಥಿತಿ ತೀರ ಶೋಚನೀಯವಾಗಿತ್ತು. ಇಂಥದೇ ಕಾರಣವೆಂದಿಲ್ಲ. ಪ್ರಸಂಗಕ್ಕೆ ತಕ್ಕಂತೆ ನಡೆದುಕೊಳ್ಳುವುದು ನನಗೆ ತಿಳಿಯದು. ಯಾವುದು ಯೋಗ್ಯವೆನಿಸುವುದೋ ಹಾಗೆ ಆಡುವುದು; ಮಾಡುವುದು! ಅಂದರೆ ನಾನು ಆತ್ಮವಿಶ್ವಾಸವುಳ್ಳವನೆಂದಲ್ಲ. ಯಾರಾದರೂ ತಿಳಿಸಿ ಹೇಳಿದರೆ, ಒಪ್ಪಿಗೆಯಾಗುವಂತೆ ಮಾಡಿದರೆ ನಾನು ಹಾಗೂ ನಡೆದುಕೊಳ್ಳುತ್ತಿದ್ದೆ. ಆದರೆ ನನ್ನ ಅಂತಃಕರಣಕ್ಕೆ ಕೋಣೆಗಳಿದ್ದಿಲ್ಲ. ನಾನು ಬಹುಬೇಗ ಸಿಟ್ಟಾಗುತ್ತಿದ್ದೆ. ಅಷ್ಟೇ ಬೇಗ ತಣ್ಣಗಾಗುತ್ತಿದ್ದೆ. 'ಸ್ಟೋ'ದಂತೆ. ಈಗ ಹೊತ್ತಿಸಿದ್ದು— ಹವಾ ತೆಗೆದುಬಿಟ್ಟರೆ ಹೊತ್ತಿಸಿದ ಪತ್ತೆಯೇ ಇರುವುದಿಲ್ಲ.

ನಾನು ಜನರನ್ನು ಕೂಡಲೆ ನಂಬಿಬಿಡುವವನು. ಅಂತೆಯೇ ನಾನು ಪ್ರತಿಯೊಂದು ಸಲ ಮೋಸ ಹೋಗುವವನು. ಅದರಿಂದ ನನ್ನ ವ್ಯವಹಾರವೆಂದರೆ 'ಹುಡುಗಾಟ'ವೆಂದು ಹೆಸರಾಗಿತ್ತು.

ಇತರರು ಮಾತಿಗೆ ತಪ್ಪಿದರೆ ನನಗವರ ನೆಪಗಳು ಸತ್ಯವಾಗಿ ಕಾಣುವವು. ಅವರ ಬಗ್ಗೆ ನನಗೆ ಕನಿಕರವೆನಿಸುವುದು. ಇದೇ ಪೆದ್ದತನದಿಂದಲೇ ನಾನು ನನ್ನ ಸ್ವಂತದ ಬೆಲೆ ಕಳೆದುಕೊಂಡು ಕುಳಿತದ್ದು.

ಹೀಗಿರುವಾಗ ದೀಪಾವಳಿ ಬಂತು. ದೀಪಾವಳಿಯಲ್ಲಿ ಏನೊಂದು ಸಂಭ್ರಮವೂ ಬೇಡವೆಂದು ನಾನು ನಿರ್ಧರಿಸಿದ್ದೆ. ಕೈ ಮುಚ್ಚಿಕೊಂಡು ನಗುಮುಖದಿಂದ ಅತ್ತಿತ್ತ ನೋಡುತ್ತಿರುವುದೇ ನಮ್ಮ ಈ ಸಲದ ದೀಪಾವಳಿ !

ವ್ಯವಹಾರದ ಫಟಾಕಿ ಹಾರಿಸಿ ನನ್ನ ಕೈ ಸುಟ್ಟಿದೆ. ಇನ್ನೂ ಯಾಕೆ ಆ ಧಿಕತೋಂ ಧಿಕತ್ತೈ! ಜನಸಾಮಾನ್ಯರಿಂದ 'ಔಟ್' ಆದ 'ಆಸಾಮಿ' ಯೆಂದು ಜಗತ್ತಿನ ಆಟವನ್ನು ದೂರದಿಂದ ಆತ್ಮೀಯವಾಗಿ ನೋಡುತ್ತ ಕೂಡುವಾ—ಎಂದೆನಿಸಿತ್ತು.

ಈ ವಿಚಾರ ಮನಸ್ಸಿಗೆ ಹೊಳೆದಾಗ ನಾನು ನನ್ನಷ್ಟಕ್ಕೇ ನಕ್ಕೆ. ದೀಪಾವಳಿಯ ಹಬ್ಬದಿಂದಂತೂ ನಾನು ಬಹುಶಃ ಪಾರಾದೆ! ಇಂದು ಕೊನೆಯ—ಭಾವಬಿದಿಗೆಯ ದಿನ—

ಬೆಳಗ್ಗೇ ಪುಣೆಯಲ್ಲಿದ್ದ ನಮ್ಮ ತಂಗೆಮ್ಮ ಬಂದು, "ಅಣ್ಣ , ಸ್ನಾನಕ್ಕೆ ನಡೆ" ಎಂದಳು.

ಈಗ ನಾನು ಬೇಡವೆಂದು ಹೇಗೆ ಹೇಳುವುದು? ತಂಗಿಯ ಮುಖದ ಮೇಲಿನ ನಗೆಯ ಹೂಬಾಣವನ್ನು--ಅವಳ ದೃಷ್ಟಿಯಿಂದ ಅಮಂಗಲವೆನ್ನಿಸುವಂಥ ನನ್ನ ವಿಚಾರದಿಂದ ಆರಿಸಿ ಬಿಡಲೆ? ಇಲ್ಲವೆ ಮನಸ್ಸಿಲ್ಲದೆಯೂ ಈ ಆಟಕ್ಕೆ ಸಮ್ಮತಿಸಲೆ?

"ಹೇ-ಇದೇನೋ, ಬೇಗ ನಡೆಯಲ್ಲ. ನನಗೆ ತಡವಾಗುವುದು !"

ಸಾರಣೆಕಾರಣೆ ಮಾಡುವುದಕ್ಕೆಂದು ದಿವಾಣಖಾನೆಯನ್ನು ತೆರವು ಮಾಡುವಂತೆ ನನ್ನ ತಲೆಯಲ್ಲಿಯ ವಿಚಾರದ ಪಟ್ಟಸಾಲೆ ಮುಕ್ತವಾಗಿ ತೆರೆದಿತ್ತು; ತೆರವಾಗಿತ್ತು.

ನಾನು ಮೈಗೆ ಎಣ್ಣೆ ಹಚ್ಚಿಸಿಕೊಳ್ಳಲೆಂದು ಮಣೆಯ ಮೇಲೆ ಬಂದು ಕುಳಿತೆ. ಇದೇನು ಚೇಷ್ಟೆಯೆನಿಸಿತು, ನನಗೆ. ಭಾವಬಿದಿಗೆ ಎಂದರೇನು? ದೀಪಾವಳಿ ಎಂದರೇನು? ಆರತಿ ಎಂದರೇನು? ಮತ್ತೆ ಏನು ಎಂದರೇನು? ನನಗೆ ಲಹರಿ ಬಂದು ಒಂದು ಅಂಗೈಮೇಲೆ ಇನ್ನೊಂದು ಕೈಬೆರಳಿನಿಂದ ತಬಲಾದಂತೆ ಚಿಟಿಕೆ ಬಾರಿಸತೊಡಗಿದೆ.

ಮೈಗೆ ಎಣ್ಣೆ ಸವರುತ್ತ ಸವಪತ್ರೆ ನನ್ನ ತಂಗಿ, "ಅಣ್ಣ, ಇಂದು ಭಾವಬಿದಿಗೆಗೆ ಏನು ಮಾಡಲಿ ?" ಎಂದು ಕೇಳಿದಳು.

"ಜುಣಕಾ ಭಕ್ಕರಿ ಮಾಡು."

"ವಿಪರೀತ ಮಾತೇಕೆ ಆಡುವಿಯೋ!"

"ವಿಪರೀತವಲ್ಲ; ಲೆಕ್ಕದಿಂದಲೆ ಮಾತಾಡುತ್ತಿರುವೆ ನಾನು. ಭಾವಬಿದಿಗೆಯ ಮೇಜವಾನಿ ಜುಣಕಾ ಮತ್ತು ಭಕ್ಕರಿ. ಮತ್ತೆ ಆರತಿಯ ತಾಟಿನಲ್ಲಿ ಇಡೀ ಬೆಟ್ಟ ಅಡಿಕೆ! ನಿಜ; ಅವ್ವಾ, ಅಡಿಕೆ ಬೆಟ್ಟ ಇದೇಯೇನೇ ಮನೆಯಲ್ಲಿ?"

ಮನೆಯಲ್ಲಿ ನನ್ನೊಬ್ಬ ಸೋದರಸೊಸೆಯಿದ್ದಳು. ಆಕೆಯ ಹೆಸರು ವಿಮಲ

ಹುಡುಗಿ ಅಡಿಕೆಯ ಡಬ್ಬಿಯಲ್ಲಿ ಕೈ ಹಾಕಿದಳು. ಡಬ್ಬಿ ಖಾಲಿಯಾಗಿತ್ತು. ಸೊಟ್ಟ-ಪಟ್ಟ ಕೈ ಜಾಡಿಸುತ್ತ ವಿಮಲೆಯೆಂದಳು : "ಹುಡತ್ ! ಅವ್ವಾ ಅಡಿಕೆಯಿಲ್ಲ ಡಬ್ಬಿಯಲ್ಲಿ."

ಮೇಲಿನ ಮಾತು ಕೇಳಿ ನನಗೆಂಥ ಅಭಿಮಾನವೆನಿಸಿತೆನ್ನುತ್ತೀರಿ! ಇಲ್ಲವೆಂದರೆ ನನ್ನ ಮನೆಯಲ್ಲಿ ಏನೊಂದು ವಸ್ತುವೂ ಇಲ್ಲ. "ಮಾಯೀ—ಇಂದು ನಮ್ಮ ಭಾಗ್ಯಶಾಲಿಯಾದ ಭಾವಬಿದಿಗೆ! ಚತುಃಶೃಂಗದ ಅಡವಿಯಲ್ಲಿ ವನಭೋಜನಕ್ಕೆ ಕೂಡುವಂಥ ಗಮ್ಮತ್ತು ಇಂದು ನನ್ನ ಮನೆಯಲ್ಲಿ ಆಗುವುದಿದೆ. ಮನೆ ವಸ್ತುಗಳಿಲ್ಲದೆ ಮೈದಾನದಂತೆ ತೆರವಾಗಿದೆ. ಮತ್ತೆ ಇಂದು ನಮ್ಮ ತಂಗೆಮ್ಮ ತನ್ನ ವೆಚ್ಚದಿಂದ ನಮ್ಮ ಮನೆಯಲ್ಲಿ ಅಡಿಗೆ ಮಾಡುವವಳಿದ್ದಾಳೆ. ಇಂದು ನಮ್ಮ ಮನೆಯಲ್ಲೇ ವನಭೋಜನ!"

ನನ್ನ ತಂಗಿ ಕಾರುಣ್ಯಪೂರ್ಣವಾಗಿ ನಕ್ಕಳು!

ಅಂದರೆ ಹೀಗೆ: ನನ್ನ ಸದ್ಯದ ಸ್ಥಿತಿಯ ಬಗ್ಗೆ ಕಾರುಣ್ಯ, ಮತ್ತೆ ಆ ಸ್ಥಿತಿಯನ್ನೆದುರಿಸಿ ನಾನು ಆನಂದದಿಂದಿರುವ ಬಗ್ಗೆ ನಗೆ! ವಾಸ್ತವವಾಗಿ ಭಾವಬಿದಿಗೆಗೆ ನಾನು ನನ್ನ ತಂಗಿಯ ಮನೆಗೇ ಊಟಕ್ಕೆ ಹೋಗಬೇಕು. ಆದರೆ ಪರಿಸ್ಥಿತಿಯು ಹೆಗಲ ಮೇಲಿಂದ ಕೆಳಗೆ ಬಿದ್ದಿದ್ದೆನಾದ್ದರಿಂದ ನಾನು ಆಪ್ತೇಷ್ಟರಲ್ಲಿ ಹೋಗಲು ಸಂಕೋಚ ಗೊಳ್ಳುತ್ತಿದ್ದೆ. ಇದನ್ನು ನನ್ನ ತಂಗಿ ಅರಿತವ ಳಾಗಿದ್ದಳು. ಅಂತೆಂದೇ ನನಗೆ ಊಟದ ಆಮಂತ್ರಣವಿತ್ತು ತನ್ನ ಮನೆಗೆ ಕರೆಯದೆ ಅವಳು ತಾನಾಗಿ ನಮ್ಮಲ್ಲಿಗೆ ಬಂದಿದ್ದಳು.

ಈಗ ನಾನು ಕೇವಲ ಕಲ್ಪನೆ ಮಾಡುವುದ ರಲ್ಲಿ ತರಬೇತಿ ಹೊಂದಿದ್ದೆ. ನಮ್ಮ ಸುತ್ತುವರಿದು ಒಂದು ವಿಶಿಷ್ಟ ಪರಿಸ್ಥಿತಿ ನಿರ್ಮಾಣವಾಗಿದೆ ಯೆಂದಾಗ ಅದನ್ನು ಕುರಿತು ಒಂದು ಸುಂದರ ಕಲ್ಪನೆಯನ್ನು ನಿರ್ಮಿಸುವುದು—ಜಗತ್ತಿನ ಬಗ್ಗೆ ಒಂದಿಷ್ಟೂ ಯೋಚಿಸುವಂತಿಲ್ಲ—ನನ್ನ ಪ್ರವೃತ್ತಿ ಇತ್ತೀಚೆ ಹೀಗೆ ರೂಪುಗೊಂಡಿತ್ತು.

ಇದಕ್ಕನುಸಾರವಾಗಿ ನಾನೊಂದು ಕಲ್ಪನಾ ರಾಜ್ಯ ನಿರ್ಮಿಸಿಕೊಂಡೆ. ಈ ವರೆಗಾದ ಭಾವ- ಬಿದಿಗೆಗಳಲ್ಲಿ ಇಂದಿನದೇ ನನಗೆ ಮಜಾ ಎನಿ ಸಿದ್ದು.

ಒಂದು ಬಾನಿಯಲ್ಲಿ ನಾವು ಒಂದು ಹೂ ಗಿಡ ವನ್ನು ಹಚ್ಚಬೇಕಾದರೆ ಆ ಬಾನಿಯ ತಳಕ್ಕೆ ಒಂದು ಚಿಕ್ಕ ರಂಧ್ರ ಮಾಡುತ್ತೇವೆ. ಆಮೇಲೆ ಅದರಲ್ಲಿ ಮಣ್ಣು ತುಂಬಿ ಹೂ ಗಿಡ ಹಚ್ಚು ತ್ತೇವೆ. ಗಟ್ಟಿಯಾಗಿದ್ದ ಬಾನಿಗೆ ರಂಧ್ರ ಮಾ- ಡುವ ಕಾರಣವಾದರೂ ಏನು? ನಮ್ಮ ಮನೋ ಭಾವನೆಯ ಬಾನಿಗೂ ಹೀಗೇ ಛಿದ್ರವಿರಬೇಕು- ಎನ್ನಿಸುತ್ತದೆ, ನನಗೆ. ಎಂದರೇ ನಮ್ಮ ಪ್ರಕೃತಿಗೆ ಆಗಿಬರುತ್ತದೆ. ಇಷ್ಟೆಲ್ಲ ಸುಖ-ದುಃಖದ ಬಿಸು ಪನ್ನು ಸ್ಥಾಯಿಯಾಗಿಟ್ಟು ಉಳಿದದ್ದು ಈ ಛಿದ್ರ ದ್ವಾರದಿಂದ ಹರಿದುಹೋಗುವುದಲ್ಲದೆ ನಮ್ಮ ಮನಸ್ಸಿನ ಗಿಡ ಪ್ರಫುಲ್ಲಿತವಾಗಿ ಉಳಿಯು ವುದು. ಸುಭಗ ಆಚಾರ-ವಿಚಾರಗಳ ಹೂವಾ ಗುವುದು—ಅದಕ್ಕೆ.

ನಾನು ಸ್ನಾನಕ್ಕೆ ಕುಳಿತೆ. ನನ್ನ ತಂಗಿ ನೀರೆರೆ ಯುತ್ತಿದ್ದಳು. ಅಂದು ನನ್ನ ಮನೆಯಲ್ಲಿ ನೀರು ಮಾತ್ರ ಸಮೃದ್ಧವಾಗಿತ್ತು. ಎರಡು ಮೂರು ಬಕೆಟು ನೀರನ್ನು ನನಗಾಗಿ ಕಾಯಿಸಲಾಗಿತ್ತು. ಒಂದು ತಪ್ಪೇಲಿಯಿಂದ ನನ್ನ ತಂಗಿ ನನ್ನ ಮೇಲೆ ನೀರು ಹಾಕುತ್ತಿದ್ದಳು.

ತಂಗಿ ಬೆನ್ನು ತಿಕ್ಕತೊಡಗಿದಳು. ಆ ಹಸ್ತ ಸ್ಪರ್ಶದೆದುರು 'ವಾಯಿಟ್ ರೋಜ್' 'ವಿನೋ ಲಿಯಾ' 'ಖಸ್' 'ಚಂದನ' ಮುಂತಾದ ಸಬ ಕಾರಗಳೆಲ್ಲ ರದ್ದು!

ಸ್ನಾನವಾಯಿತು. ಪದಾರ್ಥ ತೀರಾ ಸ್ವಲ್ಪವಾ ಗಿದ್ದರೆ ನಾವದಕ್ಕೆ ದೇವರ ಪ್ರಸಾದವೆನ್ನುತ್ತೇವೆ. ಅಂದು ನಾನಾದರೂ ದೈವೀ ವೃತ್ತಿಯ ಹರಟೆ ಕೊಚ್ಚುತ್ತಿದ್ದೆ. ಅಂತೇ ಪ್ರಸಾದದಷ್ಟು 'ಶಿರಾ' ನನಗೆ ದೊರೆಯಿತು. ಅದನ್ನು ತಿಂದು, ದೊಡ್ಡ ದಾಗಿ ಒಣ ತೇಗು ತೇಗಿ ನಾನು ನನ್ನ ಕೋಣೆಗೆ ಬಂದೆ.

"ಅಣ್ಣಾ, ನಾನಿನ್ನು ಹೋಗುತ್ತೇನೆ. ಸಂಜೆಗೆ ಆರತಿಗೆ ಬರುವವಳಿನ್ನು."

'ಆಗಲಿ' ಎಂದೆ. ತಂಗಿ ಹೊರಟುಹೋದಳು. ನಾನು ಸಂಜೆಯ ದಾರಿ ನೋಡುತ್ತ ಕುಳಿತೆ. ನಾನು ಕಾಯಲಿ, ಬಿಡಲಿ—ಸಂಜೆಯಾಗಿಯೇ ಆಗುತ್ತದೆ. ಆದರೆ ನಾನು—

ಸಂಜೆಯಾಯಿತು. ನನ್ನ ಮನೆಯ ಬರಿದಾದ ಮೈದಾನದಲ್ಲಿ ಅನ್ನಪೂರ್ಣೆ-ನನ್ನ ತಂಗಿ-ಬಂದು ಅಡಿಗೆ ಸಿದ್ಧಪಡಿಸಿ ಅವ್ವನಿಗೆಂದಳು: "ಮೊದಲು ಆರತಿಯಲ್ಲವೇನವ್ವಾ?"

"ಹುಂ."

"ಅಣ್ಣಾ, ಏಳಲ್ಲ. ಮಣೆಯ ಮೇಲೆ ಕೂಡು."

ಆರತಿಯ ಸಿದ್ಧತೆಯಾಯಿತು.

ವ್ಯವಹಾರದಲ್ಲಿ ನಾಚಿಕೆ ಇರಲಿಕ್ಕಿಲ್ಲ. ಆದರೆ ಅಂತಃಕರಣದಲ್ಲಿ ನಾಚಿಕೆ ಹೇಗೆ ಇಲ್ಲದಾ- ದೀತು?

ತಂಗಿ ಆರತಿಗೆಂದು ಕರೆದಾಗ ಅಂತಃಕರಣದ




Kruschen S
containing the Active Principles of the
FOR USE
ACTIVE INGREDIENTS
NICHOLAS OF INDIA LTD
KRUSCHEN SALTS Trade Mark

ಅಶ್ರುಧಾರೆ ತನ್ನಂತೆ ನನ್ನ ಕಣ್ಣಿನಿಂದ ಚಿಮ್ಮಿ ಬಂತು. ಮತ್ತದೇ ಕಾಣಿಕೆ ಹಿಡಿದುಕೊಂಡು ನಾನು ಮಣೆಯ ಮೇಲೆ ಬಂದು ಕುಳಿತೆ. ಮತ್ತೆ ಸೋತ ಸ್ವರದಲ್ಲಿ ಅವ್ವನಿಗೆಂದೆ: "ಅವ್ವ, ನಮ್ಮದೇ ಆದೊಂದು ಅಡಿಕೆಯ ಬೆಟ್ಟ ನಮ್ಮ ಮನೆಯಲ್ಲಿದ್ದರೆ ನೋಡಲ್ಲ!"

ಅವ್ವ ಎದ್ದಳು. ಒಂದೆರಡು ಡಬ್ಬಿ ತಡಕಾಡಿದಳು. ಎಲ್ಲೋ ಒಂದು ಸಗಡ-ಬಗಡ ಡಬ್ಬಿಯಿತ್ತು. ಅದನ್ನು ತೆರೆದು ನೋಡಿದರೆ ಅದರಲ್ಲಿ ಒಂದೇ ಒಂದು ಅಡಿಕೆ ಬೆಟ್ಟ ಸಿಕ್ಕಿತು. "ಹಾಂ- ತಗೋ ಇದನ್ನು" ಎಂದು ಅವ್ವ ಅದನ್ನು ಅಲ್ಲಿಂದಲೇ ತೂರಿದಳು. ಮಣೆಯ ಮೇಲೆ ಕುಳಿತಂತೆಯೇ ನಾನದನ್ನು ಆಟದ ಚಂಡಿನಂತೆ ಹಿಡಿದೆ. ತಂಗಿ ಆರತಿ ಎತ್ತಿದಳು. ನಾನದೇ ಬೆಟ್ಟವನ್ನು ಆರತಿಯಲ್ಲಿ ಹಾಕಿದೆ. ನಮಗೆ—ಅಣ್ಣ-ತಂಗಿಯರಿಗೆ ಉಮ್ಮಳಿಸಿ ಬಂತು. ಆದರೆ ನಾವದೇ ಕಂಬನಿಯನ್ನರಗಿಸಿ ಅದರಿಂದಲೇ ಸಂತಸಬಟ್ಟೆವು.

*

ಹೀಗೇ ಕೆಲದಿನ ಸರಿಯಿತು. ಇತ್ತೀಚೆ ನನಗೆ ಸ್ವಲ್ಪ ಸ್ವಲ್ಪ ವ್ಯವಹಾರಜ್ಞಾನವಾಗತೊಡಗಿತ್ತು. ಅದರಿಂದ ಸಂಪತ್ತಿಯ ತುಂಡು-ತುಣುಕು ನನ್ನ ಮನೆಯಲ್ಲಿ ಸಂಚಿತವಾಗತೊಡಗಿತ್ತು.

ಈ ಮಾತಿಗೆ ಒಂಬತ್ತು-ಹತ್ತು ತಿಂಗಳಾಯಿತು. ನಾವೀಗ ಸುಖದಿಂದ ಹೊಟ್ಟೆತುಂಬ ಊಟ ಮಾಡುತ್ತಿದ್ದೇವೆ. ನಮ್ಮ ತಂಗಿಯರನ್ನು ಈಗ ತವರಿಗೆ ಕರೆತರಬೇಕು—ಎನಿಸಿತು—ನನಗೆ.

ಅಂತೇ ಪರ ಊರಿನ ತಂಗಿಗೆ ಪತ್ರ ಬರೆದೆ. ಮರುಟಪಾಲಿಗೆ ಉತ್ತರ ಬರುವಂತೆ ಅವಳು ತನ್ನ ಮಗನೊಡನೆ ಬಂದುಬಿಟ್ಟಳು. ಮತ್ತೆ ಪುಣೆಯಲ್ಲಿರುವ ತಂಗಿ ಬಾಣಂತಿತನಕ್ಕೆಂದು ನಮ್ಮಲ್ಲಿ ಬಂದಿದ್ದಳು. ಒಂದೆರಡು ವಾರಗಳಲ್ಲಿ ಅವಳು ಹಡೆದಳು. ಅವಳಿಗೆ ಗಂಡು ಮಗುವಾಗಿತ್ತು. ಅಂದವನ ನಾಮಕರಣವಿತ್ತು. ಅಡಿಗೆ ಎಲ್ಲಾ ಆಗಿತ್ತು. ಆದರೆ ಕೇಶರ ತರುವುದೊಂದು ಉಳಿದುಬಿಟ್ಟಿತ್ತು. "ಭಾವೂ, ಕೇಶರ ತರುವಿಯಾ?" ಎಂದಳು ಅವ್ವ.

ಇದನ್ನು ಕೇಳುತ್ತಿದ್ದ ತಂಗಿ, "ಈಗೇಕೆ ಅವನನ್ನು ಬಿಸಿಲಲ್ಲಿ ಕಳಿಸುವಿ" ಹೀಗೆಂದು ಟ್ರಂಕಿನ ಕೀಲಿ ಕೈ ನನ್ನೆದುರು ಚೆಲ್ಲಿದಳು. ನಾನು ತಂಗಿಯ ಟ್ರಂಕು ತೆರೆದೆ. ಕೇಶರದ ಡಬ್ಬಿಯಂತೂ ನನಗೆ ಸಿಕ್ಕಿತು. ಆದರೆ ಅದರ ಹತ್ತಿರವೇ ಒಂದು ಮಖಮಲ್ಲಿನ ಡಬ್ಬಿ ಇತ್ತು. 'ಇದೇನು ಕಾರಭಾರ?' ಎಂದು ತಂಗಿಯನ್ನು ಕೇಳಬೇಕೆಂದು ಅದನ್ನು ಹಿಡಿದುಕೊಂಡು ನಾನವಳ ಬಳಿಗೆ ಹೋಗಿ "ಮಾಯೀ, ಏನಿದೆಯೇ ಈ ಡಬ್ಬಿಯಲ್ಲಿ?" ಎಂದು ವಿಚಾರಿಸಿದೆ.

ಏನೊಂದು ಕಲ್ಪನೆಯೂ ಇಲ್ಲದೆ ನಾಟಕದಲ್ಲಿ ಒಮ್ಮೆಲೆ ಟ್ರಾನ್ಸಫರ್ ಸೀನ್ ಬಂದಂತಾಯಿತು.

ನನ್ನ ತಂಗಿ ಚಟ್ಟನೆ ಹೊರಸಿನ ಮೇಲಿಂದ ಎದ್ದು ನನ್ನ ಕೈಯಿಂದ ಆ ಡಬ್ಬಿಯನ್ನು ಕಸಿದುಕೊಳ್ಳಲೆಳಸಿದಳು. ಮತ್ತೆ, "ನಿನಗೇಕೆ ಬೇಕೋ- ಅದೆಲ್ಲಾ? ಅದರಲ್ಲಿ ನಮ್ಮದೊಂದು ಗುಟ್ಟು ಇದೆ" ಎಂದು ಬಡಬಡಿಸುತ್ತ ನನ್ನ ಕೈಯಿಂದ ಕಸಿದುಕೊಂಡು ಅವ್ವನ ಕಡೆಗೆ ಹೊರಳಿ, "ಅವ್ವ ನೋಡೇ" ಎಂದಳು.

ಅವ್ವ ಈ ಮೋಜನ್ನು ನೋಡುತ್ತಲೇ ಇದ್ದಳು. ನಾನು ಆ ಗುದುಮುರಿಗೆಯಲ್ಲಿ ಪಟ್ಟನೆ ಆ ಡಬ್ಬಿಯನ್ನು ತೆರೆದು ನೋಡಿದೆ. ಅದರಲ್ಲೇನಿದೆ? ಒಂದು ಅಡಿಕೆ ಬೆಟ್ಟ! "ಇದೇನೇ ಮಾಯೀ, ಇದೇ ಏನು ನಿನ್ನ ಗುಟ್ಟು? ಮತ್ತೆ ನಾನು ಈ ಅಡಿಕೆ ಬೆಟ್ಟವನ್ನು ನೋಡಬಾರದೆಂದು ನೀನು ನನ್ನ ಮೈಮೇಲೆ ಏರಿ ಬಂದಿದ್ದೆ? ಎಂಥಾ ಅಡಿಕೆ ಬೆಟ್ಟವಿದು?"

ನಾಚಿಕೆಯಿಂದ ನೆಲವನ್ನೂ ಅವ್ವನನ್ನೂ ನೋಡುತ್ತ ಮಾಯಿಯೆಂದಳು: "ಭಾವಬಿದಿಗೆಯ ಆರತಿಯದು!"

ಕಾಜಿಗೆ ಪಾರಜ ಹಚ್ಚಿದರೆ ಅದು ಕನ್ನಡಿಯಾಗುತ್ತದೆ. ಅದರಲ್ಲಿ ನಮ್ಮ ಮುಖ ಕಾಣು

ತ್ತದೆ. ಆದರೆ ಆ ಪಾರಜ ಕೆದರಿ ತೆಗೆದರೆ ಆ ಕಾಜಿನಲ್ಲಿ ಕಾಣುವುದೇನು? ಆನಪಾರ! ಅದರಲ್ಲಿ ನಾವು ನಮ್ಮ ಮುಖ ನೋಡಲೆತ್ನಿಸಿದರೆ ತೀರ ಮಸಕುಮಸುಕಾಗಿ ಕಾಣುತ್ತದೆ. ಕಳೆದ ಭಾವ ಬಿದಿಗೆಯ ಆರತಿಯಲ್ಲಿ ಹಾಕಿದ 'ಅಡಿಕೆ ಬೆಟ್ಟ' ಎಂದು ತಿಳಿದಾಗ ನನಗೆ ಆಘಾತವೇ ಆದಂತಾಯಿತು. ಹಾಗೇ ಸಾವರಿಸಿಕೊಳ್ಳುತ್ತಿರುವಾಗ ಕಾಜು, ಪಾರಜ, ಕನ್ನಡಿ ಮುಂತಾದ ವಿಚಾರಗಳು ನನ್ನ ಮನದೆದುರು ಸುಳಿದವು. ಇದರ ಅರ್ಥವೇನೋ ಪರಮೇಶ್ವರನೇ ಬಲ್ಲ. "ಭಾವ ಬಿದಿಗೆಯ ಅಡಿಕೆ! ಯಾಕೆ ಇದನ್ನಿಷ್ಟು ಜಪ್ಪಿಸಿ ಇಟ್ಟಿರುವೆಯೆ?" ಎಂದೆ. ಸೆರಗಿನಿಂದ ಕಣ್ಣೊರೆಸುತ್ತ "ಅದನ್ನು ನೋಡಿದರೇ ನನಗೆ ಆನಂದವಾಗುತ್ತದೆ. ಅದು ನನ್ನ ಜೀವಭಾವದ ಸಮಾಧಾನದ ಸಂಕೇತವಾಗಿದೆ! ನನ್ನ ತವರಿನ ಸುಖ ಆ ಅಡಿಕೆ ಬೆಟ್ಟದಲ್ಲಿ ತುಂಬಿಬಂದಂತೆನಿಸುತ್ತದೆ—ನನಗೆ" ಎಂದು ಮಾಯೀ ಅನ್ನುತ್ತಿರುವಾಗಲೇ ಪರ ಊರಿನ ನಮ್ಮ ತಂಗಮ್ಮನವರು ಅಲ್ಲಿಂದ ಹೊರಬಿದ್ದರು. ಅವರೂ ತಮ್ಮ ಕೈಯಲ್ಲೊಂದು ಅಡಿಕೆ ಬೆಟ್ಟ ಹಿಡಿದುಕೊಂಡು ಬಂದು, "ಅಣ್ಣ, ನಿಜವಾಗಿಯೂ ಹೀಗೇಕಾಗುವುದೋ ಯಾರಿಗೆ ಗೊತ್ತು? ಇದನ್ನು ನೋಡಿದೆಯಲ್ಲ? ನನ್ನ ಮಧೂ ಚೇಷ್ಟೆಯಿಂದ ಈ ಬೆಟ್ಟವನ್ನು ನನ್ನ ಆರತಿ ತಟ್ಟೆಯಲ್ಲಿ ಹಾಕಿ, ಲುಚ್ಚ್ಯಾ ಏನೆಂದನೆನ್ನುತ್ತೀ—'ಅವ್ವ, ಮಾಮಾ ಇಲ್ಲಿಲ್ಲ. ನಾನು ನಿನಗೆ ಆರತಿಯ ಕಾಣಿಕೆ ಹಾಕುತ್ತೇನೆ—' ಎಂದು ಈ ಅಡಿಕೆ ಬೆಟ್ಟವನ್ನು ಆರತಿಯ ತಟ್ಟೆಯಲ್ಲಿ ಹಾಕಿದ. ನನಗೆ ಆಶ್ಚರ್ಯವೆನಿಸಿ ಈ ಬೆಟ್ಟವನ್ನು ಹಾಗೇ ಜಪ್ಪಿಸಿ ಇಟ್ಟುಕೊಂಡಿದ್ದೇನೆ!"

ಸಣ್ಣ ಮಕ್ಕಳಿಗೆ ಯಾವುದಾದರೊಂದು ಮಾತು ಹೇಳಿದಾಗ ಒಡನೆಯೇ ಆ ಮಾತಿನ ತಾತ್ಪರ್ಯವನ್ನು ನಾವು ತಿಳಿಸಿಹೇಳುತ್ತೇವಲ್ಲವೆ! ಆ ರೀತಿಯಿಂದ ನಾನು ನನ್ನ ಪ್ರವಚನವನ್ನಾರಂಭಿಸಿದೆ. "ಮಾಯೀ—ಸೋನೂ ಆನಂದ-ಗಮ್ಮತ್ತು ಮೋಜಿನದು! ಎಲ್ಲಾ ಸುಖ-ದುಃಖಗಳ ರುಚಿ ಈ ಅಡಿಕೆಯ ಬೆಟ್ಟದಂತೆಯೇ. ಆದರೆ ಭಾವನೆಯ ಆರ್ದ್ರತೆ ಮಾತ್ರ ಇರಬೇಕು. ನಾವು ಪೂಜೆ ಮಾಡುವಾಗ, ಲಗ್ನ ಸಮಾರಂಭಗಳಲ್ಲಿ ದೇವತೆಗಳ ಆವಾಹನೆ ಮಾಡುವುದು ಈ ಅಡಿಕೆಬೆಟ್ಟದ ರೂಪದಿಂದಲ್ಲವೆ?..."

ಮುಂದೆ ನನಗೆ ಶಬ್ದಗಳೇ ಮರೆತುಹೋದವು.

ಕೊರಳ ಶಿರ ಉಬ್ಬಿಬಂತು. ತಂಗಿಯರ ಕಣ್ಣುಗಳಲ್ಲಿಯೂ ಕಂಬನಿಯ ಹೊಳೆಯೇ ತುಂಬಿತ್ತು. ನಾನು ಮತ್ತೆ ಮಾತನಾಡಲೆತ್ನಿಸಿದೆ. ಆದರೆ 'ಏನು-ಏನು-ಏನು' ಇದರ ಆಚೆಗೆ ನಾಲಗೆ ಹೊರಳಲೇ ಇಲ್ಲ. ಕೊನೆಗೆ ಬಿಕ್ಕಳಿಕೆ ನುಂಗುತ್ತ ನಾನೆಂದೆ: "ತಂಗಿಯರೆ, ಈ ಅಡಿಕೆಬೆಟ್ಟದಲ್ಲಿ ನೀವು ಸುಖ ಕಾಣಬಲ್ಲಿರಿ. ನಿಮ್ಮ ಪ್ರೀತಿಯನ್ನು ಏನೆಂದು ಬಣ್ಣಿಸಲಿ? ನಿಮ್ಮ ಅಣ್ಣನಾಗಿರುವ ನಾನೇ ಧನ್ಯ! ಮುದ್ದು ಮಕ್ಕಳೆ, ಹೀಗೆ ಆನಂದದಲ್ಲಿ ನರ್ತಿಸುತ್ತಲಿರಿ. ಸುಖದ ಸಾರಸರ್ವಸ್ವವನ್ನೂ ಅಡಿಕೆಬೆಟ್ಟದಲ್ಲಿ ಕಾಣುವುದೆಂದರೆ ಬಹಳ ಉದಾರವಾದ ಉದಾತ್ತವಾದ ಮಾತು!"

ನಾನು ನನ್ನ ಮಾತು ಮುಗಿಸಿದೆ. ಯಾಕೆಂದರೆ ಆ ಪ್ರೀತಿಯ ಪ್ರಸಂಗದಿಂದ ಅವರ ಅಂತಃಕರಣ ತುಂಬಿಬಂದಿತ್ತು.

ಹೀಗೆ ತುಂಬಿಬಂದ ಸ್ಥಿತಿಯಲ್ಲಿ ಎಷ್ಟೋ ಸಮಯ ಸರಿದುಹೋಯಿತು. ಯಾರೂ ಚಲಿಸಲಿಲ್ಲ. ಕೊನೆಗೆ ಹೊರಸಿನ ಮೇಲಿನ ಸಾರಂಗಿ ಬಾರಿಸತೊಡಗಿತೆಂದು ಮಾಯಿ ಓಡಿದಳು. ತನ್ನ ಮಗುವನ್ನೆತ್ತಿಕೊಂಡು ಅದಕ್ಕೆ ಹಾಲುಣ್ಣಿಸುತ್ತ ನನ್ನೆಡೆಗೇ ನೋಡುತ್ತಿದ್ದಳು.

ಇಂಥ ಮಾಯಾ ಪ್ರವಾಹ ನನ್ನನ್ನು ಸುತ್ತುವರಿದಿರುವಾಗ 'ನಾನು ಸುಖಿಯಲ್ಲ' ಎಂದೆನ್ನುವುದರಲ್ಲಿ ಏನರ್ಥವಿದೆ?

*



ಇವರು ತಕ್ಕ ಶಾಸ್ತ್ರಿಯಲ್ಲ, ನಿಜವಾಗಿ ವೇದಪಾರಂಗತರು

# ನಾನು, ಸಿನಿಮಾ ಶಾಸ್ತ್ರಿ...

ಮೂಲ: ಸುಬ್ರಹ್ಮಣ್ಯ ಶಾಸ್ತ್ರಿ
ಅನುವಾದ: ಶೇಷನಾರಾಯಣ

ನೂರಾರು ಇನ್ನೂರಕ್ಕೂ ಮೇಲ್ಪಟ್ಟ ಚಲನ ಚಿತ್ರಗಳಲ್ಲಿ ನಾನು ಶಾಸ್ತ್ರಿಯಾಗಿ ಅಭಿನಯಿಸಿದ್ದೇನೆ. ಒಡನೆ ನನ್ನನ್ನು ನೀವು 'ಸಿನಿಮಾ ಶಾಸ್ತ್ರಿ' ಎನ್ನುತ್ತೀರಿ ಅಲ್ಲವೆ?

ಆದರೆ ಸತ್ಯ ಸಂಗತಿ ಹಾಗಿಲ್ಲ.

ನಾನು ಸಿನಿಮಾ ಶಾಸ್ತ್ರಿ ಮಾತ್ರ ಅಲ್ಲ. ನಿಜಕ್ಕೂ ನಾನು ಒಬ್ಬ ಪುರೋಹಿತನೇ. ಕ್ರಮದಂತೆ ಶಾಸ್ತ್ರಾಧ್ಯಯನವನ್ನು ಮಾಡಿದ್ದೇನೆ; ಸಂಸ್ಕೃತವನ್ನು ಕಲಿತಿದ್ದೇನೆ; ವೇದಾಗಮಗಳಲ್ಲಿ ಪ್ರಾವೀಣ್ಯವನ್ನು ಪಡೆದಿದ್ದೇನೆ.

ನಮ್ಮ ಪೂರ್ವಿಕರು ಆಂಧ್ರ ಪ್ರದೇಶದ ಕಾಕಿನಾಡಿನವರು. ನಮ್ಮ ಅಜ್ಜ ತಾಯ್ನೆಲವನ್ನು ತೊರೆದು ಬಂದು ಮದರಾಸಿಗೆ ಸಮೀಪದಲ್ಲಿರುವ ಚೆಂಗಲ್ಪಟ್ಟು ಜಿಲ್ಲೆಯ ಕುಮಾರವಾಡಿಯಲ್ಲಿ ನೆಲಸಿದರು.

ನನ್ನ ಶಾಲೆಯ ವಿದ್ಯಾಭ್ಯಾಸ ಸ್ವಲ್ಪವೇ. ಸೈದಾಪೇಟೆಯ ಶಾಲೆಯಲ್ಲಿ ಐದನೆಯ ತರಗತಿಯ ವರೆಗೆ ಮಾತ್ರ ನಾನು ಓದಿದೆ. ಆದರೆ ನನ್ನ ತಂದೆಯವರು ನಾನು ಮೂರು ವರ್ಷದ ಬಾಲಕನಾಗಿದ್ದಾಗಲೆ ವೇದವನ್ನು ಹೇಳಿಕೊಡಲು ಪ್ರಾರಂಭಿಸಿದ್ದರು. ಮುಂದೆ ತಿರುಮೈಲಾರು ಘನಪಾಠಿಗಳ ಶಿಷ್ಯನಾಗಿ, ತಿರುಕ್ಕಳುಕುನ್ರಂನಲ್ಲಿ ನನ್ನ ಓದನ್ನು ಮುಗಿಸಿದೆ; ಶಾಸ್ತ್ರಗಳ ಎಲ್ಲ ಪರಿಚಯವನ್ನೂ ಪಡೆದೆ.

ರಾಷ್ಟ್ರಪತಿ ಡಾ. ರಾಧಾಕೃಷ್ಣನ್, ಆಂಧ್ರದ ಮುಖ್ಯಮಂತ್ರಿ ಸಂಜೀವ ರೆಡ್ಡಿ, ವಿ. ವಿ. ಗಿರಿ, ನ್ಯಾಯಮೂರ್ತಿ ಪಿ. ವಿ. ರಾಜಮನ್ನಾರ್, ರಾಜಾಜಿ ಮುಂತಾದ ಪ್ರಮುಖರ ಮನೆ ಪುರೋಹಿತ ನಾನೇ. ಪರಂಪರೆಯಾಗಿ ನಮ್ಮ ವಂಶಜರು ಈ ಹಿರಿಯರ ಮನೆಗಳಲ್ಲಿ ವೃತ್ತಿಯನ್ನು ಕೈಕೊಂಡಿದ್ದರು. ನಾನೂ ಅದನ್ನು ಮುಂದುವರಿಸಿಕೊಂಡು ಬಂದಿದ್ದೇನೆ. ಅವರ ಮನೆಗಳಲ್ಲಿ ನಡೆಯುವ ಯಾವುದೆ ಶುಭ-ಅಶುಭ ಕೆಲಸ ಕಾರ್ಯಗಳಲ್ಲೂ ನಾನು ಭಾಗ ವಹಿಸುತ್ತೇನೆ

ಪ್ರಮುಖರು ಹೇಗೊ ಹಾಗೆ ಕೆಲವು ಸಿನಿಮಾ ನಕ್ಷತ್ರಗಳ ಮನೆಗಳಿಗೂ ನಾನೇ ಪುರೋಹಿತ. ಅವರಲ್ಲಿ ಮುಖ್ಯರಾದವರು ಭಾನುಮತಿ, ಅಂಜಲಿ ದೇವಿ, ಕನ್ನಾಂಬ, ಸಾವಿತ್ರಿ, ರಂಗರಾವ್, ರೇಲಂಗಿ, ಚಿತ್ತೂರು ನಾಗಯ್ಯ, ರಾಮರಾವ್ ಮುಂತಾದವರು. ಇವರಲ್ಲಿ ಕೆಲವರ ಒತ್ತಾಯ

ದಿಂದಲೆ ನಾನು ಸಿನಿಮಾರಂಗವನ್ನು ಪ್ರವೇಶಿಸಿದೆ. 'ಸಿನಿಮಾ ಶಾಸ್ತ್ರಿ' ಎನ್ನಿಸಿಕೊಂಡೆ.

ಮೂಕಚಿತ್ರಗಳ ಕಾಲದಿಂದಲೂ ನಾನು ಸಿನಿಮಾದಲ್ಲಿ ಅಭಿನಯಿಸುತ್ತ ಬಂದಿದ್ದೇನೆ. ತಮಿಳು, ತೆಲುಗು, ಕನ್ನಡ ಎಲ್ಲ ಸೇರಿ ಇನ್ನೂರಕ್ಕೂ ಮಿಗಿಲಾದ ಚಿತ್ರಗಳಲ್ಲಿ ನಾನು ಶಾಸ್ತ್ರಿಯಾಗಿದ್ದೇನೆ.

ನಾನು ಪ್ರಪ್ರಥಮವಾಗಿ ಅಭಿನಯಿಸಿದ ವಾಕ್ಚಿತ್ರ ಖ್ಯಾತ ನಟ ಚಿತ್ತೂರು ನಾಗಯ್ಯನವರು ಜಯಭೇರಿ ಹೊಡೆದ "ತ್ಯಾಗಯ್ಯ" ಆ ಚಿತ್ರದಲ್ಲಿ ಅಭಿನಯಿಸುವಾಗ ನಾನು ದೀರ್ಘವಾಗಿ ಆಲೋಚಿಸಬೇಕಾಯಿತು. ಕಾರಣ ಅದಕ್ಕೆ ಮೊದಲು ಮುಂಬಯಿಯಲ್ಲಿ ತಯಾರಾದ "ತ್ಯಾಗಯ್ಯ" ಎನ್ನುವ ಚಿತ್ರ ಅನೇಕರ ಅವಹೇಳನಕ್ಕೆ ಈಡಾಗಿತ್ತು. ನಾನು ಅನೇಕ ಹಿರಿಯರನ್ನು ಸಂಧಿಸಿ ಈ ಬಗ್ಗೆ ಪ್ರಸ್ತಾಪ ಮಾಡಿದೆ. ಎಲ್ಲರ ಅವಹೇಳನಕ್ಕೆ ಈಡಾಗಿದ್ದ ತ್ಯಾಗಯ್ಯ ಚಿತ್ರದಲ್ಲಿ ಅಭಿನಯಿಸಿದ ಕುಂಭಕೋಣದ ಶಾಸ್ತ್ರಿಗಳೊಬ್ಬರು ಹಿಂದೂ ಧರ್ಮದ ನಿಂದನೆಯನ್ನು ಮಾಡಿದ್ದರು. ಆದುದರಿಂದ ಭಯಪಡಲು ಕಾರಣವಿಲ್ಲ, ಚಿತ್ರದಲ್ಲಿ ಅಭಿನಯಿಸಲು ಹೆದರಬೇಕಾದುದೇನೂ ಇಲ್ಲ ಎಂದು ಹಲವರು ನನ್ನ ಬೆನ್ನು ತಟ್ಟಿದರು.

"ಸುಲಗ್ನಾ ಸಾವಧಾನಾ" ಎನ್ನುವ ಮಂತ್ರವನ್ನು ಸಿನಿಮಾಗಳಲ್ಲಿ ಹೇಳಬಹುದೆ ಎನ್ನುವ ಪ್ರಬಲವಾದ ಸಂದೇಹ ಮೊದಲಲ್ಲಿ ನನಗೆ ತಲೆದೋರಿತು. ಹಲವರಲ್ಲಿ ಈ ಬಗ್ಗೆ ಚರ್ಚಿಸಿದೆ. ಲಗ್ನದ ಸಮಯದಲ್ಲಿ ಉಚ್ಚರಿಸುವುದಕ್ಕೂ ಸಿನಿಮಾಗಳಲ್ಲಿ ಹೇಳುವುದಕ್ಕೂ ಅರ್ಥಾತ್ ಒಂದಕ್ಕೊಂದು ಸಂಬಂಧವೇ ಇಲ್ಲ ಎನ್ನುವ ತೀರ್ಮಾನವಾಯಿತು. ವಿವಾಹದಲ್ಲಾದರೆ ಪ್ರಾಣಪ್ರತಿಷ್ಠೆ ಮಾಡಿಯಲ್ಲವೆ ವಿಧಿಯನ್ನು ಕೈಗೊಳ್ಳುತ್ತೇವೆ! ಈಗ ಹಾಗಲ್ಲ ಏನೂ ಇಲ್ಲದೆ ಸುಮ್ಮಸುಮ್ಮನೇ ಮಣ ಮಣ ಮಣ ಎಂದು ಮಂತ್ರವನ್ನು ಪಠಿಸಿದರೆ ಅದರಲ್ಲಿ ಕುಂದು ಹೇಗೆ ಕಂಡೀತು!

ರಾಜಾಜಿಯವರಲ್ಲಿ ನನಗೆ ತುಂಬ ಗೌರವ; ಭಕ್ತಿ. ಕಳೆದ ಚುನಾವಣೆಯಲ್ಲಿ ಸ್ವತಂತ್ರ ಪಾರ್ಟಿಯ ಸಲುವಾಗಿ ನಾನೂ ಕೆಲಸ ಮಾಡಿದ್ದೇನೆ.

ಸಾಮಾನ್ಯವಾಗಿ ಹೊರನಾಡಿನಿಂದ ಮದರಾಸಿಗೆ ಬರುವ ಪ್ರಮುಖರನ್ನು ಪೂರ್ಣಕುಂಭದೊಡನೆ ಸ್ವಾಗತಿಸಲು ನನಗೇ ಅಗ್ರಸ್ಥಾನ.

ಮದರಾಸಿನಲ್ಲಿ ಸಿನಿಮಾ ರಂಗದಲ್ಲಿರುವವರಿಗೆಲ್ಲ ನನ್ನ ಪೂರ್ಣ ಪರಿಚಯವಿದ್ದೇ ಇದೆ. ಕೆಲವರಿಗಂತೂ ನನ್ನನ್ನು ಕಂಡರೆ ತುಂಬ ಗೌರವ. ಪಿ. ಯು. ಚಿನ್ನಪ್ಪ-ಕನ್ನಾಂಬ ಜೋಡಿಯಾಗಿ ನಟಿಸಿದ "ಹರಿಶ್ಚಂದ್ರ" ಚಿತ್ರಪಟದಲ್ಲಿ, ಹರಿಶ್ಚಂದ್ರನ ಮಂತ್ರಿಯಾಗಿ ಚಿತ್ರರಂಗವನ್ನು ಪ್ರವೇಶಿಸಿದ ಎಮ್. ಜಿ. ರಾಮಚಂದ್ರನ್ ಈಗಲೂ ನನ್ನನ್ನು ಎಲ್ಲಿ ನೋಡಿದರೂ ನನಗೆ ತಲೆಬಾಗಿ ನಮಸ್ಕರಿಸುತ್ತಾರೆ.

ಕೆಲವು ಸಿನಿಮಾ ನಟನಟಿಯರು ಆಚಾರ-ವಿಚಾರದಲ್ಲಿ ತುಂಬ ನಿಷ್ಠೆಯುಳ್ಳವರಾಗಿರುತ್ತಾರೆ. ಅವರುಗಳನ್ನು ನೋಡಿ ನನಗೇ ಆಶ್ಚರ್ಯ! ಮುಖ್ಯವಾಗಿ ಭಾನುಮತಿ, ಶಿವಾಜಿ ಗಣೇಶನ್, ಸಾವಿತ್ರಿ, ರಾಮರಾವ್, ನಾಗಯ್ಯ ಮುಂತಾದವರು ಸಂಪ್ರದಾಯದ ಗೆರೆಯನ್ನು ಸ್ವಲ್ಪವೂ ದಾಟುವುದಿಲ್ಲ.

ಕಳೆದ ಫೆಬ್ರುವರಿಯಲ್ಲಿ ಅಷ್ಟಗ್ರಹಗಳು ಒಂದುಗೂಡಿದ್ದಾಗ ಭಾನುಮತಿ ತಮ್ಮ ನಿವಾಸದಲ್ಲಿ ಶಾಂತಿ, ಹೋಮ, ಕೇದಾರೇಶ್ವರನ ಪೂಜೆ ಮುಂತಾದುವನ್ನು ಸಾಂಗೋಪಾಂಗವಾಗಿ ನಡೆಸಿದರು. ಆ ದಿನಗಳಲ್ಲಿ ಅವರು ಪತಿಯೊಡನೆ ಉಪವಾಸ ವ್ರತದಿಂದಿದ್ದು ಶ್ರದ್ಧೆಯಿಂದ ಎಲ್ಲವನ್ನೂ ಮಾಡಿ ಮುಗಿಸಿದರು.

ಸಾಮಾನ್ಯವಾಗಿ ನಾನು ಸಿನಿಮಾಗಳಲ್ಲಿ ಲಗ್ನ ಮಾಡಿಸಿಕೊಡದ ವಧೂವರರೇ ಇಲ್ಲವೆನ್ನಬಹುದು! ಪದ್ಮಿನಿಗೂ ನಾನೇ ವಿವಾಹ ಮಾಡಿಸಿದೆ—"ಪುನರ್ಜನ್ಮ" ಎನ್ನುವ ಚಿತ್ರದಲ್ಲಿ. ಆಗ

ವಿನೋದವಾಗಿ ನಾನು ಅವರೊಂದಿಗೆ "ನಿಜವಾಗಿಯೂ ನಿಮಗೆ ಹೀಗೆ ಬೇಗ ವಿವಾಹ ನಡೆಯಲಿ" ಎಂದಿದ್ದೆ. ಕೆಲವು ತಿಂಗಳುಗಳಲಿ ನನ್ನ ಹರಕೆ ನಡೆದೇಹೋಯಿತಲ್ಲ.

ನಾನು ಶಾಸ್ತ್ರ ಮಾತ್ರ ಅಲ್ಲ ಲಗ್ನಮಂಟಪ, ಯಾಗಶಾಲೆ ಮುಂತಾದವುಗಳ ನಿರ್ಮಾಣ ಕಾರ್ಯದಲ್ಲಿ ಅನೇಕ ದಿಗ್ದರ್ಶಕರು ನನಗೇ ಪೂರ್ಣ ಜವಾಬ್ದಾರಿಯನ್ನು ವಹಿಸುವುದೂ ಉಂಟು. ಆಗ ನಾನು ಪರಿಪುರೋಹಿತರುಗಳ ಸಹಾಯದಿಂದ ಎಲ್ಲವನ್ನೂ ದಕ್ಷತೆಯಿಂದ ಮಾಡಿ ಮುಗಿಸುತ್ತೇನೆ.

ಹಲವು ಚಿತ್ರ ಪಾಲಿಕರು ನನ್ನನ್ನು ಸಂಭಾಷಣೆ ಮಾಡುವಂತೆ-ಹಿನ್ನೆಲೆಯಲ್ಲಿ-- ಕೇಳಿಕೊಂಡದ್ದು ಉಂಟು. ಏನೋ ಒಂದು ಸಂದರ್ಭದಲ್ಲಿ "ಆನ್ನೈಯಿನ್ ಆಣೈ" ಎನ್ನುವ ಚಿತ್ರದಲ್ಲಿ ಮಾತ್ರ ನಾನು ಹಾಗೆ ಮಾಡಿದೆ-ಅಷ್ಟೆ. ಬಳಿಕ ಅದು ನನಗೆ ಸರಿಹೋಗದೆಂದು ಕೈಬಿಟ್ಟೆ. ಅಷ್ಟೇ ಅಲ್ಲ, ನಮ್ಮ ಧರ್ಮ, ಮತ ಮುಂತಾದವುಗಳನ್ನು ಅವಹೇಳನ ಮಾಡುವಂತಹ ಸಂಭವ ಬಂದರೆ ನಾನು ಅದಕ್ಕೆ ಮಣಿಯುವವನೇ ಅಲ್ಲ ಹಾಗೆ ಎಷ್ಟೊ ಸಂದರ್ಭಗಳು ಒದಗಿ ಬಂದಿವೆ. ಆಗ ನಾನು ಅಂತಹ ಚಿತ್ರಗಳಿಗೆ ತಿಲಾಂಜಲಿಯನ್ನಿತ್ತಿದ್ದೇನೆ.

ಕಾಮಕೋಟಿ ಮತ್ತು ಶೃಂಗೇರಿ ಇವರಿಬ್ಬರು ಜಗದ್ಗುರುಗಳಿಗೂ ನಾನು ಪಾದಪೂಜೆ ಮಾಡಿ ಅವರ ಆಶೀರ್ವಾದವನ್ನು ಪಡೆದಿದ್ದೇನೆ. ಶೃಂಗೇರಿ ಸ್ವಾಮಿಗಳು ಮದರಾಸಿನಲ್ಲಿ ನನ್ನನ್ನು ಮುದ್ರಾಧಿಕಾರಿಯಾಗಿ ನಿಯಮಿಸಿದ್ದಾರೆ.

ಕೆಲವು ವರ್ಷಗಳ ಹಿಂದೆ ದಲೈ ಲಾಮಾ ಭಾರತಕ್ಕೆ ಭೆಟ್ಟಿಯಿತ್ತಿದ್ದಾಗ ನವದೆಹಲಿಯಲ್ಲಿ ಬುದ್ಧಜಯಂತಿ ವೈಭವದಿಂದ ನಡೆಯಿತಷ್ಟೆ. ಆಗ ದಕ್ಷಿಣ ಭಾರತದ ವೈದಿಕರ ಪ್ರತಿನಿಧಿಗಳಲ್ಲೊಬ್ಬನಾಗಿ ನಾನೂ ಹೋಗಿದ್ದೆ. ವೇದ ಮತ್ತು ಉಪನಿಷತ್ತಿನ ಮಂತ್ರಗಳನ್ನು ಅವರ ಮುಂದೆ ಪಠಿಸಿ ಅವರಿಂದ ಮೆಚ್ಚುಗೆಯನ್ನೂ ಪಡೆದೆ.

ಬರೇ 'ವೈದಿಕ ಗೂಡ್ಡು' ಎಂದು ನೀವು ನನ್ನನ್ನು ಭಾವಿಸಬೇಡಿ. ನನಗೆ ಮನೆ ಕಟ್ಟುವ-ಎಂಜಿನಿಯರಿಂಗ್-ಕೆಲಸವೂ ಚೆನ್ನಾಗಿ ತಿಳಿದಿದೆ. ಮಾಂಬಲದಲ್ಲಿ ಹೊಸದು ಹೊಸದಾಗಿ ಅನೇಕ ಮನೆಗಳನ್ನು ಎಬ್ಬಿಸಿ ಈ ಕೈಯಿಂದ ಆ ಕೈಗೆ ಆ ಕೈಯಿಂದ ಈ ಕೈಗೆ ಮಾರಾಟ ಮಾಡಿದ್ದೇನೆ. "ನಳಿನಾ ಕಾಥಿ ವರ್ಕ್ಸ್' ಎನ್ನುವುದನ್ನು ಹಲವು ವರ್ಷಗಳು ನಡಸಿ ಅನಂತರ ವಿಕ್ರಯ ಮಾಡಿದೆ. ಈಗ ನಾನು ನನ್ನ ಕುಲವೃತ್ತಿಯೊಂದಿಗೆ ವ್ಯವಸಾಯದಲ್ಲಿ ತುಂಬ ಶ್ರದ್ಧೆಯನ್ನು ವಹಿಸುತ್ತಿದ್ದೇನೆ.

ಸ್ವಂತವಾಗಿ ನನ್ನ ಬಳಿ ವೆಲಾಕ್ಸ್, ಮಾರಿಸ್ ಕಾರುಗಳಿವೆ. ಆದರೆ ನನ್ನ ಕುಲವೃತ್ತಿಗೆ ಹೋಗುವಾಗ ನಾನು ಸೈಕಲ್ಲಿನಲ್ಲಿಯೆ ಹೋಗುತ್ತೇನೆ.

ಕೊನೆಯದಾಗಿ ಒಂದು ಮಾತು. ನನ್ನ ವೃತ್ತಿಯೇ ನನಗೆ ಪ್ರಧಾನವಾದದ್ದು. ಮಿಕ್ಕೆಲ್ಲವೂ ಗೌಣ. ನನ್ನ ವೃತ್ತಿಯಲ್ಲಿ ಸಂಪಾದನೆ, ಲಾಭಾಂಶ ಸ್ವಲ್ಪವೇ ಇರಬಹುದು—ನಿಜ. ಆದರೆ ಮರ್ಯಾದೆ, ಆತ್ಮತೃಪ್ತಿ, ಸಂತೋಷ ಎನ್ನುವುದು ಪೂರ್ಣವಾಗಿ ಇದ್ದೇ ಇದೆ ಎನ್ನುವುದು ನನ್ನ ದೃಢವಾದ ನಂಬುಗೆ. ಇದೇ ಉದ್ದೇಶವನ್ನಿಟ್ಟುಕೊಂಡೇ ನಾನು ಆಂಗ್ಲ ವಿದ್ಯಾಭ್ಯಾಸ ಮಾಡುತ್ತಿರುವ ನನ್ನ ಈರ್ವರು ಪುತ್ರರಿಗೂ ಮನೆಯಲ್ಲಿ ವೇದವನ್ನು ಹೇಳಿಕೊಡುತ್ತಿದ್ದೇನೆ. *

ತಮಿಳು "ಕುಮುದಂ" ನಿಂದ



# ಥೇರಸಾ ರೇಕ್ವಿನ್

ಪ್ಯಾರಿಸಿನ ಒಂದು ಹಳೆಯ ಕಟ್ಟಡದಲ್ಲಿ ಕೆಳಗಿನ ಮಹಡಿಯಲ್ಲಿ ಮದಾಂ ರೇಕ್ವಿನ್‌ಳ ಅಂಗಡಿಯಿದ್ದಿತು. ೨೫ ವರ್ಷಗಳ ಹಿಂದೆಯೇ ಗಂಡನು ತೀರಿಕೊಂಡಿದ್ದನಾದ್ದರಿಂದ ಅವಳೇ ಅದರ ಒಡತಿಯಾಗಿದ್ದಳು. ಸಮೀಪದ ಗಿರಣಿಗಳಿಂದ ಬರುವ ಕೂಲಿಕಾರರೇ ಆ ಅಂಗಡಿಯ ಗಿರಾಕಿಗಳು. ಅವಳ ಮನೆಯೂ ಅಲ್ಲಿಯೇ ಮೇಲಿನ ಮಹಡಿಯಲ್ಲಿ ಇದ್ದಿತು. ಮನೆಯಲ್ಲಿ ಇರುವವರೆಂದರೆ ಕೆಮಿಲ್ ಮತ್ತು ಥೇರಸಾ.

ಕೆಮಿಲ್ ಅವಳ ಒಬ್ಬನೇ ಮಗ; ಜೀವದ ಜೀವ. ಅವನಿಗೆ ಹುಟ್ಟಿದಂದಿನಿಂದಲೂ ಬೇನೆ ತಪ್ಪಿದ್ದಿಲ್ಲ. ಮೃತ್ಯುವಿನ ದವಡೆಯಿಂದ ಆತನನ್ನು ಹಲವು ಸಲ ಸೆಳೆದು ಆಕೆ ಕಾಪಾಡಿಕೊಂಡಿದ್ದಳು. ಮುದ್ದಿನಿಂದ ಬೆಳೆಸಿದ್ದಳು. ಅವನ ಆರೋಗ್ಯವು ಕೆಡಬಹುದೆಂಬ ಹೆದರಿಕೆಯಿಂದಲೇ ಹೆಚ್ಚಿನ ವಿದ್ಯಾಭ್ಯಾಸ ಮಾಡಗೊಡಲಿಲ್ಲ. ಆತ ಕಣ್ಣೆದುರಿಗಿದ್ದರಷ್ಟೇ ಸಾಕು ಎನ್ನುವ ಮನಃಸ್ಥಿತಿ ಅವಳದಾಗಿತ್ತು. ಆದರೆ ಪ್ರಬುದ್ಧನಾದ ಕೆಮಿಲ್ ಮನೆಯಲ್ಲಿ ಸುಮ್ಮನೆ ಹೇಗೆ ಕುಳಿತಾನು? ರೇಲ್ವೆಯಲ್ಲಿ ಒಂದು ಸಣ್ಣ ನೌಕರಿಗೆ ಸೇರಿದನು.

ಥೇರಸಾ ಮದಾಂ ರೇಕ್ವಿನ್‌ಳ ಸಹೋದರನ ಮಗಳು. ಹದಿನಾರು ವರ್ಷಗಳ ಹಿಂದೆ ಒಂದು ದಿನ ಮದಾಂ ರೇಕ್ವಿನ್ ವ್ಯಾಪಾರದಲ್ಲಿ ತೊಡಗಿದ್ದಾಗ ಆಫ್ರಿಕೆಯಿಂದ ಹಠಾತ್ತಾಗಿ ಬಂದ ಆಕೆಯ ಸಹೋದರ,—

"ಈ ಕೂಸು ನಿನ್ನ ಸೋದರ ಸೊಸೆ. ಇದರ ತಾಯಿ ತೀರಿದೆ. ಇದನ್ನು ನೋಡಿಕೊಳ್ಳುವುದು ನನಗಂತೂ ಸಾಧ್ಯವಿಲ್ಲ. ನೀನು ಮನಸ್ಸು ಮಾಡಿದರೆ, ಈ ಕೂಸು ನಿನ್ನದು" ಎಂದ.

ಆಕೆ ಸಹಾನುಭೂತಿಯಿಂದ ಮಗುವನ್ನು ಕೈಗೆತ್ತಿಕೊಂಡಳು. ಲಾಲನೆ ಪಾಲನೆ ಮಾಡಿದಳು; ಬೆಳೆಸಿದಳು. ಆಕೆ ಆರೋಗ್ಯವಂತೆಯಾದರೂ ಕೆಮಿಲ್‌ನ ಟಾನಿಕ್ ಔಷಧಿಯಲ್ಲಿ ಅವಳಿಗೂ ಒಂದು ಪಾಲು ಮೀಸಲು!

ಅವರಿಬ್ಬರೂ ದೊಡ್ಡವರಾದ ಮೇಲೆ, ಮದಾಂ ರೇಕ್ವಿನ್ ತದೇಕಚಿತ್ತದಿಂದ ಅವರನ್ನು ನೋಡಿ ತೃಪ್ತಿಯ ನಗು ಸೂಸುವಳು. ಅವರಿಬ್ಬರ ವಿವಾಹ ಎಂದೋ ನಿರ್ಧರಿಸಿಯಾಗಿದೆ. ತಾನು ಸತ್ತರೆ ಕೆಮಿಲ್ ತಬ್ಬಲಿಯಾಗಬಾರದು. ಆತನ ಬೇಕು, ಬೇಡಗಳನ್ನು ಚೆನ್ನಾಗಿ ಅರಿತ ಥೇರಸಾ ತನ್ನಂತೆಯೆ ಆತನನ್ನು ಜೋಪಾನ ಮಾಡಬಲ್ಲಳಷ್ಟೆ.

ಅವರಿಗಾದರೂ ಅಷ್ಟೇ- ತಾವು ಗಂಡಹೆಂಡತಿಯಾಗುವುದು ಗೊತ್ತು. ಆ ಕುರಿತು ಅವರಿಗೆ ಆಸಕ್ತಿ ಇದ್ದಂತಿರಲಿಲ್ಲ. ಉತ್ಕಂಠೆ, ಆಕರ್ಷಣೆಗಳಂತೂ ಕಾಣಲೇ ಇಲ್ಲ. ಮದುವೆಯ ದಿನವನ್ನು ತಾನೇ ಗೊತ್ತುಮಾಡಿ ಮದಾಂ ರೇಕ್ವಿನ್ ಥೇರಸಾಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು, ಅವಳ ಮುಂದಿನ ಜೀವನದ ಬಗ್ಗೆ ಕಳಕಳಿಯ ಮಾತುಗಳನ್ನು ಹೇಳಿದಳು. ಅವಳ ಹೊಣೆಯೇನೆಂಬುದನ್ನು ವಿವರಿಸಿದಳು. ಅದಕ್ಕೆ ಥೇರಸಾ ಉತ್ತರಿಸದೇ ಸೋದರತ್ತೆಯನ್ನು ಮುತ್ತಿಟ್ಟು ಕೋಣೆಯಿಂದ ಹೊರಗೋಡಿದಳು.

ಆ ರಾತ್ರಿ ಥೇರಸಾ ತನ್ನ ಕೋಣೆಗೆ ಹೋಗುವ ಬದಲು ಕೆಮಿಲ್‌ನ ಕೋಣೆಯನ್ನು ಸೇರಿದಳು. ಅದೊಂದೇ ಆ ಮನೆಯ ಆಗುಹೋಗುಗಳಲ್ಲಾದ ಬದಲಾವಣೆ.

ಕೆಮಿಲ್ ಬೆಳಿಗ್ಗೆ ಎಂಟು ಗಂಟೆಗೆ ಮನೆಯಿಂದ ಹೊರಡುವನು. ಮರಳುವುದು ರಾತ್ರಿಯ ಊಟದ ವೇಳೆಗೇನೆ. ಕೆಲ ಹೊತ್ತು ಓದುತ್ತ ಕುಳ್ಳಿರುವನು. ಒಳ್ಳೆಯದೆನಿಸಿದ ಭಾಗಗಳನ್ನು ಕೆಲವೊಮ್ಮೆ ಮಡದಿಗೆ ಓದಿ ಹೇಳುವ.

ಸಂಜೆಯ ಬಿಡುವಿನಲ್ಲಿಯೂ ಪುಸ್ತಕವೊಂದನ್ನು ಕೈಗೆತ್ತಿಕೊಳ್ಳದೆ ಆಕೆ ಬಿಮ್ಮಗೆ ಕುಳಿತುಕೊಳ್ಳುವುದನ್ನು ಅರಿತು ಆತನಿಗೆ ಆಶ್ಚರ್ಯವಾ

ಯಿತು, ನೋವನ್ನುಂಟುಮಾಡಿತು; ವಿಚಾರ ಹೀನೆಯ ಕೈಹಿಡಿದೆನೆಂದು ಪರಿತಪಿಸಿದ.

ವ್ಯಾಪಾರದಲ್ಲಿಯೂ ಅವಳು ಹಾಗೆಯೇ ನಿರಾಸಕ್ತೆ. ಥೇರಸಾ ಅನ್ಯಮನಸ್ಕಳಾಗಿ ಒಂದೆರಡು ಮಾತಿನಲ್ಲಿಯೇ ವ್ಯಾಪಾರವನ್ನು ಮಾಡಿ ಮುಗಿಸುವಳು. ಆ ಮಟ್ಟಿಗೆ ಮದಾಂ ರೇಕ್ವಿನ್‌ಳೇ ಚುರುಕು. ಮಾತನಾಡಿಸಿ ಮಾತನಾಡುತ್ತ ವ್ಯಾಪಾರವನ್ನು ಕುದುರಿಸುವಳು.

ಮೂರು ವರ್ಷಗಳು ದಾಟಿದವು. ಕೆಮಿಲ್ ಒಮ್ಮೆಯೂ ಕಚೇರಿಗೆ ಹಾಜರಿ ತಪ್ಪಿಸಲಿಲ್ಲ. ಥೇರಸಾಳಿಗೆ ಮಾತ್ರ ಜೀವನ ನೀರಸವೆನಿಸಿತು, ನಿರಂತರವೆಂದು ತೋರಿತು. ಪ್ರೀತಿ ಉನ್ಮಾದಗಳಿಲ್ಲದ ರಾತ್ರಿ, ಗೀಜೆ-ಮೋಜುಗಳಿಲ್ಲದ ಹಗಲು— ಇದಕ್ಕೆ ಕೊನೆಯಿಲ್ಲವೇನು?

*

ಪ್ರತಿ ಗುರುವಾರ ಸಂಜೆಗೆ ಮದಾಂ ರೇಕ್ವಿನ್ ಮನೆಯಲ್ಲಿ ಮೇಜವಾನಿ. ಆ ದಿನ ಕೆಮಿಲ್‌ನ ಕಚೇರಿಗೆ ರಜೆ ಆಕೆಯ ಹಳೇ ಪರಿಚಯದ, ಈಗ ನಿವೃತ್ತ ಪೋಲೀಸ್ ಕಮೀಶನರ್ ಆಗಿರುವ ಮಿಚಾದ್, ಆತನ ಮಗ ಒಲಿವರ್ ಮತ್ತು ಸೊಸೆ ಸುಜೇನಾ, ಕೆಮಿಲ್‌ನ ಮೇಲಧಿಕಾರಿಯಾದ ಗ್ರಿವೇಟ್ –ಇವರು ಆ ದಿನದ ಕಾಯಂ ಅತಿಥಿಗಳು. ಅವರ ಆಟ, ಮಾತು, ಮೋಜುಗಳೊಂದೂ ಥೇರಸಾಳಿಗೆ ಹಿಡಿಸುವುದಿಲ್ಲ. ಯಾವುದಾದರೊಂದು ನೆಪ ಮಾಡಿ ಆಕೆ ತಪ್ಪಿಸಿಕೊಳ್ಳುವಳು.

ಒಂದು ಗುರುವಾರ—

"ಅಮ್ಮಾ, ಸರಿಯಾಗಿ ನೋಡು, ಯಾರೆಂದು ಹೇಳು ನೋಡುವ!"

ಕೆಮಿಲ್ ತನ್ನ ಸಂಗಾತಿಯನ್ನು ಮುಂದೂಡಿ ಬೆನ್ನು ಭುಜಗಳನ್ನು ತಟ್ಟುತ್ತಾ ಹೇಳಿದುದನ್ನು ಕೇಳಿ ಮದಾಂ ಹೊಸಬನನ್ನು ದಿಟ್ಟಿಸಿದಳು.

"ಲೋರೆಂಟ್! ಆ ಹಳೇ ಮುದುಕ ರೈತ ಲೋರೆಂಟನ ಮಗ, ತಿಳಿಯಿತೆ? ನನ್ನ ಜತೆಯಲ್ಲಿ ಶಾಲೆಗೆ ಹೋಗುತ್ತಿದ್ದುದು ನೆನಪಿದೆಯೆ?"

ಆಗ ಆಕೆ ಹಿಂದಿನ ಹುಡುಗನನ್ನು ಜ್ಞಾಪಿಸುತ್ತ ಎದುರಿಗಿದ್ದ ಯುವಕನನ್ನು ಹೋಲಿಸಿದಳು. ನಿಜ, ಆತನನ್ನು ಕುರ್ಚಿಯಲ್ಲಿ ಕುಳ್ಳಿರಿಸುತ್ತ ಒಂದೇ ಸವನೆ ಹಳೆಯ ಸಂಗತಿಗಳನ್ನೆಲ್ಲ ಕೇಳತೊಡಗಿದಳು. ಆಗ ಕೆಮಿಲ್ ನುಡಿದ,

"ನಾನು ಕೆಲಸ ಮಾಡುವಲ್ಲಿಯೆ ಈ ಕಳ್ಳ ಕೆಲಸಕ್ಕೆ ಸೇರಿ ಒಂದೂವರೆ ವರ್ಷವಾಯಿತಾದರೂ ನಾವು ಭೇಟಿಯಾದುದು ಇವತ್ತೇ! ಕಾಲೇಜಿನಲ್ಲಿ ಲಾ ಕಲಿತಿದ್ದಾನೆ. ಚಿತ್ರಗಳನ್ನೂ ಬಿಡಿಸುತ್ತಾನೆ."

ಮಗನ ಮಾತಿನ ಧಾರೆಯನ್ನು ತಡೆದು ಆಕೆ ಹೊಸ ಅತಿಥಿಯನ್ನು ಸತ್ಕರಿಸಲೆಂದು ಮಹಡಿಗೋಡಿದಳು, ಲೋರೆಂಟ್ ಹ್ಯಾಟನ್ನು ಮೂಲೆಗೆಸೆದು ಕಾಲು ಚಾಚಿದ.

ಥೇರಸಾ ಅದುವರೆಗೆ ಒಂದು ಮಾತನ್ನು ಕೂಡಾ ಆಡದಿದ್ದರೂ ಅಪರಿಚಿತ ವ್ಯಕ್ತಿಯನ್ನವಲೋಕಿಸುತ್ತಿದ್ದಳು. ಅಗಲವಾದ ಹಣೆ, ಉಬ್ಬಿದ್ದ ಕೆಂಪು ಕೆನ್ನೆಗಳು, ಧಾಂಡಿಗ ದೇಹ ಆಕೆಯ ಕಣ್ಣನ್ನು ಸೆಳೆದವು.

ಕೆಮಿಲ್ ಹೇಳಿದ: "ಲೋರೆಂಟ್ ಈಕೆ ನನ್ನ ಹೆಂಡತಿ. ನಮ್ಮ ಜತೆಯಲ್ಲಿ ಆಡಲು ಇವಳೂ ಬರುತ್ತಿದ್ದುದು ನೆನಪಿದೆಯೇನು?"

"ಹೌದು, ಈ ಮದ್ದಾಂಳ ನೆನಪು ಚೆನ್ನಾಗಿದೆ."

—ಥೇರಸಾಳನ್ನು ದಿಟ್ಟಿಸುತ್ತ ಆತ ಉತ್ತರವಿತ್ತ. ಆತನ ಆ ದೃಷ್ಟಿಯನ್ನು ಆಕೆಗೆ ಎದುರಿಸಲಾಗಲಿಲ್ಲ, ಅತ್ತೆಗೆ ನೆರವು ನೀಡಲೆಂದು ಮೇಲ-ಕ್ಕೋಡಿದಳು.

"ನನಗೆ ವಕೀಲನಾಗುವ ಆಶೆಯಿಲ್ಲ. ಲಾ ಕಲಿಯುವ ನೆಪ ಹೇಳಿ ತಂದೆಯಿಂದ ಹಣ ಗಿಟ್ಟಿಸುತ್ತ ಚಿತ್ರಕಾರನೊಬ್ಬನ ಜತೆಯಲ್ಲಿರುತ್ತಿದ್ದೆ. ಸತ್ಯ ಸಂಗತಿ ತಿಳಿಯುತ್ತಲೇ ತಂದೆ ಹಣ ಕೊಡುವುದನ್ನು ನಿಲ್ಲಿಸಿದರು."

ಲೋರೆಂಟ್ ತನ್ನ ಅನುಭವಗಳನ್ನು ವಿವರಿಸುವುದನ್ನು ಕೆಮಿಲ್ ಕಿವಿ ನಿಮಿರಿಸಿ ಆಲಿಸುತ್ತ ನಡುವೆ ಚಿಕ್ಕ ಸವಾಲನ್ನೂ ಹಾಕಲಾರಂಭಿಸಿದ.

"ಎಲ್ಲ ಉಡುಪನ್ನು ಕಳಚಿಟ್ಟು ಬೆತ್ತಲೆಯಾಗಿ ಸ್ತ್ರೀಯರು ನಿಜಕ್ಕೂ ನಿನ್ನೆದುರು ಭಂಗಿಯಲ್ಲಿ ನಿಲ್ಲುವರೇನು?"

"ಹೌದು ಮಿತ್ರಾ. ಹೌದು! ಈಗಲೂ ನೆನಪಿದೆ. ಎಂತಹ ಸುಂದರ ದೇಹ! ಯುವತಿಯರ ಬೆಳೆದ ಅಂಗಾಂಗಗಳು... ಮತ್ತು..."

ಆತ ಕತ್ತೆತ್ತಿದಾಗ ಮಾತು ತಡೆಯಿತು, ಥೇರಸಾಳ ಮುಖ ಎದುರು ಕಾಣಿಸಿತು. ಮೆಲ್ಲಗೆ ಮರಳಿ ಬಂದಿದ್ದ ಆಕೆ ಆತನನ್ನೇ ನೋಡುತ್ತಿದ್ದಳು. ನಾಲಿಗೆಯ ತುದಿಯನ್ನು ಹಲ್ಲಿನ ನಡುವೆ ಇಟ್ಟು ಆಲಿಸುತ್ತಿದ್ದಳು. ಮುಗುಳು ನಗೆ ನಗುತ್ತಾ ಆತ ತನ್ನ ದೃಷ್ಟಿಯನ್ನು ಗೆಳೆಯನೆಡೆಗೆ ಹರಿಸಿ, ತಾನು ಕಂಡಿದ್ದ ಓರ್ವ ಬಿನ್ನಾಣಗಿತ್ತಿಯನ್ನು ರಸವತ್ತಾಗಿ ಬಣ್ಣಿಸಿದ.

ರಾತ್ರಿ ಎಂಟು ಗಂಟೆ. ಮಿಚಾದ್, ಸುಜೇನಾ, ಒಲಿವರ್ ಮತ್ತು ಗ್ರಿವೇಟ್ ಎಲ್ಲರೂ ಎಂದಿನಂತೆ ಬಂದರು. ಕೆಮಿಲ್ ತನ್ನ ಗೆಳೆಯನ ಪರಿಚಯ ಮಾಡಿಕೊಟ್ಟ. ಲೋರೆಂಟ್ ತನ್ನ ವಾಕ್ ಚಾತುರ್ಯದಿಂದ ಎಲ್ಲರಿಗೂ ಪ್ರಿಯನಾದ. ಆಗ ಮಾತ್ರ ಆ ಕೂಟದಿಂದ ತಪ್ಪಿಸಿಕೊಳ್ಳದೆ ಥೇರಸಾ ಅಲ್ಲೇ ಕುಳಿತಿದ್ದಳು.

ಅಂದಿನಿಂದ ಲೋರೆಂಟ್ ಅಲ್ಲಿಗೆ ದಿನಾಲು ಸಂಜೆಗೆ ಬರತೊಡಗಿದ. ಊಟ, ಉಪಚಾರ ಅಲ್ಲಿಯೆ. ರಾತ್ರಿ ಎಲ್ಲರೂ ಹಾಸಿಗೆ ಸೇರುವ ಹೊತ್ತಿಗೆ ಆತ ಅಲ್ಲಿಂದ ಹೊರಟು ತನ್ನ ಕೋಣೆಯನ್ನು ಸೇರುವುದು ಪದ್ಧತಿಯಾಯಿತು.

ಒಂದು ಸಂಜೆ, ಲೋರೆಂಟ್ ಕೆಮಿಲ್‌ನ ಚಿತ್ರ ಬರೆಯಲಾರಂಭಿಸಿದ. ನಾಲ್ಕು ಸಂಜೆ ಅದೇ ಚಿತ್ರಿಸುವ ಕೆಲಸ ನಡೆಯಿತು. ರೂಪರೇಷೆ ಮುಗಿಯಿತು, ಬಣ್ಣ ಹಾಕಿದ್ದಾಯಿತು.

ಲೋರೆಂಟ್ ಚಿತ್ರಿಸುವಾಗ ಥೇರಸಾ ಅದೇ ಕೋಣೆಯಲ್ಲಿ ಕುಳಿತು, ಅತ್ತಿತ್ತ ಕದಲದೆ ನಿರೀಕ್ಷಿಸುತ್ತಿದ್ದಳು. ಚಿತ್ರ ಬಿಡಿಸುವುದರಲ್ಲಿ ಆಕೆಗೆ ಆಸಕ್ತಿಯಿಲ್ಲವಾದರೂ ಆಕೆ ಆತನ ಚಲನವಲನಗಳನ್ನು ಸೂಕ್ಷ್ಮವಾಗಿ ಗ್ರಹಿಸಲೆಳಸಿದಳು. ಅವ್ಯಕ್ತ ಶಕ್ತಿಯೊಂದು ಆಕೆಯನ್ನು ಅಲ್ಲಿ ಕಟ್ಟಿಹಾಕುತ್ತಿತ್ತು. ಅಲ್ಲಿಂದ ಆಕೆಗೆ ಕದಲುವುದು ಆಗಲಿಲ್ಲ.

ಈ ಹೆಣ್ಣಿನೊಡನೆ ಸಲಿಗೆ ಬೆಳೆಸಿದರೆ ಹೇಗೆ? ಈಕೆ ಅಪ್ಸರೆಯಲ್ಲ, ಆದರೂ ಚಿಂತೆಯಿಲ್ಲ. ಹಾಗೆ ವಿಚಾರಿಸಿದಲ್ಲಿ ತಾನು ಕೂಡಿದ ಹೆಣ್ಣುಗಳೆಲ್ಲ ಚೆಲುವೆಯರೇನು? ಅವರೋ ಹಣ ಸುರಿದಾಗಲೇ ಬರುವವರು. ಗೆಳೆಯನ ಹೆಂಡತಿಯೊಡನೆ ಸರಸವಾದರೆ ಹಣದ ಉಳಿತಾಯವೂ ಹೌದು.

—ಈ ವಿಚಾರವು ಕ್ರಮೇಣ ಆ ಚಿತ್ರಕಾರನ ಮನಸ್ಸಿನಲ್ಲಿ ನಿರ್ಧಾರವನ್ನು ತಾಳಿತು.

ಚಿತ್ರ ಮುಗಿಯುತ್ತ ಬಂದಿತು. ಮಗನ ಚಿತ್ರವೆಂದೇ ತಾಯಿ ಒಂದೇ ಸವನೆ ಹೊಗಳಿದಳು; ಕೆಮಿಲ್‌ನೂ ಅಷ್ಟೆ. ಚಿತ್ರದಲ್ಲಿಯ ತನ್ನ ಮುಖ ವಿಕಾರವಾಗಿರುವುದನ್ನು ಕೂಡಾ ಆತ ಗಮನಿಸಲಿಲ್ಲ, ಮೋಜು ಮಾಡಲು ಮದ್ಯ ತರಲು ಆತ ಹೊರಗೆ ಹೊರಟುಹೋದ

ಲೋರೆಂಟ್ ಸುಮ್ಮಗೆ ಕುಂಚಗಳೊಡನೆ ಆಟವಾಡುತ್ತಿದ್ದ. ಕ್ಷಣಕ್ಷಣಕ್ಕೂ ಅವಧಿ ಕಡಿಮೆಯಾಗುತ್ತಿದೆ. ಕೆಮಿಲ್ ಯಾವ ಗಳಿಗೆಯಲ್ಲೂ ಅಂಗಡಿಯಿಂದ ಬಂದುಬಿಡುವ. ಒಮ್ಮೆಗೇ ತಿರುಗಿ ಥೇರಸಾಳ ಮುಖವನ್ನೇ ದಿಟ್ಟಿಸಿದ. ಆಕೆಯೂ ಕಣ್ಣೆತ್ತಿ ಆತನ ದೃಷ್ಟಿಯನ್ನು ಎದುರಿಸಿದಳು. ಅಂತೆಯೇ ಕೆಲವೊಂದು ಕ್ಷಣ ಅವಸರಪಡುತ್ತ ಲೋರೆಂಟ್ ಆಕೆಯನ್ನು ಅದುಮಿ ಆಲಂಗಿಸಿದ, ಚುಂಬಿಸಿದ. ಕ್ಷಣಕಾಲ ಆಕೆ ತಡೆದಳು, ತಡವಿದಳು; ನಂತರ ನಿಸ್ಸಹಾಯಳಂತೆ ಅವನ ಕೊರಳಿಗೆ ಜೋತುಬಿದ್ದಳು.

*

ಅಂದಿನಿಂದ ಆ ಪ್ರೇಮಿಗಳಿಗೆ ಪರಸ್ಪರ ಸಾನ್ನಿಧ್ಯ-ಸಂಪರ್ಕ ಅತ್ಯಾವಶ್ಯಕವೆನಿಸಿತು, ಅನಿವಾರ್ಯವೆಂದು ತೋರಿತು. ಹಲವು ವರ್ಷಗಳ ಸಲಿಗೆ-ಸಂಬಂಧವೆನ್ನುವಂತೆ ಏಕಾಂತದಲ್ಲಿ ವರ್ತಿಸತೊಡಗಿದರು.

ಥೇರಸಾಳಿಗಂತೂ ಹೊರಗೆ ಒಬ್ಬಳೇ ಹೋಗಲನುವಿಲ್ಲ. ಅಂದರೆ ಲೋರೆಂಟ್‌ನೇ ಆಕೆಯಿದ್ದಲ್ಲಿಗೆ ಬರಬೇಕು. ಆ ವಿಷಯದಲ್ಲಿ ಆಕೆ ತೋರಿದ ಧೈರ್ಯ-ಉಪಾಯಗಳು ಯಾರನ್ನೂ ಬೆರಗುಗೊಳಿಸುವಂಥವು. ಅವರಿಬ್ಬರೂ ಸಂಧಿಸುವ ಸ್ಥಳ ಆಕೆಯ ಮಲಗುವ ಕೋಣೆ! ಆ ಕೋಣೆಯ ಹಿಂದಿನ ದ್ವಾರವನ್ನು ಆಕೆ ತೆರೆದರೆ, ಹೊರಗಿನ ಪಾವಟಿಗೆಗಳನ್ನೇರಿ ಲೋರೆಂಟ್ ಯಾರಿಗೂ ಕಾಣಿಸದೆ ಬಂದು ಕೂಡುವುದು ಸುಲಭಸಾಧ್ಯ.

ಕಚೇರಿಯಲ್ಲಿ ಕೆಮಿಲ್; ಕೆಳಗೆ ಅಂಗಡಿಯಲ್ಲಿ ಮದಾಂ ರೇಕ್ವಿನ್: ಮೇಲೆ ಮಲಗುವ ಕೋಣೆಯಲ್ಲಿ ಆ ಪ್ರೇಮಿಗಳ ಚೆಲ್ಲಾಟ!

ಸಂಜೆ ಕೆಮಿಲ್‌ನ ಜತೆಯಲ್ಲಿಯೆ ಲೋರೆಂಟ್ ಪುನಃ ಅಲ್ಲಿಗೆ ಬರುವ. ಅಂಗಡಿಯನ್ನು ಹೊಕ್ಕ ವನೇ ಲೋರೆಂಟ್ ಗಲ್ಲಿಯ ಬಳಿ ಕುಳಿತಾಕೆ ಯೆಡೆ—ಅವಳು ಯಾರೇ ಇರಲಿ, ನೋಡಿ ನಕ್ಕು, ವಂದಿಸಿ ಮಹಡಿಯನ್ನೇರಿ ಕುಳಿತುಕೊಳ್ಳುವ; ಬಹಳ ಎಚ್ಚರ ವಹಿಸಿ ನಗುವ, ನಡೆನುಡಿಯುವ.

ಆತನ ಮಾತುಕತೆಯನ್ನು ಆಲಿಸುವುದೆಂದರೆ ಕೆಮಿಲ್‌ಗೆ ತುಂಬಾ ಪ್ರೀತಿ. ಆದರೆ ತನ್ನ ಹೆಂಡ ತಿಯು ತಮ್ಮ ಮಾತುಕತೆಯಲ್ಲಿ ಹೆಚ್ಚಿನ ಆಸಕ್ತಿ ವಹಿಸದಿರುವುದನ್ನು ಕಂಡು ಆತನಿಗೆ ರೇಗು ತ್ತಿತ್ತು, ಆ ಬಗ್ಗೆ ಆಕೆಯನ್ನು ಗದರಿಸಿದ್ದೂ ಇದೆ. ತನ್ನ ಗೆಳೆಯನನ್ನು ಆಕೆ ಕಡೆಗಾಣಿಸುತ್ತಾಳೆಂದೇ ಆತನ ಗ್ರಹಿಕೆ.

ಥೇರಸಾ ಚದುರೆ. ಪಾತ್ರವನ್ನು ಚೆನ್ನಾಗಿ ನಟಿಸಿದಳು. ಆಂತರಿಕ ಆಶೆ-ಆತುರಗಳನ್ನು ಅದುಮಿ ಮಾತು-ಮುಖಚರ್ಯೆಗಳಲ್ಲಿ ವಿನಮ್ರ ಳೆನ್ನಿಸಿ ಆಕೆ ಹದಿನೈದು ವರ್ಷಗಳಿಗೂ ಹೆಚ್ಚು ಕಾಲ ನಟಿಸಿಲ್ಲವೇನು? ಲೋರೆಂಟ್ ಎದುರಿಗಿರು ವಾಗ ಹೊಸ ಮುಖವಾಡವನ್ನು ವಹಿಸುವುದು ಆಕೆಗೆ ಕಷ್ಟವಾಗಲಿಲ್ಲ.

ಗುರುವಾರ ಸಂಜೆ ಎಂದಿನಂತೆ ಅಲ್ಲಿಗೆ ಬರುವ ಅತಿಥಿಗಳೊಡನೆ ಲೋರೆಂಟ್ ಮಾತನಾಡುತ್ತ ಮಾತನಾಡಿಸಿ ನಗುತ್ತ ಸ್ನೇಹ ಬೆಳೆಸಿದ. ಅತಿಥಿ ಗಳನ್ನು ಬೀಳ್ಕೊಡಲೆಂದು ಮದಾಂ ರೇಕ್ವಿನ್ ಮತ್ತು ಕೆಮಿಲ್ ಕೆಳಗಿಳಿದು ಹೋದಾಗ ಲೋರೆಂಟ್ ಆಲಂಗಿಸುವನು. ಥೇರಸಾ ಪ್ರಿಯ ತಮನ ಕಿವಿಯಲ್ಲಿ ಪಿಸುಗುಡುವಳು.

ಆದರೆ ಲೋರೆಂಟ್‌ನಿಗೆ ಯಾವಾಗಲೂ ಕಚೇ ರಿಯಲ್ಲಿ ಕೆಲಸವನ್ನು ತಪ್ಪಿಸಿ, ಮೇಲಧಿಕಾರಿಯ ಕಣ್ಣಿಗೆ ಮಣ್ಣೆರಚಿ ಪ್ರೇಯಸಿಯನ್ನು ಕೂಡು ವುದು ಸಾಧ್ಯವಾಗಲಿಲ್ಲ. ಒಂದು ದಿನ ಕಚೇರಿ ಯಿಂದ ನುಸುಳುವಾಗಲೇ ಆತನಿಗೆ ಮೇಲಧಿಕಾ ರಿಯ ಕರೆ ಬಂತು: ಹೀಗೆ ಕೆಲಸವನ್ನು ತಪ್ಪಿಸಿ ದರೆ ಕೆಲಸದಿಂದ ತಳ್ಳಿ ಹಾಕುವ ಸೂಚನೆ ಸಿಕ್ಕಿತು.

"ಕೆಲಸಕ್ಕೆ ಗೈರಹಾಜರಿಯಾದರೆ ನೌಕರಿ ಯಿಂದ ತೆಗೆದುಹಾಕುವುದಾಗಿ ಮೇಲಧಿಕಾರಿ ತಾಕೀತು ಮಾಡಿದ್ದಾನೆ" ಎಂದಿಷ್ಟೇ ಆಕೆಗೆ ತಿಳಿಸುವ ಅವಕಾಶ ಆತನಿಗೆ ದೊರಕಿತು. ವಿವ ರಿಸಲಾಗಲಿಲ್ಲ. ಸಂದರ್ಭ ಸಿಗಲಿಲ್ಲ.

ಅಂದು ಥೇರಸಾಳಿಗೆ ನಿದ್ರೆಯಿಲ್ಲ, ಹೊಸ ಯೋಜನೆಯನ್ನು ಯೋಚಿಸತೊಡಗಿದಳು. ಅ- ನಂತರದ ಗುರುವಾರ ಕೂಡಾ ಅವರಿಗೆ ವಿಚಾರ ವಿನಿಮಯ ಮಾಡಲವಕಾಶ ದೊರೆಯಲಿಲ್ಲ. ಅವರಿಬ್ಬರ ಪರಿಸ್ಥಿತಿ ಅಸಹನೀಯವಾಗಲಾರಂಭಿ ಸಿತು.

ಲೋರೆಂಟ್‌ನಿಗೆ ಥೇರಸಾಳ ಸಾನ್ನಿಧ್ಯವಿಲ್ಲದೆ ಬದುಕುವುದೇ ಅಸಾಧ್ಯವೆನಿಸತೊಡಗಿತು. ತರ್ಕ ವಿವೇಕ ಮರೆಯಾಯಿತು; ಬುದ್ಧಿ ಶೂನ್ಯವಾ- ಯಿತು. ಎಂದೇ ಎಂದಿನಂತೆ ಗೆಳೆಯನ ಮನೆಗೆ ಹೋಗಲಿಲ್ಲ. ಅಳುಕಿದ ಆತನ ನರನರಗಳ ಲ್ಲಿಯೂ ಆಕೆ ವ್ಯಾಪಿಸಿದ್ದಳು. ಹಸಿವು-ಬಾಯಾ ರಿಕೆಗಳಂತೆಯೇ ಆಕೆಯ ದೇಹಸಂಗ ಅನಿವಾರ್ಯ ವೆಂಬ ಉನ್ಮಾದವೇರುವಾಗಲೇ ಆಕೆಯಿಂದ ಸಣ್ಣ ಚೀಟಿ ಬಂತು, ಸಹಿ ಇದ್ದಿಲ್ಲ.

"ನಾಳೆ ಸಂಜೆ ಎಂಟು ಗಂಟೆಗೆ ನಿನ್ನ ಕೋಣೆ ಯಲ್ಲಿ ನನ್ನ ದಾರಿ ಕಾಯುತ್ತಿರು."

ರಾತ್ರಿಯೂಟ ಮುಗಿಸಿದವಳೇ, ಉದ್ದರಿ ಹಣ ವನ್ನು ತಾನೊಬ್ಬಳೇ ವಸೂಲಿ ಮಾಡಿಕೊಂಡು ಬರುತ್ತೇನೆಂದು ಹೇಳಿ ಥೇರಸಾ ಪ್ರಿಯತಮನ ವಸತಿಯೆಡೆ ಧಾವಿಸಿದಳು. ಮಹಡಿಯ ಮೆಟ್ಟಿಲು ಗಳನ್ನೇರಿ ಬರುವಾಗ ಉಸಿರುಕಟ್ಟಿದಂತಾಯಿತು. ಬಾಗಿಲು ತೆರೆಯಿತು. ಆತನನ್ನು ಬದಿಗೆ ಸರಿಸಿ, ಹ್ಯಾಟನ್ನು ಬಿಸುಟು ಎದುರಿನ ಮಂಚದ ಮೇಲೆ ಬಿದ್ದುಕೊಂಡಳು—ಬವಳಿ ಬಂದವಳಂತೆ.

ಹತ್ತು ಗಂಟೆ ಬಡಿದ ಶಬ್ದ ಕೇಳಿದರೂ ಕೇಳಿಸ ಲಿಲ್ಲವೆನ್ನುವಂತೆ ಥೇರಸಾ ಬಿಸುಸುಯ್ದಳು; ಉಡು ಪನ್ನು ಧರಿಸಿ ಹ್ಯಾಟನ್ನು ಕೈಗೆತ್ತಿಕೊಂಡಳು. ಮತ್ತೆ ಮಂಚದ ಅಂಚಿನ ಮೇಲೆ ಕುಳಿತಳು.

"ಈಗ ನಾನು ಹೋಗಬೇಕು"— ಅರೆಮನಸ್ಸಿ ನಿಂದ ನುಡಿದಳು.

ಆಕೆಯ ಕಾಲಬುಡದಲ್ಲಿ ಮೊಣಕಾಲೂರಿ ಆಕೆಯ ಕೈಗಳನ್ನು ಹಿಡಿದು ಲೋರೆಂಟ್ ಹೇಳಿದ—

"ನನ್ನ ರಾಣಿ, ಇನ್ನು ಯಾವಾಗ ಬರುತ್ತಿ ?"

ಕೈಗಳನ್ನು ಬಿಡಿಸಿಕೊಳ್ಳುತ್ತಾ ಆತನ ಕಣ್ಣು



# ಒಂದು ಉತ್ತಮ ಶರ್ಟಿಗೆ ಎಷ್ಟು ಕಡಿಮೆ ಬೆಲೆ?

## ಉತ್ತಮ ಉಡುಪು ಧರಿಸುವ ಮನುಷ್ಯನ ಸಮಸ್ಯೆ

ವ್ಯಾಪಾರ ಜೀವನದಲ್ಲಿ ಮತ್ತು ಸಾಮಾಜಿಕ ಸಮಾರಂಭಗಳಲ್ಲಿ ಪ್ರತಿಯೊಬ್ಬನೂ ಚುರುಕಾಗಿ ಕಾಣಿಸಿಕೊಳ್ಳಲು ಇಚ್ಛಿಸುತ್ತಾನೆ. ಆದರೂ ಬಹುಮಂದಿ ಜನರು ಪರಿಮಿತ ಅಂದಾಜುಪಟ್ಟಿಯ ಪ್ರಕಾರವೇ ಉತ್ತಮ ಉಡುಪುಗಳನ್ನು ಧರಿಸ ಬೇಕಾಗಿದೆ. ಆದರೆ ಮಫತ್‌ಲಾಲ್ ಗ್ರುಪಿನವರ ಪೋಪ್ಲಿನ್ಸ್ ಕೊಂಡಾಗ ಮಾತ್ರ ಕಡಿಮೆ ಬೆಲೆಗೆ ನೀವು ಒಂದು ಉತ್ತಮ ಶರ್ಟನ್ನು ಪಡೆಯಬಹುದು. ಮಫತ್‌ಲಾಲ್ ಗ್ರುಪಿನ ಪೋಪ್ಲಿನ್ಸ್‌ನ ಬೆಲೆಯು ಮಿತಿಮೀರಿ ಇರದೆ ಬಹಳ ಕಡಿಮೆಯಾಗಿರುತ್ತದೆ. ಮಫತ್‌ಲಾಲ್ ಗ್ರುಪಿನ ಪ್ರತಿ ಪೋಪ್ಲಿನ್ ಬಟ್ಟೆಯು ಅದರ ಕ್ಷೇತ್ರದಲ್ಲಿ ಅತ್ಯುತ್ತಮವಾಗಿದೆ. ಮಫತ್‌ಲಾಲಿನ ಹೆಸರನ್ನೇ ಕೇಳಿ ಪಡೆಯಿರಿ.



# ಮಫತ್‌ಲಾಲ್ ಗ್ರುಪ್ ಪೊಪ್ಲಿನ್‌ಗಳು



ನ್ಯೂ ಕೊರೋಕ್, (ಕೂರೋಳ್), ಅಹಮದಾಬಾದ್. ನ್ಯೂ ಕೊರೋಕ್ ನಡಿಯಾದ್. ಸ್ಟಾಂಡರ್ಡ್, ಬೊಂಬಾಯಿ ಸ್ಟಾಂಡರ್ಡ್, (ನ್ಯೂ ಚೈನಾ) ಬೊಂಬಾಯಿ ಸ್ಟಾಂಡರ್ಡ್, ದೇವಾಸ್. ಸ್ವಾಸ್ತೂನ್, ಬೊಂಬಾಯಿ ಸಾಸ್ತೂನ್, (ನ್ಯೂ ಯೂನಿಯನ್), ಬೊಂಬಾಯಿ ಸೂರತ್ ಕಾಟನ್, ಸೂರತ್ ಮಫತ್‌ಲಾಲ್ ಫೈನ್, ನವ್ಸಾರಿ ಗಗಲ್‌ಭಾಯ್ ಜೂಟ್, ಕಲ್ಕತ್ತ. ಇಂಡಿಯನ್ ಡೈಸ್ಟಫ್, ಬೊಂಬಾಯಿ

KAN

ಗಳಲ್ಲಿಯೆ ಕಣ್ಣಿಟ್ಟು ಉತ್ತರಿಸಿದಳು—

"ಸತ್ಯವನ್ನೇ ಹೇಳಬೇಕೇನು ಪ್ರಿಯಾ? ಮನಸ್ಸಿಗೆ ವಿರುದ್ಧವಾಗಿಯಾದರೂ ಹೇಳಬೇಕು— ಇನ್ನು ಇಲ್ಲಿಗೆ ನಾನು ಬರಲಾರೆ. ಅಂಗಡಿಯಿಂದ ತಪ್ಪಿಸಿ ಬರುವುದು ಸಾಧ್ಯವಿಲ್ಲ."

"ಹಾಗಾದರೆ ಇದೇ ಕೊನೆಯೇನು?"

"ಇಲ್ಲ. ಅದು ಸಾಧ್ಯವಿಲ್ಲ—ಅದು ನನ್ನಿಂದ ಸಹಿಸಲಾಗದು!" ಆಕೆಯ ಕಂಠ ಬಿಗಿಯಿತು.

ಗೆಳೆಯನನ್ನು ನೆನಸಿ ಲೋರೆಂಟ್ ಹೇಳಿದ— "ಅದೊಂದು ಪೀಡೆ. ಅವನನ್ನು ಎಲ್ಲಿಗಾದರೂ ದೂರ ಅಟ್ಟಬೇಕು."

"ಹೌದು. ದೂರ, ಬಲುದೂರ......ಅಲ್ಲಿಂದ ಮರಳಲಾರದಂತೆ ಆಗಬೇಕು! ಆದರೆ ಅಂತಹವರಿಗೆ ಆಯುಷ್ಯ ಹೆಚ್ಚು ನಮ್ಮ ಹೆಣವನ್ನು ನೋಡುವವರೆಗೂ ಬದುಕುವರು" ಎಂದಳಾಕೆ.

"ನಾಳೆ ಬಾ, ಥೇರಸಾ."

"ಇಲ್ಲ, ನೀನು ಒಪ್ಪಿದಲ್ಲಿ ಇವತ್ತೇ ನಾನು ಕೆಮಿಲ್‌ನಿಗೆ ಎಲ್ಲ ಹೇಳಿ ಕಾಯಂ ಇಲ್ಲಿಗೆ ಬಂದುಬಿಡುವೆ. ಇಲ್ಲಿಯೆ ಇರುವೆ... ಆದರೆ ನನ್ನಿಂದ ನಿನಗೆ ತೊಂದರೆಯಾಗಬಾರದಲ್ಲ."

"ನೀನು ಹೇಳಿದ್ದೆ ನಿಜ. ಕೆಮಿಲ್ ಸತ್ತರೆ..."

"ಹೌದು, ಹೌದು. ನಾವು ಮದುವೆಯಾಗಬಹುದು; ಯಾರಿಂದಲೂ ಮರೆಮಾಡಬೇಕಿಲ್ಲ... ನಾವು ನಮ್ಮಷ್ಟಕ್ಕೆ......!"

ಆಕೆ ಎದ್ದುನಿಂತಳು. "ಲೋರೆಂಟ್, ಕೆಲವರಿಗೆ ಅನಿರೀಕ್ಷಿತ ಸಾವು ಬರುತ್ತದೆ. ಆದರೆ ಅವೆಲ್ಲಾ......ನಮ್ಮ ಅನುಕೂಲಕ್ಕಲ್ಲ"

"ನಿನಗೆ ಇಲ್ಲಿಗೆ ಬರಲಾಗುವುದಿಲ್ಲವೆನ್ನುವುದನ್ನು ಬಲ್ಲೆ. ನಾನು ಯೋಚಿಸುತ್ತೇನೆ. ಸ್ವಲ್ಪ ಸಮಯ ನಮ್ಮಿಬ್ಬರ ಭೇಟಿಯಾಗದಿದ್ದರೂ, ನೀನು ಹೆದರಬೇಡ; ನಾನು ಎಲ್ಲ ಸರಿಪಡಿಸುತ್ತೇನೆ."

ಬಾಗಿಲು ತೆರೆಯಲೆಳಸುತ್ತಿದ್ದಂತೆಯೆ ಆತ ಆಕೆಯನ್ನು ತೋಳಸೆರೆಯಲ್ಲಿ ಸಿಲುಕಿಸಿ "ನೀನು ನನ್ನವಳು. ನಾನು ಕರೆದಾಗ— ಆ ಕ್ಷಣವೇ ಹೊರಟು ಬರುವೆನಾಗಿ ಆಣೆ ಮಾಡು." ಎಂದ.

"ನಿಜ, ನಿನ್ನವಳೆ! ನನ್ನನ್ನು ನಿನಗೆ ಬೇಕಾದಂತೆ ನಡೆಸಿಕೊ" ಮತ್ತೊಮ್ಮೆ ಇಬ್ಬರೂ ಬಲವಾಗಿ ಅಪ್ಪಿಕೊಂಡರು ಮರುಗಳಿಗೆಯಲ್ಲಿಯೆ ಆಕೆ ಅಲ್ಲಿಂದ ಕಾಲು ಕಿತ್ತಳು.

ಅವಳ ಕಾಲ ಸದ್ದು ಮಾಯವಾಗುತ್ತಲೇ ಲೋರೆಂಟ್ ಕೋಣೆಗೆ ಮರಳಿದ. ಹಾಸಿಗೆ ಇನ್ನೂ ಬೆಚ್ಚಗಿತ್ತು. ಆಗೂ ಆಕೆಯ ಮೈಯ ವಾಸನೆ ಹೊಮ್ಮಿ ಬಂತು. ತನ್ನ ಮುಖವನ್ನು ಅದರಲ್ಲಿ ಹುದುಗಿಸಿದ.

ಆ ರಾತ್ರಿ ಆತನ ತಲೆಯಲ್ಲಿ ಒಂದೇ ವಿಚಾರ. ಥೇರಸಾ ಅಲ್ಲಿಗೆ ಬರುವ ವರೆಗೆ, ತನ್ನ ಗೆಳೆಯನನ್ನು ಇಲ್ಲವಾಗಿಸುವ ಉಪಾಯ ಆತನ ಮನಸ್ಸಿಗೆ ಹೊಳೆದಿರಲಿಲ್ಲ. ಕೆಮಿಲ್‌ನ ಜೀವನ ಕಥೆಯನ್ನು ಬೇಗನೆ ಮುಗಿಸಿಬಿಟ್ಟರೆ? ತನ್ನ ತಂದೆಯಂತೂ ಬೇಗ ಸಾಯಲಾರ; ಅಂದರೆ ಹಣ-ಆಸ್ತಿ ಸಿಗುವಂತಿಲ್ಲ. ಅದೇ ಕೆಮಿಲ್ ಇಲ್ಲವಾದರೆ ತಾನು ಥೇರಸಾಳನ್ನು ಕಾಲಕ್ರಮೇಣ ಮದುವೆಯಾಗಬಹುದು, ಮದಾಂ ರೇಕ್ವಿನ್‌ಳ ಮರಣದ ಬಳಿಕ ಆಕೆಯ ಆಸ್ತಿಯ ವಾರಸುದಾರನೂ ಆಗಬಹುದು, ಚಾಕರಿ ಮಾಡಬೇಕೆಂದೇ ಇಲ್ಲ. ಅದೇ ಅವಳು ಹೇಳಿದಂತೆ, ಓಡಿಹೋದರೆ ಹಣದ ತಾಪತ್ರಯ ತಪ್ಪಿದ್ದಲ್ಲ, ಇದೇ ಸರಿ. ಕೆಮಿಲ್‌ನನ್ನು ಮುಗಿಸಬೇಕು!

ನಿದ್ದೆಯ ಜೋಂಪು ಬಂತು. ಸೋತ ಕಣ್ಣುಗಳು ಮುಚ್ಚಿಕೊಳ್ಳುವಾಗ ಮನಸ್ಸಿನ ಮೂಲೆಯಲ್ಲಿ ಕ್ಷೀಣ ಸ್ವರ ಒಂದೇ ಸಮನೆ ಗುಂಯಿಗುಡುತ್ತಿತ್ತು—

ನಾನು ಅವನನ್ನು ಕೊಲ್ಲಬೇಕು, ನಾನು ಅವನನ್ನು ಕೊಲ್ಲಬೇಕು...

*

ಮೂರು ವಾರಗಳು ಕಳೆದ ಬಳಿಕ ಲೋರೆಂಟ್ ಹಿಂದಿನಂತೆ ಅಂಗಡಿಗೆ ಬರಲಾರಂಭಿಸಿದ. ಆತನ ಮುಖ ಬಾಡಿ, ಇಳಿದು ಹೋಗಿತ್ತು— ಕಾಯಿಲೆ ಬಿದ್ದವನಂತೆ. ಮಾತು ಕಡಿಮೆ; ನಗುವುದೂ ಹಿಂದಿನಂತಿಲ್ಲ. ಆದರೆ ಕೆಮಿಲ್‌ನ ಜತೆಯಲ್ಲಿ ಆತನ ಆಪ್ತನಂತೆಯೇ ನಟಿಸುವ. ಇದನ್ನು ಕಂಡು ಮರುಕದಿಂದ ಮದಾಂ ರೇಕ್ವಿನ್ ಪ್ರತಿರಾತ್ರಿ ಹೊಸ ಭಕ್ಷ್ಯ-ಪಲ್ಯಗಳನ್ನು ತಯಾರಿಸಿ ಬಡಿಸಿದಳು. ಆತನನ್ನು ಚೇತರಿಸಲು ಪ್ರಯತ್ನಿಸಿದಳು.

ಪ್ರೇಮಿಗಳು ಪೇಚು ಬಿದ್ದರು. ಲೋರೆಂಟನ

ಕೋಣೆಯಲ್ಲಿ ಕೂಡಿದ ಬಳಿಕ ಏಕಾಂತದಲ್ಲಿ ಅವರು ಸಂಧಿಸಿದ್ದಿಲ್ಲ. ಸಂಜೆ ಮನೆಯಲ್ಲಿ ಪರಸ್ಪರ ಸಹಜ ಭೇಟಿಯಾದಾಗಲೆಲ್ಲ ಅವರ ಸಂಯಮ ಸಡಿಲಾಗುತಿತ್ತು. ಸಂದರ್ಭ ಸಿಕ್ಕಿದಾಗಲೆಲ್ಲ ಒಬ್ಬರಿನ್ನೊಬ್ಬರ ಕೈಹಿಡಿದು ಹಿಚುಕುವರು; ಆ ಸ್ಪರ್ಶ ಕಾಮದ ಕಿಡಿಗೆ ಕೊಳ್ಳಿಯಿಟ್ಟಂತಾಗುತಿತ್ತು. ಅವರು ಅಷ್ಟರಿಂದಲೇ ತೃಪ್ತರಾಗಬೇಕೆ ವಿನಾ ಮತ್ತೇನು ಮಾಡುವುದು?

ಮುಂದೆ ಒಂದು ರಜೆಯ ದಿನ ಸನಿಹದ ಉಪನಗರದಲ್ಲಿ ವನಭೋಜನದ ಕಾರ್ಯಕ್ರಮವನ್ನು ಏರ್ಪಡಿಸಲಾಯಿತು. ಕಾಲು ಬಾತು ಹೋದುದರಿಂದ ಮದಾಂ ರೇಕ್ವಿನ್ ಮನೆಯಲ್ಲಿಯೆ ಉಳಿದಳು. ಕೆಮಿಲ್, ಲೋರೆಂಟ್ ಮತ್ತು ಥೇರಸಾ ಮೂವರೂ ಸ್ವಲ್ಪ ದೂರ ಗಾಡಿಯಲ್ಲಿ ಹೋದರು; ಮತ್ತೆ ಕೆಳಗಿಳಿದು ನಡೆಯತೊಡಗಿದರು.

ನಡುಹಗಲು, ಬಿಸಿಲ ಬೇಗೆ ಪ್ರಖರವಾಗಿತ್ತು. ಗಂಡನ ತೋಳನ್ನು ಆಧರಿಸಿ ಥೇರಸಾ ನಡೆಯುತ್ತಿದ್ದಳು. ಆತನೋ ಕರವಸ್ತ್ರದಿಂದ ಮುಖ ಮರೆಮಾಡುತ್ತ ಮುಂದುವರಿಯುತ್ತಿದ್ದ. ಲೋರೆಂಟ್ ಮಾತ್ರ ಯಾವುದರ ಪರಿವೆಯಿಲ್ಲದೆ, ಶಿಳ್ಳು ಹಾಕುತ್ತ ಪ್ರಿಯತಮೆಯೆಡೆಗೆ ಕಣ್ಣು ಹರಿಸುತ್ತ ಸಾಗಿದ್ದನು.

ಮರದ ನೆಳಲು. ಶಾಂತ ನಿರ್ಜನ ಸ್ಥಳ. ಅನತಿ ದೂರದಲ್ಲಿ ಹರಿಯುವ ನದಿಯ ಕಲಕಲ ನಿನಾದ ಕಿವಿಗೆ ಕೇಳಿಸುತಿತ್ತು. ವಿಶ್ರಾಂತಿಗೆಂದು ಅಲ್ಲಿಯೆ ಠಾಣೆ ಹೂಡಿದರು

ಕೆಮಿಲ್ ತನ್ನಷ್ಟಕ್ಕೆ ನೆಲದ ಮೇಲೆ ಬಿದ್ದುಕೊಂಡ. ತುಸು ಅಂತರದಲ್ಲಿ ಥೇರಸಾ ಕಾಲು ಚಾಚಿ ಕುಳಿತಳು. ಮೊಣಕಾಲು ಕಾಣುತ್ತಿದ್ದುದರೆಡೆ ಆಕೆಗೆ ಪರಿವೆಯಿಲ್ಲ. ಅದನ್ನೇ ಲೋರೆಂಟ ಹಸಿದ ಕಣ್ಣುಗಳಿಂದ ನೋಡುತ್ತಿದ್ದ.

ಒಂದು ತಾಸು ಕಳೆದಿರಬೇಕು, ಕೆಮಿಲ್ ನಿದ್ದೆ ಹೋದ. ಆತನ ಗೊರಕೆ ಕೇಳಿದವನೇ ಲೋರೆಂಟ್ ಎದ್ದು ಥೇರಸಾಳ ಬಳಿ ಸಾರಿದ; ಆಕೆಯ ಪಾದವನ್ನು ಮುದ್ದಿಸಿದ, ಕಾಲನ್ನು ಮೆದುವಾಗಿ ಒತ್ತತೊಡಗಿದ. ಸ್ಪರ್ಶಕ್ಕೆ ಕಾವೇ

ರಿತು, ರಕ್ತದ ಒತ್ತಡ ಇಮ್ಮಡಿಸಿತು.

ಆಕೆಯಿಂದ ಒಂದು ಹೆಜ್ಜೆ ದೂರದಲ್ಲಿ ಹ್ಯಾಟಿನಿಂದ ಮುಖ ಮರೆ ಮಾಡಿದ ಕೆಮಿಲ್‌ನ ಬಡಕಲು ದೇಹ ಬಿದ್ದುಕೊಂಡಿದ್ದಿತು. ಇನ್ನೂ ಗೊರಕೆ ಕೇಳುತ್ತಿತ್ತು. ಲೋರೆಂಟ್ ಅವನ ಮುಖವನ್ನು ತುಳಿಯಲೆಂದು ಕಾಲೆತ್ತಿದ! ಥೇರಸಾ ವಿವರ್ಣಳಾದಳು. ಭಯಾನಕ ದೃಶ್ಯವನ್ನು ನೋಡಲೊಲ್ಲೆನೆಂದು ಕಣ್ಮುಚ್ಚಿಕೊಂಡಳೇ ವಿನಾ ತಪ್ಪಿಸಲೆಳಸಲಿಲ್ಲ. ಆದರೆ ಲೋರೆಂಟ್ ಮಾತ್ರ ಎತ್ತಿದ ಕಾಲನ್ನು ಹಾಗೆಯೆ ಕೆಳಗೆ ಸರಿಸಿದನು. ತನ್ನದು ಮೂರ್ಖ ವರ್ತನೆ ಎಂದು ಆತನಿಗೆ ಅರಿವಾಯಿತು. ಆತ ಹರಿಯುವ ನೀರನ್ನು ನಿರೀಕ್ಷಿಸುತ್ತ ಕುಳಿತನು. ಒಮ್ಮೆಲೆ ಆತನ ಮುಖವರಳಿತು. ಆತನಿಗೆ ಉಪಾಯ ಹೊಳೆಯಿತು! ತಕ್ಷಣ ಕೆಮಿಲ್‌ನನ್ನು ನಿದ್ರೆಯಿಂದ ಎಬ್ಬಿಸಿದ. ಥೇರಸಾ ಎದ್ದು ನಿಂತಳು. ಮೂವರೂ ಮುಂದಕ್ಕೆ ಸಾಗಿದರು. ನದಿಯ ದಡಕ್ಕೆ ಬಂದರು.

"ಊಟಕ್ಕೆ ಇನ್ನೂ ಒಂದು ತಾಸಿದೆ. ದೋಣಿಯಲ್ಲಿ ಕುಳಿತು ತುಸು ಅಡ್ಡಾಡಿ ಬರೋಣ" ಎಂದು ಸೂಚಿಸಿದವನೇ ಲೋರೆಂಟ್ ದೋಣಿಯನ್ನು ಬಾಡಿಗೆಗೆ ಪಡೆದ. ಆತ ಆರಿಸಿದ ದೋಣಿಯನ್ನು ನೋಡುತ್ತ ಕೆಮಿಲ್ ಅಂದ—

"ಇದರಲ್ಲಿ ಕುಳಿತರೆ ದೇವರೇ ಗತಿ! ಅತ್ತಿತ್ತ ಸರಿದರೆ ನೀರಿಗೆ ಬೀಳುವುದೇ ಸೈ."

ಕೆಮಿಲ್‌ನಿಗೆ ಬಾಲ್ಯದಿಂದಲೂ ನೀರೆಂದರೆ ಹೆದರಿಕೆ. ಆತನಿಗೆ ಈಜು ಬಾರದು. ಆದರೆ ಲೋರೆಂಟ್ ಈಜುವುದರಲ್ಲಿ, ಹುಟ್ಟು ಹಾಕುವುದರಲ್ಲಿ ಪ್ರವೀಣ. ಮೊಣಕಾಲಿನಷ್ಟು ಆಳದ ನೀರಿನಲ್ಲಿ ನಿಲ್ಲುವುದಕ್ಕೂ ಹೆದರುತ್ತಿದ್ದ ಕೆಮಿಲ್‌ನಿಗೆ ಆಳ ಪ್ರವಾಹವನ್ನು ಕಂಡು ನಡುಕವುಂಟಾಗಿತ್ತು.

"ಬಾ, ಬಾ ನಿನಗೆ ಯಾವಾಗಲೂ ಭಯ."

—ದೋಣಿಯಲ್ಲಿ ಒಂದು ಕಾಲಿಡುತ್ತ ಲೋರೆಂಟ್ ಗೆಳೆಯನನ್ನು ಕರೆದ. ಕೆಮಿಲ್ ಹಾಗೂ ಹೀಗೂ ದೋಣಿಯನ್ನೇರಿ ಕುಳಿತ. ಗೆಳೆಯ ಹತ್ತುವಾಗ ಅಲ್ಲಾಡದಿರಲೆಂದು ದೋಣಿಯನ್ನು ಲೋರೆಂಟ್ ಗಟ್ಟಿ ಹಿಡಿದುಕೊಂಡು ದಡದ

ಮೇಲೆ ನಿಂತಿದ್ದ. ತನ್ನ ಬಳಿ ನಿಂತ ಥೇರಸಾಳಿಗೆ "ಜಾಗ್ರತೆಯಿಂದಿರು! ನಾನು ಅವನನ್ನು ನೀರಿಗೆಸೆಯುತ್ತೇನೆ. ನೀನು ಸುಮ್ಮನಿದ್ದುಬಿಡು. ಎಲ್ಲವೂ ಸರಿಹೋಗುವುದು" ಎಂದ.

ಲೋರೆಂಟ್ ಮೆಲುದನಿಯಲ್ಲಿ ಹೇಳಿದಾಗ ಆ ಹೆಣ್ಣು ನಿಸ್ತೇಜಳಾದಳು, ಮನಸ್ಸಿನೊಳಗೆ ತುಮುಲ ಯುದ್ಧವಾಯಿತು ; ತನ್ನನ್ನು ಸಾವರಿಸಿಕೊಳ್ಳುವುದು ಕಷ್ಟವಾಗಿ ಅವುಡು ಕಚ್ಚಿಕೊಂಡಳು.

"ನೋಡು, ದೋಣಿಗಿಳಿಯಲು ಥೇರಸಾ ಕೂಡ ಹಿಂಜರಿಯುತ್ತಾಳೆ" ಎಂದು ಕೆಮಿಲ್ ಸಹಜವಾಗಿ ನುಡಿದ. ಆಮೇಲೆ ಆಕೆಯೂ ದೋಣಿಯಲ್ಲಿ ಕುಳಿತಳು. ಲೋರೆಂಟ್ ಹುಟ್ಟು ಹಾಕಿ, ದೋಣಿ ಸಾಗಿಸಿದ.

ಬಿಸಿಲು ಮರೆಯಾಗತೊಡಗಿತು. ದೋಣಿ ದಂಡೆಯಿಂದ ಬಹು ದೂರ ಸಾಗಿತ್ತು. ಪ್ರವಾಹದ ಗತಿಯಲ್ಲಿಯೆ ದೋಣಿಯನ್ನು ಬಿಟ್ಟು ಹುಟ್ಟನ್ನು ಲೋರೆಂಟ್ ಮೇಲಿಟ್ಟ.

ಕೆಮಿಲ್ ಕೆಳಗೆ ಬಾಗಿ ಬೆರಳುಗಳಿಂದ ನೀರನ್ನು ಮುಟ್ಟಿ "ಅಬ್ಬಾ! ಎಷ್ಟು ತಣ್ಣನೆಯ ನೀರು. ಇದರಲ್ಲಿ ಯಾರು ಈಜುತ್ತಾರೆ?" ಎಂದಾಗ ಲೋರೆಂಟ್ ಬಾಯಿಬಿಡಲಿಲ್ಲ. ಆತ ನಾಲ್ಕೂ ದೆಸೆಯಲ್ಲಿ ನೋಡುತ್ತಾ ಮನಸ್ಸಿನಲ್ಲಿ ಲೆಕ್ಕ ಹಾಕುತ್ತಿದ್ದ. ಥೇರಸಾ ಸ್ವಸ್ಥ ಕುಳಿತಿದ್ದಳು, ಕಾಯುತಿದ್ದಳು.

ಎಲ್ಲ ಅನುಕೂಲವೆಂದು ಮನಗಂಡಾಕ್ಷಣ ಲೋರೆಂಟ್ ಎದ್ದು ಕೆಮಿಲ್‌ನ ಹಿಂದೆ ನಿಂತು ಅವನ ರಟ್ಟೆಗಳನ್ನು ಹಿಡಿದ.

"ದಯವಿಟ್ಟು ದೋಣಿಯಲ್ಲಿರುವಾಗ ಆಟವಾಡಬೇಡ—" ಕೆಮಿಲ್ ಹೇಳಿದ. ಗೆಳೆಯನ ಮಾತಿಗೆ ಉತ್ತರ ಕೊಡದೆ ಲೋರೆಂಟ್ ತನ್ನ ಹಿಡಿತವನ್ನು ಬಿಗಿಮಾಡಿ ಅವನನ್ನು ಅರ್ಧ ಎತ್ತಿದ. ಕೆಮಿಲ್ ಕಂಗೆಟ್ಟು ತಿರುಗಿದಾಗ ಗೆಳೆಯನ ಮುಖ ವಿಕಾರವಾದುದು ಕಾಣಿಸಿತು. ಆತ ಚೀರಬೇಕೆನ್ನುವಾಗ ಕೈಯೊಂದು ಕೊರಳು ಹಿಚುಕಿತು. ಪ್ರಾಣಸಂಕಟದಿಂದ ಪಾರಾಗಲು ದೋಣಿಯ ತಳದಲ್ಲಿಯೇ ಬೀಳುವಂತೆ ಕೆಮಿಲ್ ಹೆಣಗಿದ. ಆದರೆ ಆ ಕುತ್ತಿಗೆಯ ಮೇಲಿನ ಹಿಡಿತ ಪ್ರಾಣವನ್ನು ಹಿಂಡುತ್ತಿತ್ತು.

"ಥೇರಸಾ ಥೇರಸಾ... ನನ್ನನ್ನು ಉಳಿಸು ಥೇರಸಾ."

ಉಸಿರು ಕಟ್ಟುತ್ತಿದ್ದಂತೆಯೇ ಆತ ಕಿರುಚಿದ. ಆಕೆ ಸ್ತಂಭಿತಳಾದವಳಂತೆ ದೋಣಿಯ ಅಂಚನ್ನು ಬಿಗಿ ಹಿಡಿದು ನೋಡುತ್ತಿದ್ದಳು.

"ಥೇರಸಾ... ಥೇರಸಾ..."

ಆ ಕ್ಷೀಣ ಸ್ವರ ಮೊರೆಯಿಟ್ಟಾಗ ಆಕೆಗೆ ಬಿಕ್ಕಳಿಕೆ ಬಂತು. ಬವಳಿ ಬಂದು ಅಲ್ಲಿಯೇ ಬಿದ್ದುಬಿಟ್ಟಳು.

ಲೋರೆಂಟ್ ಕೆಮಿಲ್‌ನ ಕತ್ತನ್ನು ಇನ್ನಷ್ಟು ಅದುಮಿ, ದೋಣಿಯ ಅಂಚನ್ನು ಬಿಗಿ ಹಿಡಿದ. ಅವನ ಕೈ ಹಿಡಿತವನ್ನು ತಪ್ಪಿಸಿ ನೀರಿಗೆಸೆಯಲೆಂದು ಎತ್ತಿದ. ನೋವಿನಿಂದ ನರಳುತ್ತಿದ್ದ ಕೆಮಿಲ್ ಒಮ್ಮೆಲೆ ಎದುರಾಳಿಯ ಕತ್ತಿನ ಕೆಳಗಿನಂಚಿನೆಡೆ ಕಚ್ಚಿದ. ನೋವಿನಾವೇಶದಿಂದ ಆ ಜಡ ಪ್ರಾಣಿಯನ್ನು ನೀರಿಗೆಸೆಯುವಾಗ, ಕಚ್ಚಿಹಿಡಿದ ಹಲ್ಲುಗಳೆಡೆ ಚರ್ಮದ ತುಣುಕೊಂದು ಕಿತ್ತು ಹೋಯಿತು. ಪ್ರವಾಹಕ್ಕೆ ಬೀಳುತ್ತಿದ್ದಂತೆ ಕೆಮಿಲ್ ಮತ್ತೊಮ್ಮೆ ಕಿರುಚಿದ; ನೀರಿನಲ್ಲಿ ಮೂರು ಸಲ ಮುಳುಗಿ ಮೇಲಕ್ಕೆ ಕಾಣಿಸಿದ. ಆ ಬಳಿಕ ಕಣ್ಣಿಗೆ ಕಾಣಿಸದಾದ.

ಲೋರೆಂಟ್ ಒಂದು ಕ್ಷಣವನ್ನೂ ಹಾಳು ಮಾಡಲಿಲ್ಲ. ಕುತ್ತಿಗೆಯ ಗಾಯದ ಮೇಲೆ ಕಾಲರ್‌ನ್ನೇರಿಸಿದ. ದೋಣಿಯನ್ನು ಬೇಗನೆ ಹಿಂದಕ್ಕೆ ಸರಿಸಿ ನೀರು ಕಡಿಮೆಯಾಗುತ್ತಲೆ ಪ್ರಜ್ಞಾಶೂನ್ಯಳಾದ ಹೆಣ್ಣಿನೊಂದಿಗೆ ಕೆಳಕ್ಕೆ ಹಾರಿ, ದೋಣಿಯನ್ನು ಕವುಚಿದನು! ಗಟ್ಟಿಯಾಗಿ ಕಿರುಚಿದನು!

ಆತನೆಣಿಸಿದಂತೆಯೇ ಆಯಿತು. ದೂರದಲ್ಲಿದ್ದ ಇನ್ನೊಂದು ದೋಣಿ ಇವರ ಸಹಾಯಕ್ಕೆ ಧಾವಿಸಿ ಬಂತು. ಅನಾಹುತವನ್ನು ಊಹಿಸಿದವರೇ ಥೇರಸಾಳನ್ನು ಮೊದಲು ಎತ್ತಿ ತಮ್ಮ ದೋಣಿಯಲ್ಲಿರಿಸಿದರು, ಲೋರೆಂಟ್‌ನನ್ನು ಮೇಲಕ್ಕೆಳೆದರು. ಆತ ಗೆಳೆಯ ಕಾಣೆಯಾದುದನ್ನು ಬೊಬ್ಬಿಡುತ್ತಾ, ತಡೆಯುತ್ತಿರುವವರನ್ನು ಬದಿಗೆ ಸರಿಸಿ ನೀರಿಗೆ ಹಾರಿದ; ಹಲವು ಸಲ ಮುಳುಗಿ ಗೆಳೆಯನನ್ನು ಹುಡುಕಾಡಿದವನಂತೆ ಮಾಡಿದ. ಕೊನೆ

ಗೊಮ್ಮೆ ನೆರೆದವರ ಬಲವಂತದಿಂದೆನ್ನುವಂತೆ ದಡವನ್ನು ಸೇರಿದ.

"ತಪ್ಪೆಲ್ಲ ನನ್ನದು. ಅವನಿಗೆ ಮಂಗಚೇಷ್ಟೆ ಮಾಡಲು ಬಿಡಬಾರದಿತ್ತು. ನನ್ನ ಎಚ್ಚರಿಕೆ ಅವನಿಗೆ ಕೇಳಿಸಲಿಲ್ಲ. ಜಿಗಿದಾಡುವಾಗ ಒಮ್ಮೆಗೆ ದೋಣಿ ಮಗುಚಿತು, ನಾವು ನೀರಿಗೆ ಬಿದ್ದೆವು. ಅವನಿಗೆ ತನ್ನ ಹೆಂಡತಿಯದೊಂದೇ ಚಿಂತೆ— ಆಕೆಯನ್ನುಳಿಸುವಂತೆ ನನಗೆ ಬೊಬ್ಬಿಟ್ಟ. ಅವನಿಗೆ ಈಜು ಬಾರದು...ಆದರೂ ಅವನಿಗೆ ಥೇರಸಾಳದೇ ಚಿಂತೆ."

ಪ್ರಜ್ಞೆ ಬಂದಾಕ್ಷಣ ಥೇರಸಾ ಭೂತ ಹಿಡಿದವಳಂತೆ ಕೂಗಿದಳು, ಕಿರುಚಿದಳು, ಬೊಬ್ಬಿಟ್ಟು ಅತ್ತಳು. ಸಮೀಪದ ಹೋಟೆಲಿನ ಒಡತಿಗೆ ಆಕೆಯನ್ನು ತುಸು ನೋಡಿಕೊಳ್ಳುವಂತೆ ಹೇಳಿ ಲೋರೆಂಟ್ ಅಲ್ಲಿಂದ ಹೊರಟ. ಮದಾಂ ರೇಕ್ವಿನ್‌ಳಿಗೆ ಈ ದುಃಖದ ಸುದ್ದಿ ತಿಳಿಸಬೇಕಷ್ಟೆ. ಆದರೆ ಥೇರಸಾಳಿಗೆ ಎಚ್ಚರ ಬಂದಾಗ ತಾನು ಎದುರಿದ್ದರೆ ಆಕೆ ಹುಚ್ಚು ಹುಚ್ಚಾಗಿ ಮಾತನಾಡಿ ನಿಜ ಸ್ಥಿತಿಯನ್ನು ತಿಳಿಸಬಹುದೆಂಬ ಹೆದರಿಕೆ ಆತನಿಗೆ ಹುಟ್ಟಿತ್ತು. ಅಲ್ಲದೆ ಆತನಿಗೆ ಎಲ್ಲವನ್ನು ಯೋಚಿಸಿ ಯೋಜಿಸಲು ಅವಕಾಶ ಬೇಕಿತ್ತು.

ಪ್ಯಾರಿಸ್‌ಗೆ ಬಂದವನೇ ಲೋರೆಂಟ್ ನೇರಾಗಿ ಮಿಚಾಡ್‌ನ ಮನೆಯೆಡೆ ಸಾಗಿದ. ಆಗ ರಾತ್ರಿ ಒಂಬತ್ತಾಗಿತ್ತು. ಮಾಜಿ ಪೋಲೀಸ ಅಧಿಕಾರಿಯು ಮಗ ಮತ್ತು ಸೊಸೆಯರೊಂದಿಗೆ ಊಟ ಮುಗಿಸಿದ್ದರೂ ಮೇಜಿನ ಬಳಿಯೆ ಕುಳಿತಿದ್ದುದನ್ನು ಕಂಡು ಇದೇ ತಕ್ಕ ವೇಳೆ ಎನ್ನುತ್ತ ಒಳಹೊಕ್ಕು ಅನಾಹುತವನ್ನು ವಿವರಿಸಿದ, ದುಃಖದ ನಟನೆಯನ್ನು ಯಶಸ್ವಿಯಾಗಿ ಮಾಡಿದ.

"ನಾನು ನಿಮ್ಮಲ್ಲಿಗೇನೆ ನೇರಾಗಿ ಬಂದೆ. ಕೆಮಿಲನ ತಾಯಿಗೆ ಈ ದುಃಖದ ಸುದ್ದಿಯನ್ನು ಹೇಗೆ ತಿಳಿಸುವುದೆಂದು ನನಗೆ ತೋಚುವುದಿಲ್ಲ. ಒಬ್ಬನೇ ಹೋಗುವುದು ಕೂಡಾ: ನನ್ನಿಂದಾಗದು. ದಯವಿಟ್ಟು ನೀವೂ ನನ್ನ ಜತೆಗೆ ಬರಬೇಕು ಸ್ವಾಮಿ."

ಆ ಕತೆಯನ್ನು ಕೇಳಿ ಸುಜೇನಾ ಬಿಳುಪೇರಿದಳು. ಒಲಿವರ್‌ನಿಗೆ ಮರಣ ವಾರ್ತೆಯೆಂದರೆ ಆಗದು. ಮಿಚಾಡ್ ಮಾತ್ರ ನಡುನಡುವೆ ಉದ್ಗರಿಸಿದ. ಆತನ ಕಣ್ಣುಗಳು ತುಂಬಿಬಂದಿದ್ದುವು.

"ದೇವ ದೇವಾ! ಇದೇನು ಮಾಡಿದೆ? ಆ ಮುದಿ ತಾಯಿಗೆ ಏನೆಂದು ಹೇಳುವುದು? ಹೌದು, ನೀನಿಲ್ಲಿಗೆ ಬಂದುದು ಒಳ್ಳೇದೆ ಆಯಿತು. ನಡೆ, ಹೋಗೋಣ."

—ಆತ ಎದ್ದ, ಹ್ಯಾಟನ್ನು ಏರಿಸಿದ; ಮಗ-ಸೊಸೆಯರನ್ನು ಹಿಂಬಾಲಿಸುವಂತೆ ಹೇಳಿ ಮುಂದುವರಿದ.

"ನೀನು ಇಲ್ಲೇ ಇರು. ನಿನ್ನೊಬ್ಬನನ್ನೇ ನೋಡಿದರೆ ಆ ಮುದುಕಿ ಎಚ್ಚರದಪ್ಪಬಹುದು. ನಾನು ಈ ಸುದ್ದಿಯನ್ನು ಮೊದಲು ತಿಳಿಸುವುದುತ್ತಮ."

ಮಗನ ದುರ್ಮರಣವನ್ನು ಮದಾಂ ರೇಕ್ವಿನ್ ಗ್ರಹಿಸಿದಳು. ಪ್ರವಾಹದ ನೀರಿನಲ್ಲಿ ಮುಳುಗಿ ಎದ್ದು ನೀರು ಕುಡಿದು ಉಬ್ಬಿದ ಮಗನ ಹೆಣ ಆಕೆಯ ಕಣ್ಮುಂದೆ ಕಾಣಿಸಿತು. ಹಿಂದೆ, ಆತ ಸಣ್ಣವನಿರುವಾಗ ಆಕೆ ಮೃತ್ಯುವಿನೊಡನೆ ಸೆಣಸಾಡಿದಳು. ಆದರೆ ಈಗ? ದುಃಖ ಒತ್ತರಿಸಿತು, ತಾನೂ ಸತ್ತರೆ ಒಳಿತೆನಿಸಿತಾಕೆಗೆ. ಸುಜೇನಾಳನ್ನು ಅಲ್ಲಿಯೆ ಬಿಟ್ಟು ಮುದುಕಿಯನ್ನು ಸಂತೈಸುವಂತೆ ಹೇಳಿ, ತಂದೆ-ಮಗ ಹೊರಬಂದರು. ಲೋರೆಂಟನ ಜತೆಯಲ್ಲಿ ಥೇರಸಾ ಇದ್ದಲ್ಲಿಗೆ ಧಾವಿಸಿದರು.

ಅಲ್ಲಿಗೆ ಹೋಗಿ ನೋಡುವಾಗ ಆಕೆಯ ಮೈ ಸುಡುತ್ತಿತ್ತು. ಇದು ತಣ್ಣೀರಿನಲ್ಲಿ ಮುಳುಗಿದುದರ ಫಲವೆಂದು ಅವರು ನಂಬಿದರು. ಆದರೆ ಆಕೆ ತುಂಬಾ ಹೆದರಿದ್ದಳು. ಎಲ್ಲ ಬಯಲಾಗಬಹುದೆಂದು ನಡುಗುತ್ತಿದ್ದಳು. ಕತ್ತಿನ ವರೆಗೆ ಮುಸುಕನ್ನೆಳೆದು ಕಣ್ಮುಚ್ಚಿಕೊಂಡು ಸುತ್ತು ಇದ್ದವರ ಮಾತನ್ನು ಆಲಿಸುತ್ತಿದ್ದಳು.

ಮಿಚಾಡ್ ಸಮಾಧಾನದ ಮಾತುಗಳನ್ನು ಹೇಳಿದಾಗ ಆಕೆ ಗೋಡೆಯೆಡೆ ಮುಖ ತಿರುವಿ ಕಣ್ಣೀರು ಕರೆಯತೊಡಗಿದಳು.

ಕೆಳಗೆ ಪೋಲೀಸ್ ಅಧಿಕಾರಿ ವಿಚಾರಣೆ ನಡೆಸಿ ವರದಿ ಬರೆಯುತ್ತಿದ್ದ. ಒಲಿವರ್ ತನ್ನ ತಂದೆಯ ಪರಿಚಯ ಮಾಡಿದ್ದುದರಿಂದ ಎಲ್ಲ ಸುಲಭದಲ್ಲಿ ಮುಗಿಯಿತು. ಲೋರೆಂಟನ ಸಾಹ-

ಸವನ್ನೂ ವರದಿಯಲ್ಲಿ ಬರೆಸಿದರು—ಸಾಕ್ಷೀ ಜನರು !

ಇದೀಗ ಲೋರೆಂಟನಿಗೆ ತನ್ನ ಗೆಲವು ಸ್ಪಷ್ಟವಾಯಿತು. ತಾನು ಸುರಕ್ಷಿತ ಎನಿಸಿತು. ಪೋಲೀಸರು ಎಲ್ಲವನ್ನು ತಪಾಸಿಸಿದ್ದರು. ಆದರೆ ಸಂಶಯ ತೋರಿದ್ದಿಲ್ಲ.

"ಇವಳನ್ನು ಇಲ್ಲಿಯೇ ಇರಗೊಡುವುದು ಸರಿಯಲ್ಲ, ಮನೆಗೆ ಮರಳೋಣ. ನೀವು ಆ ಬಗ್ಗೆ ಇವಳಿಗೆ ತಿಳಿಹೇಳಿರಿ."

ಲೋರೆಂಟ್ ಮಿಚಾಡ್‌ನ ನೆರವು ಯಾಚಿಸಿದ. ಎಲ್ಲರೂ ತಿಳಿಹೇಳಿದಾಗ ಆಕೆ ಒಪ್ಪಿದಳು. ಒಲಿವರ್‌ನ ತೋಳು ಹಿಡಿದು ಆಕೆ ಕಾರನ್ನೇರಿ ಕುಳಿತಳು.

ಅಂಗಡಿಯೆದುರು ಕಾರು ನಿಂತಿತು. ತಂದೆ-ಮಗ ಮೊದಲು ಇಳಿದುದನ್ನು ಕಂಡು ಲೋರೆಂಟ್ ಮೆಲುಸ್ವರದಲ್ಲಿ ಪ್ರಿಯತಮೆಯನ್ನು ಮಾತನಾಡಿಸಿದ—

"ಧೈರ್ಯ ತಂದುಕೊ, ಚಿನ್ನಾ. ಇನ್ನೂ ನಾವು ಕಾಯಬೇಕು."

"ನನ್ನ ಬಗ್ಗೆ ಚಿಂತಿಸಬೇಡ."

ನಡುಗುವ ದನಿಯಲ್ಲಿ ಉತ್ತರಿಸಿದಳಾಕೆ. ಗಂಡನ ಕೊಲೆಯನ್ನು ಕಂಡಬಳಿಕ ಆಕೆ ಬಾಯಿ ತೆರೆದುದು ಇದೇ ಮೊದಲು.

ಒಲಿವರ್ ಆಕೆಗೆ ಇಳಿಯಲು ನೆರವಾದ. ಲೋರೆಂಟ ಬಾಗಿಲತನಕ ಹಿಂಬಾಲಿಸಿದರೂ ಒಳಕ್ಕೆ ಹೋಗಲಿಲ್ಲ. ಆ ತಂದೆ ಮಕ್ಕಳಿಗೆ ಧನ್ಯವಾದಗಳನ್ನರ್ಪಿಸಿ ತನ್ನ ಕೋಣೆಯನ್ನು ಸೇರಿಕೊಂಡ. ಹಾಸಿಗೆಯಲ್ಲಿ ದೇಹ ಚಾಚಿದವನಿಗೆ ನಿದ್ರೆಯಾವರಿಸಲು ತಡವಾಗಲಿಲ್ಲ.

ಮರುದಿನ ಬೆಳಿಗ್ಗೆ ಎದ್ದು ಮುಖ ತೊಳೆದು ಕನ್ನಡಿಯೆದುರು ನಿಂತಾಗ ಕುತ್ತಿಗೆಯಂಚಿನ ಗಾಯ ಎದ್ದು ಕಂಡಿತು. ಗಾಯ ಸಣ್ಣದು, ಸ್ವಲ್ಪ ಸಮಯದಲ್ಲಿ ಸರಿಹೋಗುವುದು ಎಂದುಕೊಂಡು, ಆತ ಉಡುಪನ್ನು ಧರಿಸಿ ಕಚೇರಿಗೆ ಹೋದನು. ಅದಾಗಲೇ ಪತ್ರಿಕೆಗಳಲ್ಲಿ ಸುದ್ದಿ ಓದಿದ ಸಹೋದ್ಯೋಗಿಗಳು ಲೋರೆಂಟನನ್ನು ಅಭಿನಂದಿಸಿದರು. ಒಂದು ವಾರದ ತನಕ ಅದೇ ಮಾತುಕತೆ.

ದಿನಗಳೆದಂತೆ ಲೋರೆಂಟನ ಮನಃಸ್ಥಿತಿ ಉದ್ವಿಗ್ನವಾಗತೊಡಗಿತು. ಕೆಮಿಲ್ ಪೂರ್ಣ ಸತ್ತದ್ದು ನಿಜವೆ? ಅವನು ಸತ್ತನೆಂಬುದಕ್ಕೆ ದಾಖಲೆಯಾಗಿ ಹೆಣ ಇನ್ನೂ ದೊರಕಿದ್ದಿಲ್ಲ. ದಿನಾಲು ಕಚೇರಿಗೆ ಹೋಗುವಾಗ ಶವದ ಮನೆಯನ್ನು ಸಂದರ್ಶಿಸಲಾರಂಭಿಸಿದ.

ಆ ಶವದ ಮನೆ! ಚಂದ್ರಶಿಲೆಯ ಮೇಲೆ ಹರಹಿದ ಬೆತ್ತಲೆ ಹೆಣಗಳ ಸಾಲು. ವಿಕಾರ ಮುಖ, ಉಬ್ಬಿದ ಹೊಟ್ಟೆ, ಬಾಯಿಬಿರಿದ ಮಾಂಸ ಖಂಡಗಳು...... ಲೋರೆಂಟನಿಗೆ ಕೆಮಿಲ್‌ನನ್ನು ಗುರುತಿಸುವುದು ತೀರಾ ಕಷ್ಟವಾಯಿತು. ಹೆಣಗಳನ್ನು ನೋಡಿ ನೋಡಿ ಬೇಸತ್ತ.

ಒಂದು ವಾರ ಕಳೆಯುವಾಗ ಆತನ ತಾಳ್ಮೆ-ಧೈರ್ಯ ಉಳಿಯಲಿಲ್ಲ. ಕೆಮಿಲ್ ಬದುಕಿ ಇದ್ದು ಮರಳಿ ಬರಬಹುದೆಂಬ ಹೆದರಿಕೆ ಹೆಚ್ಚತೊಡಗಿತು.

ಅಂದು ಬೆಳಿಗ್ಗೆ ಅಲ್ಲಿಗೆ ಹೋಗಿ ಕಿಡಿಕಿಯ ಬಳಿ ನೋಡಿದಾಗ, ಎದೆಗೆ ಚೂರಿ ಇರಿದಂತಾಯಿತು. ಐದು ನಿಮಿಷ ಕಾಲ ಅಲ್ಲೇ ಪ್ರತಿಮೆಯಂತೆ ನಿಂತ.

ಕೆಮಿಲ್‌ನ ಹೆಣ ಭಯಾನಕವಾಗಿತ್ತು. ಹದಿನೈದು ದಿವಸಗಳ ಕಾಲ ನೀರಿನಲ್ಲಿ ಇದ್ದುದರಿಂದ ಬಣ್ಣ ಬದಲಾಗಿತ್ತು. ಮುಖಚರ್ಯ ಬದಲಾಗಿರಲಿಲ್ಲ. ತುಟಿಗಳು ತೆರೆದಿದ್ದವು, ಹಲ್ಲುಗಳ ನಡುವೆ ಕಪ್ಪಿಟ್ಟ ನಾಲಿಗೆ ತುದಿ ತೋರುತ್ತಿತ್ತು. ದೇಹದ ಮಾಂಸವೆಲ್ಲ ಕರಗುವುದಕ್ಕೆ ತಯಾರಾಗಿತ್ತು.

ಅಷ್ಟು ಭಯಾನಕವಾದ ಹೆಣವನ್ನು ಲೋರೆಂಟ್ ಅದುವರೆಗೆ ನೋಡಿರಲಿಲ್ಲ. ಅಲ್ಲಿಂದ ಕಾಲು ಕೀಳುತ್ತಿರುವಾಗ ತನಗೆ ತಾನೇ ಹೇಳಿದ-

"ಅದು, ನಿಜಕ್ಕೂ ನಾನೇ ಮಾಡಿದೆನೇನು ?"

ಆತ ಮಿಚಾಡ್‌ನಲ್ಲಿಗೆ ಹೋದ. ಗೆಳೆಯನ ಹೆಣವನ್ನು ಗುರುತಿಸಿದುದನ್ನು ಹೇಳಿ ಮುಂದಿನ ಕಾರ್ಯಕ್ಕೆ ಸಲಹೆ-ಸಹಾಯವನ್ನು ಕೇಳಿದ. ಕಾನೂನಿಗೆ ಸಂಬಂಧಿಸಿದ ನಿಯಮಗಳನ್ನು ಪೂರೈಸಿ ಹೆಣವನ್ನು ಸ್ವಾಧೀನಪಡಿಸಿಕೊಂಡರು. ಮರಣದ ದಾಖಲೆ ಪತ್ರವೂ ಸಿಕ್ಕಿತು.

ಅಂದಿನಿಂದ ಆತನ ಆಂತರಿಕ ನಡುಕ ಹಾರಿ

ಹೋಯಿತು. ಕೊಲೆಗೆ ಸಂಬಂಧಿಸಿದ್ದೆಲ್ಲವನ್ನೂ ಮರೆತುಬಿಟ್ಟಳೆಂದೇ ಹೇಳಬಹುದು.

ಇತ್ತ ಮೊದಲ ಮೂರು ದಿವಸಗಳ ಕಾಲ ಅಂಗಡಿ ಮುಚ್ಚಿತ್ತು. ಮುದುಕಿ ತನ್ನಷ್ಟಕ್ಕೆ ಬಿಮ್ಮಗೆ ಕುಳಿತುಕೊಳ್ಳುವಳು. ಮಗನ ದುರಂತ ಆಕೆಯ ಮನಸ್ಸಿಗೆ ಧಕ್ಕೆ ಕೊಟ್ಟಿತ್ತು. ಅದರಿಂದ ಆಕೆ ದೈಹಿಕವಾಗಿ ಬಹಳಷ್ಟು ಸೋತಳು.

ಪಕ್ಕದ ಕೋಣೆಯಲ್ಲಿ ಥೇರಸಾ ಗೋಡೆಯ ಕಡೆಗೆ ಮುಖಮಾಡಿ ಕಣ್ಮುಚ್ಚಿ ಮಲಗಿರುತ್ತಿದ್ದಳು. ಸುಜೇನಾ ಮಾತ್ರ ಎರಡೂ ಕೋಣೆಗಳಿಗೆ ಓಡಾಡುತ್ತ ಇಬ್ಬರನ್ನೂ ನೋಡಿಕೊಳ್ಳುತ್ತಿದ್ದಳು.

ಮೂರನೇ ದಿನ ಮುಂಜಾನೆ ಥೇರಸಾ ಎದ್ದು ಕುಳಿತಳು. ಒಮ್ಮೆಲೇ ಸೋದರತ್ತೆಯಿದ್ದಲ್ಲಿಗೆ ಧಾವಿಸಿದಳು. ಒಬ್ಬರನ್ನೊಬ್ಬರು ಕೆಲಕಾಲ ನೋಡಿದರು. ಒಮ್ಮಿಂದೊಮ್ಮೆಲೆ ಆ ಮುದುಕಿ ತನ್ನ ಎರಡೂ ಕೈಗಳನ್ನೆತ್ತಿ ಚಾಚಿದಳು. ಸೊಸೆಯನ್ನು ಬಿಗಿಯಾಗಿ ಎದೆಗವಚಿಕೊಂಡಳು.

"ನೀನಿಲ್ಲದಿರುತ್ತಿದ್ದರೆ, ನಾನು ಯಾಕೆ ಬದುಕಿರಬೇಕು?" ಎಂದಳು.

ಮರುದಿನ ಹಠಹಿಡಿದು ಅತ್ತೆಯೇ ಅಂಗಡಿಯಲ್ಲಿ ಕುಳಿತಳು. ಒಬ್ಬಳಿಗೇನೆ ಹಿಂದಿನಂತೆ ಮೆಟ್ಟಲುಗಳನ್ನು ಇಳಿದು ಬರಲು ಸಾಧ್ಯವಾಗಲಿಲ್ಲ. ಸೊಸೆಯ ನೆರವನ್ನು ಪಡೆದಳು.

*

ಹದಿನೈದು ತಿಂಗಳುಗಳ ತರುವಾಯ—

ಸಮಯ ಸರಿದಂತೆ ದುರಂತದ ಗಾಯ ಮಾಸುತ್ತ ಬಂದಿತ್ತು.

ಲೋರೆಂಟನಾದರೂ ಅಷ್ಟೇ—ಮೊದಲಿನಂತೆಯೆ ದಿನಾಲು ತಪ್ಪದೆ ಬಂದು, ಅಂಗಡಿ ಮುಚ್ಚುವ ತನಕ ಅಲ್ಲೇ ಇದ್ದು, ಆ ಬಳಿಕ ತನ್ನ ಕೋಣೆಗೆ ತೆರಳುವ. ಆದರೆ ಥೇರಸಾ ಆತನನ್ನು ಏಕಾಂತದಲ್ಲಿ ಸಂಧಿಸಲು ಪ್ರಯತ್ನಿಸಲಿಲ್ಲ. ಕೊಲೆಗೆ ಪ್ರೇರೇಪಿಸಿದ ಅವರ ಅತೃಪ್ತ ಬಯಕೆ ಇದೀಗ ಸುಪ್ತಾವಸ್ಥೆ ತಾಳಿತ್ತು. ಎಂದೇ ಸಮಯಾವಕಾಶ-ಸ್ವಾತಂತ್ರ್ಯಗಳಿದ್ದರೂ ಇಬ್ಬರೂ ಒಗ್ಗೂಡಲಿಲ್ಲ. ಒಬ್ಬರನ್ನೊಬ್ಬರು ಕಾಣುವುದನ್ನೂ ತಪ್ಪಿಸುತ್ತಿದ್ದರು! ಅಪ್ಪಿತಪ್ಪಿ ಪರಸ್ಪರರ ಕೈ-ಸ್ಪರ್ಶವಾದಾಗ, ಪೇಚಿನಲ್ಲಿ ಸಿಲುಕಿದವರಂತೆ ವರ್ತಿಸುವರು.

ಥೇರಸಾಳಿಗೆ ದಿನದಿತ್ಯದ ದುಡಿಮೆಯಲ್ಲಿ ಹಿಂದೆಂದೂ ಇಲ್ಲದ ಉತ್ಸಾಹ. ಕೆಲವು ಸಲ ಲೋರೆಂಟ್‌ನ ಬಗ್ಗೆ ಕನವರಿಸುವಳು; ಕೆಲವೊಮ್ಮೆ ಕೆಮಿಲ್‌ನ ವಿಚಾರ ಬಂದು ನಡುಗುವಳು. ಲೋರೆಂಟನೊಡನೆ ಲಗ್ನವಾಗುವುದೆಂದೊಮ್ಮೆ ಯೋಚಿಸುವಳು, ಮತ್ತೊಮ್ಮೆ ಆತನಿಂದ ದೂರ-ಬಲುದೂರ ಓಡಿಹೋಗುವುದೆಂದು ಯೋಚಿಸುವಳು.

ಲೋರೆಂಟನ ಸ್ಥಿತಿಯಾದರೂ ಅಂತೆಯೇ ಸರಿ. ಮೊದಲಿಗೆ ಮನದ ಹೊರೆ ಇಳಿಯಿತೆಂದೆನಿಸಿತು ನಿಜ. ಆ ಬಳಿಕ ಕೊಲೆಯಂತಹ ಕೆಲಸ ತನ್ನಿಂದ ಘಟಿಸಿದ್ದಾದರೂ ಹೇಗೆ ಎಂದುಕೊಳ್ಳುವ. ದಿನಗಳುರುಳಿದಂತೆ ಆತನ ಸ್ವಭಾವವು ಸಾಧುವಾಯಿತು. ಕಚೇರಿಯ ಕೆಲಸದಲ್ಲಿ ನಿಷ್ಠಾವಂತನೆನ್ನಿಸಿದ.

ಹಗಲು ಹೊತ್ತಿನಲ್ಲಿ ಕೆಲಸ. ಮಿಕ್ಕ ವಿಚಾರಗಳಿಗೆಡೆಯಿಲ್ಲ. ರಾತ್ರಿ ನಿದ್ದೆ. ಹೊಟ್ಟೆ ತುಂಬಿಕೊಂಡಿದ್ದರೆ ಸಾಕು, ಯಾವ ವಿಚಾರವೂ ಆತನಿಗೆ ಬೇಡ. ಥೇರಸಾ ಒಂದು ದಿನ ತಾನು ಕೈ-ಹಿಡಿಯುವ ಹೆಣ್ಣೆಂಬ ವಿಚಾರ ಆತನ ಮನಸ್ಸಿನಲ್ಲಿ ಮಿಂಚಿ ಮಾಯವಾಗುತ್ತಿತ್ತು. ಆದರೆ ಈಗ ಆತ ಕಾಯುತ್ತಿದ್ದುದು ಆ ಹೆಣ್ಣಿಗಾಗಿಯಲ್ಲ, ತನ್ನ ಪ್ರಗತಿಗಾಗಿ. ಮದುವೆಯಾಯಿತೆಂದರೆ ಆತ ನೌಕರಿಯನ್ನು ಬಿಟ್ಟು ಚಿತ್ರಿಸುವುದನ್ನು ಮುಂದುವರಿಸುವ. ಅಂದರೆ ಹೊಟ್ಟೆಗಾಗಿ ಈಗಿನಂತೆ ದುಡಿಯಬೇಕಿಲ್ಲ!

ವೇಳೆಗಳೆಯಲೆಂದು ತನ್ನ ಹಳೆಯ ಮಿತ್ರ, ಚಿತ್ರಕಾರನಿದ್ದಲ್ಲಿಗೆ ಲೋರೆಂಟ್ ಹೋದಾಗ ಆತ ಚಿತ್ರ ಬರೆಯುತ್ತಿದ್ದ, ಎದುರಿಗೆ ನಗ್ನ ಯುವತಿಯೊಬ್ಬಳು ಒರಗಿದ್ದಳು. ಗೆಳೆಯನೊಡನೆ ಮಾತನಾಡುತ್ತಿದ್ದರೂ, ಆತನ ಗಮನವೆಲ್ಲ ಆ ಯುವತಿಯೆಡೆಗೇನೇ ಇತ್ತು. ಆಕೆಯಾದರೂ ಆತನೆಡೆ ಪದೇಪದೇ ನೋಡಿ ಮುಗುಳು ನಕ್ಕಳು. ನಂತರ ಆಕೆಯೊಡನೆ ಆತ ಹೊರಟು ಆಕೆಯ ಮನೆಯ ತನಕ ಹಿಂಬಾಲಿಸಿದ. ಮುಂದೆ ಒಂದು ವರ್ಷ ಆಕೆ ಆತನ ದೈಹಿಕ ಸುಖದ ಸಾಧನವಾದಳು.

ಇದೀಗ ಥೇರಸಾಳ ದೇಹಸ್ಥಿತಿ ಸುಧಾರಿಸಿತ್ತು, ಹಿಂದಿನ ಚೆಲುವು ಮರಳಿ ಬಂದಿತ್ತು. ಎಂದೇ ಲೋರೆಂಟನ ಗಮನ ಮತ್ತೆ ಸೆಳೆಯಿತು. ಆಕೆ ಸನಿಹದಲ್ಲಿರುವಾಗಲೆಲ್ಲ ತನ್ನ ಮನಸ್ಸು ಅಸ್ಥಿರ ಗೊಳ್ಳುವುದನ್ನು ಆತ ಅರಿಯದಿಲ್ಲ. ಆದರೆ ಅವಳೊಡನೆ ಮದುವೆಯಾಗುವ ವಿಚಾರ ಹೊಳೆದಾಗಲೆಲ್ಲ ಆತ ದಿಗಿಲುಗೊಳ್ಳುವ. ಒಮ್ಮೆ ಆಕೆಯನ್ನು ಮರೆತುಬಿಡುವುದಾಗಿ ನಿರ್ಧರಿಸಿದ. ಆದರೆ ತಾನು ಕೊಲೆ ಮಾಡಿದುದು ಸುಮ್ಮಗೆ ಏನು? ಆ ಯೋಜನೆ, ಅಮಾನುಷ ಕೃತ್ಯ... ಎಲ್ಲವೂ ಬರಿದೇ ಏನು?

ಆ ವಿಚಾರ ಬಲಿತಂತೆ ಆತನ ಚಡಪಡಿಕೆಯೂ ಹೆಚ್ಚಿತು. ಈ ಮಧ್ಯದಲ್ಲಿ ಆತನ ಸಂಗಾತಿಯಾಗಿದ್ದ ಆ ಹೆಣ್ಣೂ ಹೇಳದೆಕೇಳದೆ ಆತನನ್ನು ಬಿಟ್ಟುಬಿಟ್ಟಿದ್ದಳು. ಲೋರೆಂಟ ಈಗ ಹೆಚ್ಚಿನ ವೇಳೆಯನ್ನು ಅಂಗಡಿಯಲ್ಲಿ ಕುಳಿತು ಕಳೆಯುತ್ತ ಥೇರಸಾಳ ಚಲನವಲನವನ್ನೇ ದಿಟ್ಟಿಸುವ, ಬಯಕೆಯ ಕಿಡಿಯನ್ನು ಕಾರುವ.

ಒಮ್ಮೆ ರಾತ್ರಿ ಅಂಗಡಿಯ ಬಾಗಿಲು ಮುಚ್ಚುವಾಗ, "ಇವತ್ತು ರಾತ್ರಿ ನಿನ್ನ ಕೋಣೆಗೆ ಬರುತ್ತೇನೆ" ಎಂದು ಪ್ರಿಯತಮೆಗೆ ಉದ್ವೇಗದಿಂದ ಹೇಳಿದ.

"ಬೇಡ, ಬೇಡ; ಸ್ವಲ್ಪ ಕಾಯುವುದು ಒಳ್ಳೇದು" -ಆಕೆ ಹಿಂದಕ್ಕೆ ಸರಿದು ಉದ್ಗರಿಸಿದಳು.

"ಇಷ್ಟು ಸಮಯ ನಾನು ಕಾಯಲಿಲ್ಲವೇನು? ನನಗೆ ನೀನು ಬೇಕೇ ಬೇಕು" ಎಂದ.

-ಆಕೆ ಆತನನ್ನು ನೋಡಿದಳು ಆ ಬಳಿಕ ಒಮ್ಮೆಲೆ ನುಡಿದಳು—

"ನಮ್ಮಿಬ್ಬರ ಮದುವೆಗೆ ಮೊದಲಲ್ಲ."

ಲೋರೆಂಟ ಅಲ್ಲಿಂದ ಹೊರಟುಹೋದ. ಆದರೆ ಆತನ ಮನಸ್ಸು ಕದಡಿತ್ತು. ಥೇರಸಾಳ ಸಾನ್ನಿಧ್ಯ ಆತನ ಕಾಮವನ್ನು ಕೆದಕಿತ್ತು. ಮಹಡಿಯನ್ನೇರಿ ಕೋಣೆಯನ್ನು ಸೇರಲು ಆತನ ಮನಸ್ಸು ಅಳುಕಿತು, ಕಾಲು ತಡೆದುವು. ಸನಿಹದ ಮದ್ಯದ ಅಂಗಡಿಯನ್ನು ಹೊಕ್ಕು ಕುಡಿಯುತ್ತಾ ನಡುರಾತ್ರಿಯ ತನಕ ಕುಳಿತ. ಇನ್ನೂ ಅಲ್ಲಿ ಕುಳಿತಿರುವುದು ಅಸಾಧ್ಯವಾದಾಗ ಎದ್ದು ಕೋಣೆಯೆಡೆ ನಡೆದ. ಅವ್ಯಕ್ತ ಹೆದರಿಕೆಯೊಂದು ಆತನನ್ನು ಪೀಡಿಸುತ್ತಿತ್ತು.

ದೀಪ ಆರಿಸಿ ಹಾಸಿಗೆಯ ಮೇಲೆ ಬಿದ್ದುಕೊಂಡು ನಿದ್ರಿಸುವುದಾಗಿ ನಿಶ್ಚಯಿಸಿದ. ದಣಿವು ನಿದ್ದೆಯ ಜೋಂಪು ಆವರಿಸಿತು. ಆಗ ಕೂಡಾ ಒಳ ಮನಸ್ಸಿನಲ್ಲಿ- ಥೇರಸಾಳದೇ ವಿಚಾರ. ಆಕೆಯನ್ನು ಸಂಧಿಸಲೆಂದು ಆಕೆಯ ಕೋಣೆಯ ಬಾಗಿಲನ್ನು ಬಡಿದಾಗ, ಬಾಗಿಲು ತೆರೆದವರು ತೆಳ್ಳಗಿನ ಒಳಅಂಗಿಯನ್ನು ಧರಿಸಿದ ಪ್ರೇಯಸಿಯಲ್ಲ— ಕೆಮಿಲ್! ಶವದ ಮನೆಯಲ್ಲಿ ಕಂಡ ಕೆಮಿಲ್ ವಿಕಟ ನಗೆ ನಗುತ್ತಾ ಕಪ್ಪಿಟ್ಟ ನಾಲಿಗೆಯನ್ನು ಹೊರಚಾಚಿ ಕೈಗಳನ್ನು ಮುಂಚಾಚಿದ.

ಲೋರೆಂಟ ಚೀರಿದ, ಎದ್ದು ಕುಳಿತ. ದೇಹ ಬೆವೆತಿತ್ತು. ಪುನಃ ನಿದ್ರಿಸಲೆಳಸಿದ, ಮತ್ತೆ ಅದೇ ಕನಸು. ಥೇರಸಾಳನ್ನು ಕಾಣಲೆಣಿಸಿದಾಗಲೆಲ್ಲ ಆಕೆಯ ಗಂಡನ ದರ್ಶನ. ಹತ್ತು ಸಲವಾದರೂ ಅದರ ಪುನರಾವೃತ್ತಿಯಾಗಿರಬೇಕು, ಆ ಬಳಿಕ ನಿದ್ದೆ ಹೋಗುವ ವಿಚಾರ ಬಿಟ್ಟುಬಿಟ್ಟ.

"ನಾನು ಆಕೆಯ ವಿಚಾರ ಬಿಟ್ಟುಬಿಡಬೇಕಿತ್ತು ಎಂದರೆ ಸುಖವಾಗಿ ನಿದ್ರಿಸಬಹುದಿತ್ತು. ಹೌದು! ಥೇರಸಾ ನಿನ್ನೆ ರಾತ್ರಿ 'ಹೂಂ' ಎಂದಿದ್ದರೆ, ಆಕೆ ತನ್ನ ಪಕ್ಕದಲ್ಲಿಯೇ ಇದ್ದಿದ್ದರೆ....." ಲೋರೆಂಟ ತನ್ನಷ್ಟಕ್ಕೆ ಗೊಣಗಿದ.

ತಣ್ಣೀರಿನಿಂದ ಮುಖ ತೊಳೆಯುವಾಗ, ಮತ್ತೆ ಗಾಯದ ನೆನಪಾಯಿತು. ಕನ್ನಡಿಯ ಎದುರು ನಿಂತು ಅವಲೋಕಿಸಿದ. ಆ ಕಲೆಯಲ್ಲೂ ಹಲ್ಲಿನ ಗುರುತು ಕಾಣಿಸುತ್ತಿತ್ತು. ಒಮ್ಮೆಲೆ ನಡುಕವುಂಟಾಯಿತು. ಕಾಲರನ್ನೆಳೆದು ಗಾಯವನ್ನು ಮುಚ್ಚಿದ. ದೇವರೇ, ನಾನು ಮೂರ್ಖ! ಥೇರಸಾಳೇ ಇದೆಲ್ಲವನ್ನೂ ಕೊನೆಗಾಣಿಸಬೇಕು ಎಂದುಕೊಂಡನು.

ಕಚೇರಿಯಲ್ಲಿ ಕೆಲಸ ಮಾಡಲಾಗಲಿಲ್ಲ. ಕಣ್ಣುಗಳು ತೂಕಡಿಸುತ್ತಿದ್ದವು. ಬಹಳ ಪ್ರಯಾಸದಿಂದ ವೇಳೆ ಕಳೆದ. ಸಂಜೆಯಾಗುತ್ತಲೇ, ದಣಿವನ್ನೂ ಲಕ್ಷಿಸದೆ ಥೇರಸಾಳನ್ನು ಕಾಣಲು ಧಾವಿಸಿದ. ಆಕೆಯಾದರೂ ಆತನಂತೆಯೇ ತೀರಾ ದಣಿದು ಸೋತವಳಂತೆ ತೋರುತ್ತಿದ್ದಳು. ಅಲ್ಲಿಯೇ ಇದ್ದ ಮದಾಂ ರೇಕ್ವಿನ್—

"ನಿನ್ನೆ ರಾತ್ರಿ ನಮ್ಮ ಥೇರಸಾ ತುಂಬಾ ವೇದನೆಯನ್ನನುಭವಿಸಿದಳು. ಒಂದರ ಹಿಂದೆ ಒಂದು ದುಃಸ್ವಪ್ನ. ಕೆಲವೊಮ್ಮೆ ಆಕೆ ಅತ್ತದ್ದೂ ಕೇಳಿದೆ. ಮುಂಜಾನೆ ಆಕೆ ಅರೆಜೀವವಾಗಿದ್ದಾಳೆ" ಎಂದು ಸಹಾನುಭೂತಿಯಿಂದ ಹೇಳಿದಳು.

ಅಂದರೆ ಕೆಮಿಲ್ ಪೂರ್ಣ ಸಾಯಲಿಲ್ಲ! ಭೂತವಾಗಿ ಬದುಕಿದ್ದಾನೆ ಎಂದಂತಾಯಿತಲ್ಲವೆ?

ಹೌದು. ಅಂತೆಯೇ ಥೇರಸಾ ಕೂಡಾ ತನ್ನ ಗಂಡನ ಪ್ರೇತವನ್ನು ಕಂಡಿದ್ದಳು!

ಲೋರೆಂಟನ ಹಿಂದಿನ ದಿನದ ಆತುರದ ಕರೆಗೆ ಆಕೆಯ ಸಂಯಮದ ಬಿಗಿ ಸಡಲಿತ್ತು. ಆದರೆ ನಿದ್ದೆಯಲ್ಲಿ ಗಂಡನ ಭೂತವನ್ನು ಕಾಣುತ್ತಲೇ ಆಕೆ ಗಾಬರಿಗೊಂಡಳು. ಒಮ್ಮೆ ತಾನು ಪ್ರಿಯತಮನ ತೋಳ ತೆಕ್ಕೆಯನ್ನು ಸೇರಿದೆನೆಂದರೆ ಎಲ್ಲವೂ ಸುರಕ್ಷಿತ, ಸುಖಪ್ರದವೆಂದು ಆಕೆ ತನಗೆ ತಾನೇ ಧೈರ್ಯ ಹೇಳಿಕೊಂಡಳು; ನಿದ್ರೆಯಿಲ್ಲದೆ ರಾತ್ರಿಯನ್ನು ಕಳೆದಳು.

ಮರುದಿನ ಇಬ್ಬರೂ ತಮ್ಮ ಲಗ್ನದ ಪ್ರಶ್ನೆ



ಯನ್ನು ಪರಿಹರಿಸುವ ಬಗೆಯನ್ನು ಯೋಚಿಸತೊಡಗಿದರು. ಇದು ಸುಲಭಸಾಧ್ಯವಲ್ಲ. ತಾವು ಸ್ವತಃ ಅದನ್ನು ಪ್ರಸ್ತಾಪಿಸುವಂತಿಲ್ಲ. ಆದರೆ ಥೇರಸಾಳ ಮರುಮದುವೆ ಆಗಬೇಕೆಂಬ ವಿಚಾರವನ್ನು ಮುದುಕಿಯ ಮನಸ್ಸಿನಲ್ಲಿ ಮೂಡಿಸಿದರಷ್ಟೇ ಸಾಕಾಗಿತ್ತು. ಇದಕ್ಕಾಗಿ ಯೋಜಿನ ನಾಟಕವನ್ನು ರಚಿಸಿದರು, ತಮ್ಮ ಪಾತ್ರವನ್ನು ನಾಜೂಕಿನಲ್ಲಿ ನಟಿಸಲಾರಂಭಿಸಿದರು.

ರಾತ್ರಿ ವೇಳೆ ಮಾತ್ರ ಕೆಮಿಲ್‌ನ ಪ್ರೇತ ಅವರಿಬ್ಬರನ್ನೂ ಪೀಡಿಸುತ್ತಿತ್ತು. ಇದರಿಂದಾಗಿ ಅವರಿಗೆ ಹುಚ್ಚು ಹಿಡಿಯುವಂತಾಯಿತು.

ಇರುಳು ಸಮೀಪಿಸಿದಂತೆ ಥೇರಸಾ ನಡುಗುವಳು; ನೆರಳನ್ನು ಕಂಡಾಗ ಥರಥರಿಸುವಳು. ಎಂದೇ ಮೇಣದಬತ್ತಿಯನ್ನು ಉರಿಸಿಟ್ಟು ಇಡೀ ರಾತ್ರಿ ಜಾಗರಣೆ ಮಾಡುವುದಾಗಿ ನಿರ್ಧರಿಸುವಳು. ಆದರೆ ದಣಿವಿಗೆ ತೂಕಡಿಕೆ ಬರತೊಡಗುವುದು. ಕಣ್ಣುರೆಪ್ಪೆ ಮುಚ್ಚಿತೆಂದರೆ ಕೆಮಿಲ್ ಕತ್ತಲೆಯ ಪರದೆಯಿಂದ ಹೊರಗೆ ನುಸುಳುವ. ಆಕೆ ಚೀತ್ಕರಿಸುವಳು.

ಲೋರೆಂಟ್ ಆಕೆಗೂ ಹೆಚ್ಚು ಮೂಕ ಸಂಕಟವನ್ನು ಅನುಭವಿಸಿದ, ನರಳಿದ. ರಾತ್ರಿಹೊತ್ತು ಕೋಣೆಯನ್ನು ಸೇರುವುದಕ್ಕೆ ಆತನ ಮನಸ್ಸು ಒಡಂಬಡದು. ಗೊತ್ತು-ಗುರಿಯಿಲ್ಲದೆ ನಡೆಯುತ್ತ ರಾತ್ರಿ ವೇಳೆಗಳೆಯತೊಡಗಿದ. ಒಮ್ಮೆ ಮಳೆಗೆ ನೆನೆದು ಆತ ಸೇತುವೆಯ ಬಳಿ ನಿಂತಿದ್ದ-ಮುಂಜಾವದ ತನಕ. ನಿಂತಲ್ಲೇ ತೂಕಡಿಕೆ. ಬಟ್ಟೆಯೆಲ್ಲ ಒದ್ದೆ. ಚಳಿಗಾಳಿ. ಇದೂ ಸಾಲದೆನ್ನುವಂತೆ ಕೆಟ್ಟ ಸ್ವಪ್ನ. ಥೇರಸಾಳೆಡೆ ಲೋರೆಂಟ್ ಕೈ ಚಾಚಿದಾಗಲೆಲ್ಲ ಕೆಮಿಲ್ ಆತನನ್ನು ಬಾಚಿ ತನ್ನ ಎದೆಯಲ್ಲಿ ಹುದುಗಿಸಲೆತ್ನಿಸುವ.

ಥೇರಸಾಳ ದುಃಖದ ನಟನೆ ಮುಂದುವರಿಯಿತು, ಪರಿಣಾಮಕಾರಿಯಾಯಿತು. ಸೊಸೆಯು ಬಾಡಿದ ಮುಖ, ನಿರುತ್ಸಾಹದ ನಡೆನುಡಿಗಳನ್ನು ಕಂಡು ಮದಾಂ ರೇಕ್ವಿನ್ ಆಕೆಯನ್ನು ಪದೇ ಪದೇ ಪ್ರಶ್ನಿಸಿದಳು. ಆಗ ಆಕೆ ಕೊಟ್ಟ ಉತ್ತರ ಇಷ್ಟೇ--ತಾನು ಚೆನ್ನಾಗಿದ್ದೇನೆ. ದುಃಖದ ನಿಟ್ಟುಸಿರು, ನೀರಸ ದನಿ; ಕೆಲವೊಮ್ಮೆ ಬಿಕ್ಕಳಿಕೆ.

ಮದಾಂ ರೇಕ್ವಿನ್‌ಳಿಗೆ ಏನು ಮಾಡುವುದೆಂದ

ತೋರಲಿಲ್ಲ. ಸೊಸೆಯ ಹೊರತು ತನ್ನವರಿನ್ನುವ ವರು ಯಾರಿದ್ದಾರೆ? ದಿನಾಲು ರಾತ್ರಿ ಸೊಸೆಯ ಆರೋಗ್ಯ-ಆಯುಷ್ಯಗಳಿಗಾಗಿ ದೇವರನ್ನು ಪ್ರಾರ್ಥಿಸುವಳು. ಸೊಸೆಯ ದುಃಖದ ಪರಿಹಾರಕ್ಕಾಗಿ ಆಕೆ ಯಾವುದಕ್ಕೂ ಸಿದ್ಧ. ಈ ಬಗ್ಗೆ ತನ್ನ ಹಿತೈಷಿಯಾದ ಮೀಚಾಡ್‌ನನ್ನು ಸನಿಹಕ್ಕೆ ಕರೆದು ತನ್ನ ಅಳಲನ್ನು ತೋಡಿಕೊಂಡು ಸಲಹೆಯನ್ನು ಯಾಚಿಸಿದಳು.

"ಹೌದ್ಹೌದು, ಥೇರಸಾ ಹಿಂದಿನಂತಿಲ್ಲ. ಆಕೆಯ ಕಾಯಿಲೆ ನನಗೂ ಗೊತ್ತು."

ಮುದುಕ ನಗುತ್ತಾ ಹೇಳಿದಾಗ ಮುದುಕಿಗೆ ಅತ್ಯಾನಂದವಾಯಿತು.

"ನಿನಗೆ ಗೊತ್ತಿದೆಯೆ? ಹೇಳಿಬಿಡು— ಥೇರಸಾಳಿಗಾಗಿ ನಾನೇನು ಮಾಡಬೇಕು?" ಆತುರದಿಂದ ಪ್ರಶ್ನಿಸಿದಳು.

"ಅದು ಸುಲಭದ ದಾರಿ. ಇಡೀ ರಾತ್ರಿ ಏಕಾಕಿಯಾಗಿರುವುದರಿಂದಲೇ ನಿನ್ನ ಸೊಸೆ ಹೀಗೆ ಆಗಿದ್ದಾಳೆ. ಗಂಡನನ್ನು ಕಳೆದುಕೊಂಡ ಹರೆಯದ ಹೆಣ್ಣು ಯಾವ ಪುರುಷನ ಸಹವಾಸವಿಲ್ಲದೆ ಎರಡು ವರ್ಷಗಳ ದೀರ್ಘಕಾಲ ಕಳೆಯುವುದೆಂದರೆ......!"

ಆ ಮಾತುಗಳನ್ನು ಕೇಳಿದಾಗ ಆಕೆಗೆ ಗಲಿಬಿಲಿಯಾಯಿತು. ಕಣ್ಮರೆಯಾದ ಕೆಮಿಲ್‌ನನ್ನು ನೆನೆದು ತಾನು ದುಃಖಿಸುವಂತೆ ಥೇರಸಾ ಕೂಡಾ ದುಃಖಿಸುತ್ತಿರುವುದಾಗಿ ನಂಬಿದ್ದ ಮುದುಕಿಗೆ ಇದರಿಂದ ತುಂಬಾ ನೋವಾಯಿತು. ಸೊಸೆಯ ಜೀವನರಂಗದಲ್ಲಿ ಕೆಮಿಲ್‌ನ ಬದಲು ಇನ್ನೊಂದು ವ್ಯಕ್ತಿ ಬರಬಹುದೆಂಬ ವಿಚಾರ ಆಕೆಗೆ ಹೊಳೆದುದಿಲ್ಲ.

"ಆದಷ್ಟು ಬೇಗ ಅವಳ ಮದುವೆ ಮಾಡಿಬಿಡು, ಎಂದರೆ ಎಲ್ಲವೂ ಸರಿಹೋಗುತ್ತದೆ."

ಮೀಚಾಡ್‌ನ ಈ ಮಾತುಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ, ಆಕೆ ಆ ನಂತರ ಸೊಸೆಯ ಚಲನವಲನಗಳನ್ನು ನಿರೀಕ್ಷಿಸತೊಡಗಿದಳು. ಥೇರಸಾಳ ಕಂದಿದ ಮುಖ, ನಿರುತ್ಸಾಹದ ನಡೆ, ಮೌನ—ಒಟ್ಟೇ ಆ ವಾತಾವರಣ ಮುದುಕಿಗೆ ಅಸಹನೀಯವಾಗಲಾರಂಭಿಸಿತು. ಸೊಸೆಯ ಮರುಮದುವೆಯ ವಿಚಾರ ಮನಸ್ಸಿಗೆ ಒಪ್ಪಿಗೆಯಾಯಿತು.

ಮದುವೆ ನಿಜ. ಆದರೆ ವರನಾರು? ಆತ ಮನೆಯ ಸದ್ಯದ ಸ್ಥಿತಿಯನ್ನು ಹದಗೆಡಿಸಬಾರದಷ್ಟೆ. ತಾನಾದರೂ ಕೊನೆಯ ದಿನಗಳನ್ನು ಸುಖದಿಂದ ಕಳೆಯಬೇಕಲ್ಲವೇ?

ಥೇರಸಾ ತನ್ನ ಪಾತ್ರವನ್ನು ಚಾಚೂ ತಪ್ಪದೆ ನಿರ್ವಹಿಸುತಿದ್ದಳು. ಲೋರೆಂಟನಾದರೂ ಅಷ್ಟೇ— ಮದಾಂ ರೇಕ್ವಿನ್‌ಳೆಡೆ ತುಂಬಾ ಆಸಕ್ತಿ ವಹಿಸಿ ನಡೆ-ನುಡಿಯುತ್ತಿದ್ದ. ಆತ ಬಾರದ ದಿನ ಆ ಮುದುಕಿ ಅಸುಖಿ.

ಆಕೆ ಸೊಸೆಯ ಬಗ್ಗೆ ಮಾತೆತ್ತಿದಾಗ ಆತ ಕೂಡಾ ವಿಷಾದವನ್ನು ಸೂಚಿಸಿದನಷ್ಟೇ ಅಲ್ಲ, ಆಕೆಯನ್ನು ಗಾಬರಿಗೊಳಿಸಿದ.

"ಅವಳನ್ನೂ ನಾವು ಕಳೆದುಕೊಳ್ಳಬಹುದು" ಎಂದು ದುಃಖ ಒತ್ತರಿಸಿ ಬಂದಂತೆ ತಡೆದ; ಮತ್ತೆ ನುಡಿದ.

"ಅವಳ ಆ ದುಃಸ್ಥಿತಿಯನ್ನು ಕಣ್ಣಾರೆ ಕಂಡು ನಾವು ಕೈಕಟ್ಟಿ ಕುಳಿತುಕೊಳ್ಳುವುದಂತೂ ಅಸಾಧ್ಯ. ಆಕೆಯನ್ನು ಕಳೆದುಕೊಂಡರೆ ನಿಮ್ಮ ಗತಿ ಏನು?"

ಮದಾಂ ರೇಕ್ವಿನ್ ಮನದೊಳಗೆ ಮರುಗುತ್ತಾ ಆಲಿಸುತ್ತಿದ್ದಳು. ಆತ ಮಾತನಾಡುತ್ತಲಿದ್ದ.

"ನನ್ನ ಆಪ್ತಮಿತ್ರನ ದುರಂತ ಆಕೆಯ ಮನಸ್ಸಿಗೆ ಚೆನ್ನಾಗಿ ನಾಟಿದೆ. ಎರಡು ವರ್ಷಗಳಾದರೂ ಆಕೆ ಅದನ್ನು ಮರೆತಿಲ್ಲ. ಪ್ರಾಯಶಃ ಆಕೆ ಅದನ್ನು ಮರೆಯುವುದೂ ಶಕ್ಯವಿಲ್ಲ. ನಾವು ಆ ಅಪ್ರಿಯ ಸತ್ಯವನ್ನು ಒಪ್ಪಲೇ ಬೇಕು."

ವಿಚಾರಸರಣಿ, ಮಾತನಾಡಿದ ರೀತಿ ಪರಿಣಾಮಕಾರಿಯಾಯಿತು. ಮಗನ ಪ್ರಸ್ತಾಪ ಬಂದಾಗಲೆಲ್ಲ ಆಕೆಗೆ ಅಳು ಬಂದೇಬರುತ್ತದೆ.

ಪ್ರತಿ ಸಂಜೆ ಆತ ತನ್ನ ಗೆಳೆಯನ ಗುಣಗಾನವನ್ನು ಮಾಡುವುದಕ್ಕಾರಂಭಿಸಿದ. ಥೇರಸಾ ತನ್ನನ್ನೇ ದಿಟ್ಟಿಸುತ್ತಿರುವುದನ್ನು ಗಮನಿಸಿದಾಗ ಮಾತ್ರ ತತ್ತರಿಸುವ. ಮರುಕ್ಷಣವೇ ಆತನ ಅಂತರಂಗದಲ್ಲಿ ಅಸೂಯೆ ಹುಟ್ಟಿಕೊಳ್ಳುವುದು. ಇದುವರೆಗೆ ಹೊಗಳಿದ ವ್ಯಕ್ತಿಯನ್ನೇ ಥೇರಸಾ ನಿಜಕ್ಕೂ ಪ್ರೀತಿಸುವುದಾದರೆ......

ಗುರುವಾರ ಎಂದಿನಂತೆ ಮಿಚಾದ್ ಮತ್ತು ಗ್ರಿವೇಟ್ ಕುಳಿತಿದ್ದರು. ಲೋರೆಂಟ ಬಂದವನೇ ಥೇರಸಾಳ ಬಳಿ ಹೋಗಿ ಆಕೆಯ ಕ್ಷೇಮವನ್ನು ವಿಚಾರಿಸಿ ಪಕ್ಕದಲ್ಲಿಯೆ ಕುಳಿತ.

ಮಿಚಾದ್ ಪಕ್ಕದಲ್ಲಿ ಕುಳಿತ ಮದಾಂ ರೇಕ್ವಿನ್ ಕಡೆ ಬಾಗಿ ಹೇಳಿದ—"ಇಗೋ—ನಿನ್ನ ಸೋದರ ಸೊಸೆಯ ಗಂಡ! ಆದಷ್ಟು ಬೇಗ ಮದುವೆ ಏರ್ಪಾಡು, ಮಾಡು. ನಮ್ಮಿಂದಾದ ಸಹಾಯ ನಾವು ಮಾಡಲು ಸಿದ್ಧ."

ಈ ಸೂಚನೆ ಆ ಮುದುಕಿಗೆ ಆಶ್ಚರ್ಯಾನಂದವನ್ನುಂಟುಮಾಡಿತು. ಹೌದು ಹೌದು. ತಮ್ಮೊಳಗಿನ ಬಾಂಧವ್ಯದ ಬಂಧನ ಬಿಗಿಯಾಗುವುದರಲ್ಲಿ ಸಂಶಯವಿಲ್ಲ. ಥೇರಸಾಳನ್ನು ಅಪರಿಚಿತನೊಬ್ಬನಿಗೆ ಒಪ್ಪಿಸುವುದರ ಬದಲು ಮಗನ ಆಪ್ತನಿಗೆ ಲಗ್ನಮಾಡಿಕೊಡುವುದು ಉಚಿತವಲ್ಲವೆ?

ಲೋರೆಂಟನ ಮನೋಗತವನ್ನು ತಿಳಿದುಕೊಳ್ಳುವ ಹೊಣೆ ಮಿಚಾದ್‌ನದಾಗಿತ್ತು. ಆ ಇಬ್ಬರು ಅಬಲೆಯರ ಬಗ್ಗೆ ಲೋರೆಂಟನಿಗೆ ತುಂಬಾ ವಿಶ್ವಾಸ, ಕನಿಕರ. ಆದರೆ ಥೇರಸಾಳ ಕೈಹಿಡಿಯುವ ಸೂಚನೆ ಬಂದಾಗ ಮಾತ್ರ ಸಿಡಿಲು ಬಡಿದವನಂತೆ ವರ್ತಿಸಿದ. ಗೆಳೆಯನ ಹೆಂಡತಿಯೆಂದರೆ ತನ್ನ ತಂಗಿಯೆಂದುಕೊಂಡು ಇದುವರೆಗೆ ನಡೆನುಡಿದಾಗ ಇದೀಗ ಹೆಂಡತಿಯಾಗಿ ಸ್ವೀಕರಿಸುವುದಾದರೂ ಹೇಗೆ ಸಾಧ್ಯ?

ಪೋಲೀಸ್ ಅಧಿಕಾರಿ ಒತ್ತಾಯಿಸಿದ, ನೂರಾರು ಕಾರಣಗಳನ್ನು ಮುಂದುಮಾಡಿ ಈ ಲಗ್ನಕ್ಕೆ ಒಪ್ಪಬೇಕೆಂದು ಕಟ್ಟು ಮಾಡಿದ ಮುದುಕಿ ಮದಾಂ ರೇಕ್ವಿನ್‌ಳಿಗೊಬ್ಬ ಮಗ; ಹಡೆಯದ ವಿಧವೆಗೆ ಗಂಡ-ಇದು ನಿನ್ನ ಕರ್ತವ್ಯ! ಲೋರೆಂಟ್ ಗೆಳೆಯನ ಬಲವಂತಕ್ಕೆ ಮನಸ್ಸಿಲ್ಲದ ಮನಸ್ಸಿನಿಂದ ಸಮ್ಮತಿಸಿದುದಾಗಿ ಹೇಳಿದ.

ಮಿಚಾದ್ ಲೋರೆಂಟನನ್ನು ಪ್ರೇರೇಪಿಸಿದಂತೆ ಇತ್ತ ಮದಾಂ ರೇಕ್ವಿನ್ ಥೇರಸಾಳನ್ನು ಮಾತನಾಡಿಸುತ್ತಿದ್ದಳು. ಮಲಗುವ ಕೋಣೆಗೆ ಹೋಗಲಣಿಯಾದ ಸೊಸೆಯನ್ನು ತಡೆದು ವಾತ್ಸಲ್ಯದಿಂದ ಪ್ರಶ್ನಿಸಿದಳು. ಆಕೆಯ ಕೊರಗನ್ನು ಕುರಿತು ಕೆದರಿ ಕೆದರಿ ಕೇಳಿದಳು. ಆದರೆ ಹಿಂದಿನ ಉತ್ತರ ಪುನಃ ಸಿಕ್ಕಿತು. ಆ ಬಳಿಕ ವಿಧವೆಯ ಏಕಾಂತ ಜೀವನದ ಕಷ್ಟನಿಷ್ಠುರಗಳನ್ನು 'ಬಣ್ಣಿಸುತ್ತ ಮರುಮದುವೆಯ ವಿಚಾರವೆತ್ತಿದಳು.

"ನಿನಗೆ ಮರುಮದುವೆಯಾಗುವ ಮನಸ್ಸಿದೆಯೆ?"—ಮುದುಕಿ ನೇರವಾಗಿ ಪ್ರಶ್ನಿಸಿದಾಗ ಥೇರಸಾ ಕಣ್ಣೀರು ತಂದಳು, ಅಂತಹ ವಿಚಾರ ತನ್ನ ಕನಸ್ಸಿನಲ್ಲಿ ಕೂಡಾ ಬಂದಿಲ್ಲವೆಂದು ಸಾರಿದಳು ಆಗ ಆ ಮುದುಕಿಗೂ ಅಳು ಬಂತು. ಯೌವನವನ್ನು ವ್ಯರ್ಥ ಕಳೆಯುವುದು ಸರಿಯಲ್ಲವೆಂದು ಬುದ್ಧಿವಾದ ಹೇಳಲಾರಂಭಿಸಿದಳು.

ಕೆಮಿಲ್‌ನ ಜಾಗಕ್ಕೆ ಅರ್ಹರಾದವರನ್ನು ತಾನು ಕಾಣೆನೆಂದು ಥೇರಸಾ ನುಡಿದಾಗ

ಒಮ್ಮೆಲೆ ಮದಾಂ ರೇಕ್ವಿನ್ ಲೋರೆಂಟನ ಹೆಸರನ್ನು ಸೂಚಿಸಿದಳು.

"ಲೋರೆಂಟನನ್ನು ನಾನು ಒಡಹುಟ್ಟಿದವನಂತೆ ಪ್ರೀತಿಸಿದ್ದೇನೆ. ಇಡೀ ನನ್ನ ಜೀವಮಾನವನ್ನು ಹೀಗೆಯೆ ಕಳೆಯಬೇಕೆಂದಿದ್ದೆ......ಆದರೆ ನಿನ್ನ ಸುಖ-ಸಮಾಧಾನಗಳಿಗೆ ನಾನು ಯಾವುದಕ್ಕೂ ತಯಾರು."

—ಅತ್ತೆಯ ಮಾತು ಮುಗಿದ ಬಳಿಕ ಥೇರಸಾ ಬಡಬಡಿಸಿದಳು. ಮರುದಿನ ಲೋರೆಂಟ ಅಂಗಡಿಯನ್ನು ಪ್ರವೇಶಿಸುತ್ತ "ಅಮ್ಮಾ, ನಿನ್ನ ಮನದಾಸೆಯನ್ನು ನನಗೆ ಮಿಚಾದ್ ತಿಳಿಸಿದ್ದಾನೆ. ನಿನ್ನ ಸುಖಕ್ಕಾಗಿ ನಾವು ಮಕ್ಕಳು ಯಾವುದಕ್ಕೂ ಸಿದ್ಧ......"

ಎಂದು ಮದಾಂ ರೇಕ್ವಿನ್‌ಳಿಗೆ ಹೇಳಿದಾಗ ಆಕೆ ಆನಂದಬಾಷ್ಪವನ್ನು ಹರಿಸಿದಳು. 'ಅಮ್ಮಾ' ಎಂಬ ಸಂಬೋಧನೆ ಆಕೆಯನ್ನು ಅಲುಗಿಸಿತ್ತು. ಆಕೆ ಥೇರಸಾಳನ್ನು ಸನ್ನೆಯಿಂದ ಸನಿಹಕ್ಕೆ ಕರೆದಳು, ಇಬ್ಬರ ಕೈಗಳನ್ನು ಒಗ್ಗೂಡಿಸಿದಳು. ಆದರೆ ಮಾತನಾಡಲಿಕ್ಕಾಗಲಿಲ್ಲ

"ಥೇರಸಾ, ಅತ್ತೆಯನ್ನು ಸುಖಸಂತೋಷದಿಂದಿರಿಸಲು ನನ್ನೊಡನೆ ಸಹಕರಿಸುವಿಯಾ?"

—ಲೋರೆಂಟನ ಪ್ರಶ್ನೆಗೆ ಆಕೆ ಮೆಲು ನುಡಿದಳು:

"ಹೌದು; ಅದು ನನ್ನ ಕರ್ತವ್ಯ."

"ಕೆಮಿಲ್ ಸಾಯುವ ವೇಳೆ— 'ಹೆಂಡತಿಯನ್ನು ಬದುಕಿಸು' ಎಂದು ಕೂಗಿದ್ದ. ಪ್ರಾಯಶಃ ನಾನು ಆತನ ಕೊನೆಯ ಆಶೆಯನ್ನು ಪೂರೈಸುತ್ತಿದ್ದೇನೆ."

ಲೋರೆಂಟ ನುಡಿದುದಿಷ್ಟೆ ತಡ, ಥೇರಸಾ ತನ್ನ ಕೈಯನ್ನು ಒಮ್ಮೆಗೇ ಸೆಳೆದುಕೊಂಡಳು.

"ಹೌಹ್ದಾದು; ಮಗನೆ, ನೀನು ಥೇರಸಾಳನ್ನು ಲಗ್ನವಾಗು. ಪರಲೋಕದಲ್ಲಿರುವ ನನ್ನ ಮಗ ನಿನಗೆ ಧನ್ಯವಾದಗಳನ್ನರ್ಪಿಸದೆ ಇರಲಾರ."

—ಮುದುಕಿ ಬಿಗಿದ ಕಂಠದಿಂದ ಹೇಳಿದಳು.

*

ಶಯ್ಯಾಗೃಹದಲ್ಲಿ ವಧು ಕಾಯುತ್ತಿರುವುದಾಗಿ ಮದಾಂ ರೇಕ್ವಿನ್ ಹೇಳಿದಾಗ ಲೋರೆಂಟ್ ತಡವರಿಸುತ್ತ ಗೆಳೆಯರನ್ನು ಬೀಳ್ಕೊಟ್ಟ. ಅತ್ತೆಯ ಹಣೆಗೆ ಮುತ್ತಿಟ್ಟು ಥೇರಸಾಳ ಕೋಣೆಯೆಡೆ ಅಮಲು ಹಿಡಿದವನಂತೆ ನಡೆದ.

ಗಂಡ ಕೋಣೆಯನ್ನು ಪ್ರವೇಶಿಸಿದುದನ್ನು ಅರಿತರೂ ಥೇರಸಾ ಕುರ್ಚಿಯಿಂದ ಅಲುಗಾಡಲಿಲ್ಲ. ಆತ ಸನಿಹಕ್ಕೆ ಬಂದು ತನ್ನನ್ನು ಮುತ್ತಿಟ್ಟಾಗ ಮಾತ್ರ ಆಕೆ ಸಿಡಿದು ನಿಂತಳು.

"ಥೇರಸಾ, ಹಿಂದೆ ನಾನು ಕಳ್ಳನಂತೆ ಇಲ್ಲಿಗೆ ಬರುತ್ತಿದ್ದುದು ನೆನಪಿದೆಯೇನು? ಇಂದು ನಾನು ನೇರದಾರಿಯಿಂದ ಬಂದಿದ್ದೇನೆ. ಯೋಚಿಸು— ನಿನ್ನನ್ನು ನಾನು ತೋಳ ಸೆರೆಯಲ್ಲಿ ಇಡಲು, ಮುತ್ತಿಡಲು... ನಾನು ಸ್ವತಂತ್ರ!..."

ಆತನ ಮಾತಿನೆಡೆಗೆ ಆಕೆ ಗಮನವೀಯದಿದ್ದರೂ ಆತ ಮಾತು ಮುಂದುವರಿಸಿದ—

"ನಮ್ಮ ಆಶೆ ಪೂರೈಸಿತು. ನೀನು ನನ್ನವಳು, ನಾನು ನಿನ್ನವ— ನಮಗಾಗಿ ಕಾದಿದೆ, ಭವ್ಯ ಭವಿಷ್ಯ! ನಮ್ಮ ಸುಖ-ಸಂತೋಷವಿರುವುದು ಇಲ್ಲಿಯೆ! ನಮ್ಮ ನಡುವೆ ಇನ್ನು ಕೆಮಿಲ್ ಇಲ್ಲ."

ಕೆಮಿಲ್‌ನ ಹೆಸರು ಕೇಳುತ್ತಲೇ ಥೇರಸಾ ಬೆಚ್ಚಿದಳು. ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ಅವರಿಬ್ಬರ ಮನಶ್ಚಕ್ಷುವಿನೆದುರು ಅಂದಿನ ದುರಂತದ ಚಿತ್ರದ ಸುರುಳಿ ಸರಿದಾಡಿತು.

"ಶವದ ಮನೆಯಲ್ಲಿ ನೀನು ನೋಡಿದುದು ನಿಜವೇನು?"

—ಆಕೆ ಪ್ರಯಾಸಪಟ್ಟು ಪ್ರಶ್ನಿಸಿದಳು. ಹೆಸರೆತ್ತದೆ.

ಆ ಪ್ರಶ್ನೆ ಬಂದೇಬರುವುದೆಂದು ಆಕೆಯ ಮುಖದಿಂದಲೇ ಆತ ಗ್ರಹಿಸಿದ್ದ. "ಹೌದು" ಎಂದ.

"ಹೆಚ್ಚು ಹಿಂಸೆಯಾದಂತೆ ತೋರಿತೆ?"

ಆತನ ಬಾಯಿಂದ ಸ್ವರ ಹೊರಡಲಿಲ್ಲ. ಅಬಳಿಕ ಎದ್ದು ಮಂಚದೆಡೆ ಹೆಜ್ಜೆಯಿಟ್ಟ. ಒಮ್ಮೆಲೆ ತಡೆದು ತಿರುಗಿ, "ಥೇರಸಾ, ಮುತ್ತು ಕೊಡು! ಇಲ್ಲಿ ಮುತ್ತು ಕೊಡು!" ಎನ್ನುತ್ತಾ ತನ್ನ ಕತ್ತಿನ ಮೇಲಿನ ಕಾಲರ್‌ನ್ನು ಸರಿಸಿ ಹಿಡಿದ.

ಆಕೆ ಆತನ ಕತ್ತಿನೆಡೆ ನೋಡಿದಳು. ಅಂತೆಯೇ ಕೇಳಿದಳು—

"ಇದು ಏನು? ಹಿಂದೆ ನಾನು ನೋಡಿದ ನೆನಪಿಲ್ಲ."

# ನ್ಯಾಷನಲ್ ಎಕ್ಕೋ ರೇಡಿಯೋ



## ಇದ್ದರೆ ವರ್ಷವಿಡೀ ಉತ್ಸವ!

ಮನೆಯಲ್ಲಿ ಒಂದು ನ್ಯಾಷನಲ್-ಎಕ್ಕೋ ರೇಡಿಯೋ ಇದ್ದರೆ ಉತ್ಸವ-ಸಮಾರಂಭಗಳು ಕಳೆದು ಹೋದ ಮೇಲೆ ಕೂಡ ಮನೆಮಂದಿಗಳೆಲ್ಲ ಇಡೀ ವರ್ಷ ಆನಂದದಿಂದಿರಬಹುದು. ಅದು ನಿಮ್ಮ ಮನೆಯಲ್ಲಿ ಮೋಹಕ ಸಂಗೀತದ ಹಾಗೂ ಮನೋರಂಜನೆಯ ಹೊಸದೊಂದು ಲೋಕವನ್ನೆ ಸೃಷ್ಟಿಸುವುದು! ನಿಮ್ಮ ಮೆಚ್ಚಿಕೆಗೆ ಪಾತ್ರವಾಗುವಂತಹ ರಚನೆ, ನಿಮಗೆ ಅನುಕೂಲವಾಗುವಂತಹ ಬೆಲೆ! ರೂ. 125.00ರಿಂದ ರೂ. 725.00ರ ವರೆಗಿನ ಬೆಲೆಗಳ 9 ಸುಂದರ ಮಾಡೆಲ್ಲುಗಳು! ನಿಮ್ಮ ಹತ್ತಿರದ ನ್ಯಾಷನಲ್-ಎಕ್ಕೋ ರೇಡಿಯೋ ವ್ಯಾಪಾರಿಯೊಡನೆ ಉಚಿತವಾಗಿ ಹಾಕಿ ತೋರಿಸುವಂತೆ ಹೇಳಿರಿ.



ಮಾಡೆಲ್ ಯು-764 : 5 ವಾಲ್ವ್‌ಗಳು, 3 ಬ್ಯಾಂಡ್‌ಗಳು, ಸುಂದರ ಪ್ಲಾಸ್ಟಿಕ್ ಕ್ಯಾಬಿನೆಟ್. ರೂ. 265.00



ಮಾಡೆಲ್ ಯು-755 : 6 'ನೋವಲ್' ವಾಲ್ವ್‌ಗಳು, 3 ಬ್ಯಾಂಡ್‌ಗಳು. ಸುಂದರ ಕ್ಯಾಬಿನೆಟ್. ರೂ. 355.00





ಮಾಡೆಲ್ 768 : 9 ವಾಲ್ವ್‌ಗಳ ಕೆಲಸಮಾಡುವ 6 'ನೋವಲ್' ವಾಲ್ವ್‌ಗಳು, 8 ಬ್ಯಾಂಡ್‌ಗಳು. ಮರದ ಕ್ಯಾಬಿನೆಟ್. ರೂ. 570.00



ಮಾಡೆಲ್ ಬಿ-764 : ಡ್ರೈ ಬ್ಯಾಟರಿ ಸೆಟ್.
4 ವಾಲ್ವ್‌ಗಳು, 3 ಬ್ಯಾಂಡ್‌ಗಳು. ಪ್ಲಾಸ್ಟಿಕ್
ಕ್ಯಾಬಿನೆಟ್. ರೂ. 265.00



ಮಾಡೆಲ್ ಯು-756 : 3 'ನೋವಲ್'
ವಾಲ್ವ್‌ಗಳು, 2 ಬ್ಯಾಂಡ್‌ಗಳು. ಕಡಿಮೆ ಬೆಲೆಗೆ
ಬೆಲೆಬಾಳುವ ರೇಡಿಯೋವಿನ ಉತ್ಕೃಷ್ಟತೆ!
ಅಂದವಾದ ಪ್ಲಾಸ್ಟಿಕ್ ಕ್ಯಾಬಿನೆಟ್.
ರೂ. 125.00



ಮಾಡೆಲ್ ಎ-744 : 4 ಬ್ಯಾಂಡ್‌ಗಳು, 8 ವಾಲ್ವ್
ಗಳ ಕೆಲಸ ಮಾಡುವ 6 'ನೋವೆಲ್' ವಾಲ್ವ್‌ಗಳು.
ಆಕರ್ಷಕ ಕ್ಯಾಬಿನೆಟ್. ರೂ. 405.00



ಮಾಡೆಲ್ ಬಿ-755 : ಡ್ರೈ ಬ್ಯಾಟರಿ ಸೆಟ್.
5 'ನೋವಲ್' ವಾಲ್ವ್‌ಗಳು, 3 ಬ್ಯಾಂಡ್‌ಗಳು.
ಆಕರ್ಷಕ ಕ್ಯಾಬಿನೆಟ್. ರೂ. 355.00



ಮಾಡೆಲ್ ಎ-767 : 7 ವಾಲ್ವ್‌ಗಳು, 8
ಬ್ಯಾಂಡ್‌ಗಳು. ದೊಡ್ಡ, ಸುಂದರ ಕ್ಯಾಬಿನೆಟ್.
ರೂ. 725.00

ಎಲ್ಲಾ ಬೆಲೆಗಳಲ್ಲಿ ಎಕ್ಸೈಸ್
ಡ್ಯೂಟಿ ಸೇರಿದೆ; ತೆರಿಗೆಗಳು ಪ್ರತ್ಯೇಕ

# GRA

ಜನರಲ್ ರೇಡಿಯೋ ಅಂಡ್
ಅಪ್ಲಯನ್ಸಸ್ ಲಿಮಿಟೆಡ್
ಬೊಂಬಾಯಿ . ಕಲ್ಕತ್ತ . ಮದರಾಸು
ದೆಹಲಿ . ಪಾಟ್ನ . ಬೆಂಗಳೂರು
ಸಿಕಂದರಾಬಾದು

JWTGRA 4226



"ಅದು...ಅ...ಅದು..." -ಆತನಿಗೆ ಸುಳ್ಳಾಡಲಾಗಲಿಲ್ಲ "ಥೇರಸಾ, ನಿನಗೆ ನೆನಪಿಲ್ಲವೆ? ಅಂದು, ದೋಣಿಯಲ್ಲಿ ಒದ್ದಾಡಿದಾಗ ಕೆಮಿಲ್ ಕಚ್ಚಿಲ್ಲವೇನು? ಅದು ಎಂದೋ ಗುಣವಾಗಿದೆ. ಥೇರಸಾ, ಮುತ್ತಿಡು; ದಯವಿಟ್ಟು ಮುತ್ತಿಡು!" —ಆತ ಆರ್ತ ಸ್ವರದಿಂದ ಬೇಡಿದ.

"ಅದೊಂದು ನನ್ನಿಂದಾಗದು, ನನ್ನನ್ನು ಕೇಳ ಬೇಡ. ಅದು ರಕ್ತದಂತೆ ತೋರುತ್ತದೆ" ಎನ್ನುತ್ತಲೇ ಆಕೆ ಕುರ್ಚಿಯಲ್ಲಿ ಬಿದ್ದುಕೊಂಡಳು. ಲೋರೆಂಟನಿಗೆ ಸಹಿಸಲಾಗಲಿಲ್ಲ. ಆತ ಬಗ್ಗಿ ಆಕೆಯ ತಲೆಯನ್ನು ಹಿಡಿದು ತನ್ನ ಕತ್ತಿನ ಗಾಯದ ಕಲೆಯ ಮೇಲೆ ಆಕೆಯ ಮುಖವನ್ನು ಒತ್ತಿಹಿಡಿದ. ಆಕೆ ಒದ್ದಾಡಿ ಸೋತಳು.

ಆತನ ಹಿಡಿತ ಸಡಿಲಾಗುತ್ತಲೇ ಆಕೆ ದೂರಕ್ಕೆ ಸಿಡಿದು ಕೈಯಿಂದ ತುಟಿಗಳನ್ನೊರಸುತ್ತ ನೆಲದ ಮೇಲೆ ಉಗುಳಿದಳು, ಮಾತನಾಡಲೆಳಸಲಿಲ್ಲ.

ಲೋರೆಂಟನಿಗೆ ತನ್ನ ಒರಟು ವರ್ತನೆಯ ಬಗ್ಗೆ ಪರಿತಾಪವಾಯಿತು. ತಾನು ಕೈಹಿಡಿದ ಹೆಣ್ಣು-ತನ್ನ ಬಾಳಸಂಗಾತಿಯೆಡೆ ನೋಡಿದ. ಆಕೆ ಆತನಿಗೆ ಬೆನ್ನುಹಾಕಿ ಬೆಂಕಿಯ ಕುಂಡದ ಬಳಿ ಕುಳಿತಿದ್ದಳು: ಆದರೂ ನಡುಗುತ್ತಿದ್ದಳು.

ಒಂದು ಗಂಟೆಯ ಕಾಲವಾದರೂ ಆತ ಕೋಣೆಯಲ್ಲಿಯೆ ಅತ್ತಿಂದಿತ್ತ ಶತಪಥ ಹಾಕಿದ. ಆಕೆಯಾದರೂ ಅಂತೆಯೆ ಕುಳಿತಿದ್ದಳು. ಕೆಮಿಲ್‌ನ ಕೋಣೆಯಲ್ಲಿ ಅವರಿಗೆ ತಮ್ಮ ಕಾಮಪಿಪಾಸೆಯು ಕೊನೆಗೊಂಡುದರ ಅರಿವಾಯಿತು.

"ನೋಡು, ನೋಡು ಥೇರಸಾ, ಅಲ್ಲಿ!"

ಒಮ್ಮೆಗೆ ಆತ ಗೊಣಗಿದ, ನಡುಗುವ ಕೈಯಿಂದ ಬೆರಳು ತೋರಿಸಿದ. ಆಕೆ ಆತನೆಡೆ ತಿರುಗಿದಳು.

"ಅದು ಚಿತ್ರ" — ಆ ಚಿತ್ರಕ್ಕೂ ಕೇಳಿಸ ಬಾರದೆನ್ನುವಂತೆ ಪಿಸುಗುಟ್ಟಿದಳು.

"ಅವನ ಚಿತ್ರ?" —ಚಕಿತನಾಗಿ ಪ್ರಶ್ನಿಸಿದ.

"ಹೌದು ಹೌದು. ನೀನು ಬಿಡಿಸಿದ ಚಿತ್ರ. ಅತ್ತೆ ಅದನ್ನು ತನ್ನ ಕೋಣೆಗೆ ಒಯ್ಯಲು ಮರೆತಿರಬೇಕು."

"ಅದನ್ನು ಕೆಳಗೆ ಒಯ್ಯೋಣ" – ಆತ ಗೊಣಗಿದ.

"ಬೇಡ, ನನಗೆ ಹೆದರಿಕೆಯಾಗುತ್ತದೆ. ನಾನು ಅದನ್ನು ಮುಟ್ಟಲೊಲ್ಲೆ."

ಆತನ ಕಣ್ಣಿಗೆ ಅದು ಕೆಮಿಲ್‌ನ ಭಾವಚಿತ್ರವಲ್ಲ, ಬದಲು ಜೀವಂತ ವ್ಯಕ್ತಿ! ತಮ್ಮ 'ಮೊದಲ ರಾತ್ರಿ'ಯ ಮೂಕ ಪ್ರೇಕ್ಷಕ!

ಹೊರಗಿನ ಮಾಳಿಗೆ ಮೆಟ್ಟಿಲಿಗೆ ಎದುರಾಗಿರುವ ಬಾಗಿಲ ಕಡೆಯಿಂದ ಸದ್ದು ಕೇಳಿಸುತ್ತಲೇ ಆತನ ಮುಖ ನಿಸ್ತೇಜವಾಯಿತು, ಥೇರಸಾಳೆಡೆ ದಿಟ್ಟಿಸಿದ. ಪುನಃ ಭೀತಿ ಆತನನ್ನು ಆವರಿಸಿತ್ತು.

"ಮಾಳಿಗೆಯನ್ನು ಹತ್ತಿ ಯಾರೋ ಬರುತ್ತಿದ್ದಾರೆ, ಯಾರಿರಬಹುದು?" ಆತ ಮೆಲು ನುಡಿದ.

ಆಕೆಯೂ ಹೆದರಿ ಮೌನ ವಹಿಸಿದಳು. ಇಬ್ಬರೂ ಕೋಣೆಯ ಮೂಲೆಯನ್ನು ಸೇರಿದರು. ಇಕ್ಕಿದ ಬಾಗಿಲನ್ನು ತೆರೆದು ಕೆಮಿಲ್‌ನ ಪಿಶಾಚಿ ಪ್ರವೇಶಿಸುವುದನ್ನು ಅವರು ನಿರೀಕ್ಷಿಸುತ್ತಿದ್ದರು. ಸದ್ದು-ಕೊರೆದ ಸದ್ದು ಇನ್ನೂ ಕೇಳಿಸುತ್ತಿತ್ತು. ಇಬ್ಬರೂ ಹೆದರಿಕೆಯಿಂದ ಕಣ್ಣು ಮುಚ್ಚಿದರು. ಆದರೆ 'ಮಿಯಾಂವ್' ಎಂಬ ಕೂಗು ಕೇಳಿಸಿದ ಬಳಿಕ ಲೋರೆಂಟ ಎದ್ದು ನೋಡಿದ. ಬಂದದ್ದು ಬೆಕ್ಕು. ಅದು ಹೊರಗೆ ಹೋಗಲೆತ್ನಿಸುತ್ತಿತ್ತು. ತನ್ನ ಮೂಕ ಭಾಷೆಯಿಂದ ಎಂದಿನಂತೆ ಒಡತಿಗೆ ವ್ಯಕ್ತಪಡಿಸುತಿತ್ತು. ಆದರೆ ಒಡತಿ ಎಂದಿನಂತಿರಲಿಲ್ಲ, ಬೆದರಿ ಕಂಗಾಲಾಗಿದ್ದಳು.

ಲೋರೆಂಟನಿಗೆ ಹೆದರಿ ಬೆಕ್ಕು ಕುರ್ಚಿಯ ಮೇಲೆ ಹಾರಿತು. ಆತನಿಗೆ ಮೊದಲಿನಿಂದಲೂ ಬೆಕ್ಕನ್ನು ಕಂಡರಾಗುತ್ತಿದ್ದಿಲ್ಲ.

ಹುಚ್ಚು ವಿಚಾರ ಆತನ ಮನಸ್ಸನ್ನು ಕೊರೆಯುತ್ತಿತ್ತು. "ಕೆಮಿಲ್ ಈ ಪ್ರಾಣಿಯ ದೇಹವನ್ನು ಹೊಕ್ಕಿದ್ದಾನೆ. ಇದನ್ನು ತಾನು ಹೊಗಲಾಡಿಸಬೇಕು" ಎಂದು. "ಬೇಡ, ಅದನ್ನು ನೋಯಿಸಬೇಡ" —ಥೇರಸಾ ಕೂಗಿದಳು.

ಅದನ್ನು ಒದೆಯಲಿಕ್ಕೆ ಕಾಲೆತ್ತಿದ ಆತ ಕದ ತೆರೆದ. ಬೆಕ್ಕು ಓಡಿ ಹೋಯಿತು.

ಥೇರಸಾ ತನ್ನ ಸ್ಥಾನಕ್ಕೆ ಮರಳಿದಳು. ಲೋರೆಂಟ ಮರಳಿ ಶತಪಥ ಹಾಕತೊಡಗಿದ. ಇಬ್ಬರೂ ಮುಂಜಾವದ ಬೆಳಕು ಹರಿಯುವುದನ್ನೇ ಕಾಯುತ್ತಿದ್ದರು.

ಆ ನಂತರದ ರಾತ್ರಿಗಳನ್ನು ಅವರು ಕಳೆದ ಸ್ಥಿತಿ ತೀರಾ ಶೋಚನೀಯ. ಬೆಂಕಿಯ ಬಳಿ ಕುಳಿತು ಇಲ್ಲವೆ ಕೋಣೆಯೊಳಗೆ ಅತ್ತಿಂದಿತ್ತ ನಡೆದು ಇರುಳು ಕಳೆಯುತ್ತಿದ್ದರು. ಒಬ್ಬರಿನ್ನೊಬ್ಬರು ಸ್ಪರ್ಶಿಸದೆ ದೂರವಿರಲೆತ್ನಿಸುತ್ತಿದ್ದರು. ಮುಂಜಾನೆ ಮಾತ್ರ ಥೇರಸಾ ಹಾಸಿದ ಹಾಸಿಗೆಯನ್ನು ಪ್ರಯತ್ನಪೂರ್ವಕವಾಗಿ ಕೆಡಿಸುತ್ತಿದ್ದಳು.

ಕೊನೆಗೆ ಅವರು ಹಾಸಿಗೆಯನ್ನು ಉಪಯೋಗಿಸುವುದಾಗಿ ನಿರ್ಧರಿಸಿದರು. ಆಕೆ ಮಂಚದ ಒಂದು ಅಂಚನ್ನು ಆವರಿಸಿದ್ದರೆ ಆತ ಇನ್ನೊಂದು ಅಂಚನ್ನು ಆಶ್ರಯಿಸುವ. ಊಂಹೂ. ಆಗೂ ಅವರಿಬ್ಬರ ನಡುವೆ ಕೆಮಿಲ್‌ನ ಪಿಶಾಚ ಹೊರಳಾಡತೊಡಗಿತು. ಥೇರಸಾಳನ್ನು ಬಲಾತ್ಕಾರದಿಂದ ತನ್ನೆಡೆಗೆ ಸೆಳೆಯಬೇಕೆಂಬ ವಿಚಾರ ಲೋರೆಂಟನಿಗೆ ಬರುತ್ತಿತ್ತು. ಆದರೆ ನಡುವಿನ ಪಿಶಾಚಿಯನ್ನು ಸ್ಪರ್ಶಿಸದೆ ಆಕೆಯನ್ನು ಸೆಳೆದುಕೊಳ್ಳುವಂತಿಲ್ಲವಲ್ಲ!

ಒಮ್ಮೆ ಅವರು ಹೆದರಿ ಮುತ್ತಿಡಲೆತ್ನಿಸಿದರು. ನಿರ್ಜೀವ ತುಟಿಗಳು! ಥೇರಸಾ ನಡುಗಿದಳು, ಲೋರೆಂಟನ ಹಲ್ಲುಗಳು ಕಟಕಟಿಸಿದುವು. ಆತ ರೇಗಿ ಆಕೆಯನ್ನು ಪ್ರಶ್ನಿಸಿದ— "ನೀನು ನಡುಗುವುದು ಯಾಕೆ? ನಿನಗೆ ಕೆಮಿಲ್‌ನ ಹೆದರಿಕೆಯೇನು? ಆ ಜಡಪ್ರಾಣಿಯ ಎಲುಬಿನ ತುಂಡು ಕೂಡಾ ಈಗ ಕಾಣಸಿಗಲೊಲ್ಲದು.

"ಹೌದು. ನಿನಗೆ ಕೆಮಿಲ್‌ನದೇ ಹೆದರಿಕೆ; ನನಗೆ ಖಂಡಿತ ಗೊತ್ತಿದೆ. ನೀನು ಹುಚ್ಚಿ, ಹೇಡಿ. ನಿದ್ದೆ ಮಾಡು. ನಿನ್ನ ಪಕ್ಕದಲ್ಲಿ ನಾನು ಮಲಗಿರುವೆನೆಂದು ಕೆಮಿಲ್ ನಿನ್ನನ್ನು ಕೆಳಕ್ಕೆ ಸೆಳೆಯುವನೇನು? ನಿನಗೆ ಖಾತ್ರಿಯಾಗಬೇಕಾದರೆ ಅವನನ್ನು ಹೂತ ಸ್ಥಳವನ್ನು ನಾನು ಅಗೆದು ತೋರಿಸುತ್ತೇನೆ— ಆತ ಮಣ್ಣುಪಾಲಾಗಿದ್ದಾನೆ."

ಆ ಮಾತಿಗೆ ಉತ್ತರಕೊಡುವುದಿರಲಿ ಥೇರಸಾ ಹೊದ್ದುಕೊಂಡ ಹೊದಿಕೆಯನ್ನು ಕಿವಿಯ ಮೇಲೆಳೆದುಕೊಂಡಿದ್ದಳು.

*

ಆ ದಂಪತಿಗಳ ಜೀವನ ಕ್ರಮ ಬದಲಾಗಿತ್ತು, ತೀರಾ ವಿಪರ್ಯಾಸಗೊಂಡಿತ್ತು.

ಇರುಳ ಭೀತಿ ಬೆಳಗಿನ ಬೆಳಕಿಗೆ ಮಾಯವಾಗುತ್ತಿತ್ತು. ಲೋರೆಂಟ ಲಗುಬಗೆಯಿಂದ ಉಡುಪನ್ನು ಧರಿಸಿ ಮುಂಜಾನೆಯ ಉಪಹಾರಕ್ಕೆ ಕುಳಿತುಬಿಡುವ. ಎಲ್ಲವನ್ನು ಮರೆಯುವ. ಎದುರಿಗೆ ಮದಾಂ ರೇಕ್ವಿನ್ ಕುಳಿತು ಆತ ತಿನ್ನುವುದನ್ನೇ ನೋಡುವಳು, ಸಂತೋಷಿಸುವಳು. ಇದೀಗ ಆಕೆಗೆ, ನಡೆದು ಮೆಟ್ಟಲುಗಳನ್ನಿಳಿದು ಅಂಗಡಿಯಲ್ಲಿ ಕುಳಿತುಕೊಳ್ಳುವುದೇ ಸಾಧ್ಯವಾಗುತ್ತಿದ್ದಿಲ್ಲ.

ಕಚೇರಿಯಲ್ಲಿ ಲೋರೆಂಟ ಆಕಳಿಸುವ, ಮಧ್ಯಾಹ್ನದ ಬಿಡುವಿನ ವೇಳೆಯ ದಾರಿಕಾಯುವ. ಅದೇ ಸಂಜೆಯ ಬಿಡುಗಡೆಯ ವೇಳೆಯಾದಾಗ ನಿರ್ವಿಣ್ಣನಾಗುವ. ಮನೆ ಸಮೀಪಿಸಿದಂತೆ ಆತನ ನಡೆ ನಿಧಾನಿಸುವುದು. ಆದರೆ ಆತನಿಗೆ ಮನೆ ಸೇರದೆ ನಿರ್ವಾಹವಿಲ್ಲವಷ್ಟೇ.

ಥೇರಸಾಳಾದರೂ ಅಷ್ಟೇ—ಲೋರೆಂಟನಿಲ್ಲದಾಗ ಆಕೆ 'ತಾನೇ ತಾನೆ'ನ್ನುತ್ತಾ ವರ್ತಿಸುವಳು. ಕೆಲಸದಾಕೆಯನ್ನು ಬಿಡಿಸಿ ಸ್ವತಃ ಮನೆಯೊಳಗಿನ ಎಲ್ಲ ಕೆಲಸವನ್ನು ಮಾಡತೊಡಗಿದಳು. ಇದನ್ನು ನೋದರತ್ತೆ ಆಕ್ಷೇಪಿಸಿದಾಗ, ಆಕೆ ಮಿತವ್ಯಯದ ಬಗ್ಗೆ ಉಪನ್ಯಾಸವನ್ನೇ ಮಾಡಿದಳು.

ರಾತ್ರಿ ನಿದ್ದೆಯಿಲ್ಲದ ನಿಮಿತ್ತ ಅಂಗಡಿಯಲಿ ಕುಳಿತಾಗ ತೂಕಡಿಕೆ ಬರುವುದು. ಅರೆನಿದ್ದೆ ಅರೆ ಎಚ್ಚರದ ಸ್ಥಿತಿಯಲ್ಲಿ ಆಕೆ ಸುಖಿ; ಕೆಮಿಲ್‌ನ ವಿಚಾರ ಸುಳಿಯುವುದು. ಸುಜೇನಾ ಬಂದಳೆಂದರೆ ಆಕೆಗೆ ಹರುಷವಾಗದಿರುತ್ತಿದ್ದಿಲ್ಲ.

ರಾತ್ರಿ ಹೊತ್ತು ಥೇರಸಾ ಮತ್ತು ಲೋರೆಂಟ ಮಲಗುವ ಕೋಣೆಗೆ ಹೋಗುವುದನ್ನು ಸಾಧ್ಯ ವಿದ್ದಷ್ಟು ನಿಧಾನಿಸುವರು. ಮದಾಂ ರೇಕ್ವಿನ್ ತನ್ನ ಹಿಂದಿನ ಅನುಭವವನ್ನು ಒಂದೇ ಸವನೆ ವಿವರಿಸುತ್ತಿದ್ದಳು. ಆಕೆಯ ಮಾತಿನೆಡೆ ಅವರಿ ಬ್ಬರ ಲಕ್ಷ್ಯವಿಲ್ಲವಾದರೂ ಆ ಸ್ವರವಷ್ಟೇ ಅವರಿಗೆ ಹಿತಕರವೆನಿಸಿತ್ತು. ಅವರಿಗೆ ಗುರುವಾರದ ಸಂಜೆ ನಾಲ್ಕು ಜನ ನೆರೆದ ವೇಳೆ ಹೆಚ್ಚು ತೃಪ್ತಿಕರ ವೆನಿಸಹತ್ತಿತು. ಮದುವೆಯಾದಾಕ್ಷಣ ಗುರು ವಾರದ ಮೇಜವಾನಿಯ ಕಾರ್ಯಕ್ರಮವನ್ನು ರದ್ದುಗೊಳಿಸಬೇಕೆಂದು ಸೂಚಿಸಿದ ಥೇರಸಾ ಇದೀಗ ಗುರುವಾರ ಸಂಜೆ ಅತಿಥಿಗಳು ಬರುವು ದನ್ನೇ ಎದುರುನೋಡುವಳು.

ಮದಾಂ ರೇಕ್ವಿನ್‌ಳಿಗೆ ರಕ್ತದ ಒತ್ತಡದ ರೋಗವಿದ್ದಿತು. ದಿನೇ ದಿನೇ ರೋಗ ಉಲ್ಬಣಿ ಸುವಾಗ ಅವರ ಭೀತಿ ಹೆಚ್ಚಾಗತೊಡಗಿತು. ಆಕೆಯೂ ಕಣ್ಮರೆಯಾದರೆ . . . . ತಾವಿಬ್ಬರೇ ಹೇಗೆ ಇರುವುದು . . . . . ಆಕೆಯ ಆರೋಗ್ಯ ವನ್ನು ಸುಧಾರಿಸಲು ಅವರಿಬ್ಬರೂ ಹೆಣಗಿದರು, ಡಾಕ್ಟರರ ನೆರವನ್ನೂ ಪಡೆದರು.

ಅವರು ಮಾಡುತ್ತಿರುವ ಶುಶ್ರೂಷೆಯನ್ನು ಕಂಡು ಆ ಮುದಿಜೀವ ಮರುಗಿತು, ಹೃದಯ ಉಕ್ಕೇರಿತು. ಅವರಿಬ್ಬರನ್ನೂ ಜೊತೆಗೂಡಿಸಿ ದುದಕ್ಕಾಗಿ ತನ್ನನ್ನೇ ಅಭಿನಂದಿಸಿಕೊಂಡಳು.

ನಾಲ್ಕು ಮಾಸಗಳು ಕಳೆದವು. ಹೆಂಡತಿ ಯನ್ನು ಬಿಟ್ಟು ಓಡುವ, ಕೆಮಿಲ್‌ನ ಭೂತದಿಂದ ದೂರ ಹೋಗುವ ವಿಚಾರ ಲೋರೆಂಟನಿಗಿತ್ತು. ಆದರೆ ಹೊಟ್ಟೆಯ ಪಾಡೇನು ? ಹಿಂದಿನಂತೆ ಪುನಃ ನಿರ್ಗತಿಕನಾಗಿ ಬಾಳಬೇಕೇನು? ನಾ- ಲ್ವತ್ತು ಸಾವಿರ ಫ್ರಾಂಕುಗಳನ್ನು ಅಪಹರಿಸಿ ಕೊಂಡು ಹೋಗುವ ಹವಣಿಕೆ ಆತನಿಗಿತ್ತು. ಆದರೆ ಆ ಮುದುಕಿ ಆ ಹಣವನ್ನು ಸೊಸೆಯ ಹೆಸರಿಗೇನೆ ಮಾಡಿಬಿಟ್ಟಿದ್ದಳು ಎಂದೇ ಆತ ಸುಮ್ಮಗಿರಬೇಕಾಯಿತು.

ಒಂದು ಸಂಜೆ ತಾನು ನೌಕರಿಗೆ ರಾಜೀನಾಮೆ ಕೊಟ್ಟಿರುವುದಾಗಿಯೂ ಚಿತ್ರ ಬರೆಯುವ ವೃತ್ತಿ ಯನ್ನು ಕೈಕೊಳ್ಳುವುದಾಗಿಯೂ ಲೋರೆಂಟ ಮನೆಯಲ್ಲಿ ಸಾರಿದ. ಥೇರಸಾ ಬಲವಾಗಿ ವಿರೋಧಿಸಿದಳು. ಆದರೆ ಮದಾಂ ರೇಕ್ವಿನ್ ಅವಳನ್ನು ಸುಮ್ಮನಿರಿಸಿದಳು. ಆತನಿಗೆ ನೆರವು ನೀಡಬಯಸಿ ಆತನಿಗೆ ತಿಂಗಳೊಂದಕ್ಕೆ ನೂರು ಫ್ರಾಂಕ್‌ಗಳನ್ನೀಯಬೇಕೆಂದು ನಿರ್ಣಯಿಸಿದಳು.

ಆತ ಹಗಲು ಹೊತ್ತನ್ನು— ಊಟ ಮತ್ತು ಉಪಹಾರದ ವೇಳೆಯ ಹೊರತು, ತನ್ನ ಸ್ಟೂಡಿ ಯೋದಲ್ಲಿ ಕಳೆಯಲಾರಂಭಿಸಿದ. ಬೆಳಿಗ್ಗೆ ಎರಡು ಮೂರು ತಾಸುಗಳ ಕಾಲವನ್ನಷ್ಟೇ ಆತ ಚಿತ್ರಬರೆಯುವುದರಲ್ಲಿ ಕಳೆಯುವ; ಮಿಕ್ಕೆಲ್ಲ ವೇಳೆಯಲ್ಲಿ ನಿದ್ದೆ, ತಿರುಗಾಟ.

ಒಂದು ಸಂಜೆ ಮದಾಂ ರೇಕ್ವಿನ್ ಎಂದಿನಂತೆ ಮಾತನಾಡುತ್ತಿರುವಾಗ ಒಮ್ಮೆಗೆ ಸ್ವರ ನಿಂತು ಮಾತು ಹೊರಡಪಾಯಿತು. ಕೈಕಾಲುಗಳು ಮರ ಗಟ್ಟಿದವು. ಥೇರಸಾ ಮತ್ತು ಲೋರೆಂಟ ಆಕೆ ಯನ್ನು ಕೆದಕಿ ಮಾತನಾಡಲೆಳಸಿದರು. ಆದರೆ ಆಕೆಗೆ ಉತ್ತರಿಸಲಾಗಲಿಲ್ಲ. ಇನ್ನು ಆಕೆ ಜೀವಂತ ಶವ!

ಆ ಬಳಿಕ ಅವರ ಜೀವನಕ್ರಮದಲ್ಲಿ ತುಸು ಮಾರ್ಪಾಟಾಯಿತು. ಥೇರಸಾ ಅನಿವಾರ್ಯವಾ ಗಿಯಾದರೂ ಅಂಗಡಿಯಲ್ಲಿ ಕುಳ್ಳಿರಬೇಕಾಗು ತ್ತಿದ್ದುದರಿಂದ, ಮನಸ್ಸಿಗೆ ಸ್ವಲ್ಪ ನೆಮ್ಮದಿ ದೊರೆಯಿತು. ಅತ್ತೆಯ ಶುಶ್ರೂಷೆಯೂ ಅವ ಳದೇ ತಾನೇ. ಅವಳ ಮೂಕ ಭಾಷೆಯನ್ನು ಸರಿಯಾಗಿ ಅರಿತ ವ್ಯಕ್ತಿಯೆಂದರೆ ಥೇರಸಾಳೇ. ಲೋರೆಂಟನೂ ಆಕೆಯ ಮುಖಭಾವವನ್ನು ತಿಳಿ ಯಲು ಪ್ರಯತ್ನಿಸುತ್ತಿದ್ದ. ಆಕೆ ನರಕಯಾತ ನೆಯನ್ನು ಅನುಭವಿಸುತ್ತಿರಬೇಕೆಂದು ಆತನು ಬಗೆದ. ಆದರೆ ಅದು ತಪ್ಪು ಕಲ್ಪನೆಯಾಗಿತ್ತು.

ಆಕೆ ಸುಖಿ; ದಂಪತಿಗಳ ತೈನಾತಿಕೆಯಲ್ಲಿ ತೃಪ್ತಳು, ನಿಶ್ಚಿಂತಳು. ಮಾತು ನಿಂತುಹೋ ಯಿತೆಂದು ಆಕೆಗೆ ಕೆಡುಕೆನಿಸಿದ್ದರೆ, ಅದು ಆಕೆಗೆ ತನ್ನ ಕೃತಜ್ಞತೆಯನ್ನು ಮಕ್ಕಳಿಬ್ಬರಿಗೆ ಸಲ್ಲಿಸಲು



# ಮಫತ್‌ಲಾಲ್ ಗ್ರೂಪ್

ಕ್ಯಾಂಬ್ರಿಕ್, ಮಲ್ ಮತ್ತು ಲಾನ್‌ಗಳ
ಲಾವಣ್ಯದ ಜಗತ್ತನ್ನು ಪ್ರವೇಶಿಸಿ...

ನ್ಯೂ ಶೋರ್ರೋಕ್ (ಶೋರ್ರೋಕ್) ಅಹಮದಾಬಾದ್, ನ್ಯೂ ಕೊಟ್ರೋಕ್, ನಡಿಯಾಡ್. ಸ್ಟಾಂಡರ್ಡ್, ಬೊಂಬಾಯಿ. ಸ್ಟಾಂಡರ್ಡ್ (ನ್ಯೂ ಚೈನಾ), ಬೊಂಬಾಯಿ, ಸ್ಟಾಂಡರ್ಡ್, ದೇವಾಸ್. ಸಾಸೂನ್, ಬೊಂಬಾಯಿ. ಸಾಸೂನ್ (ನ್ಯೂ ಯೂನಿಯನ್) ಬೊಂಬಾಯಿ. ಸೂರತ್ ಕಾಟನ್, ಸೂರತ್. ಮಫತ್‌ಲಾಲ್ ಫೈನ್ ನವಸಾರಿ. ಗಗಲ್‌ಭಾಯಿ ಜೂಟ್, ಕಲ್ಕತ್ತ. ಇಂಡಿಯನ್ ಡೈಸ್ಟಫ್, ಬೊಂಬಾಯಿ.

Graphic MF 58

ಸಾಧ್ಯವಾಗಲಿಲ್ಲವೆಂದು. ಕಣ್ಣುಗಳಿಂದಲೇ ಆಕೆ ತನ್ನ ಮನೋಗತವನ್ನು ಸೂಚಿಸುವುದನ್ನು ಸಾಧಿಸಿಕೊಂಡಳು. ಲೋರೆಂಟ ತನ್ನನ್ನು ಎತ್ತಿ ಕುರ್ಚಿಯಲ್ಲಿ ಕೂರಿಸಿದಾಗ ಇಲ್ಲವೆ ಮಂಚದ ಮೇಲೆ ಮಲಗಿಸಿದಾಗ ಆಕೆಯ ಕಣ್ಣುಗಳು ಕೃತಜ್ಞತೆಯಿಂದ ತುಂಬಿಬರುತಿದ್ದವು.

ಆಕೆ ಎಂದಿನಂತೆ ಸಂಜೆ ಥೇರಸಾ ಮತ್ತು ಲೋರೆಂಟರ ನಡುವೆ ಕುಳಿತಿರುತ್ತಿದ್ದಳು. ಆದರೆ ಆಕೆಯ ಇರವು ಅವರ ಉದ್ರಿಕ್ತ ಮನಸ್ಸನ್ನು ತಡೆಹಿಡಿಯಲು ಅಸಮರ್ಥವಾಯಿತು. ಒಂದು ದಿನ ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ಅವರಲ್ಲಿ ಮಾತಿನ ಚಕಮಕಿ ಎದ್ದಿತು. ಥೇರಸಾಳ ಬಾಯಿಂದ ಚೀತ್ಕಾರ ಹೊರಟಿತು. ಪರಸ್ಪರ ಆಪಾದನೆಗೆ ಮೊದಲುಮಾಡಿದರು. ಎಂದೋ ತನಗೆ ತಾನಾಗಿಯೆ ಗುಟ್ಟು ರಟ್ಟಾಯಿತು.

ಕೆಮಿಲ್‌ನ ಸಾವಿನ ಆ ಸತ್ಯ ಮುದುಕಿಗೆ ಕರ್ಣಕಠೋರವಾಯಿತು! ಸಿಡಿಲೆರಗಿದಂತಾಯಿತು. ಕೆಮಿಲ್‌ನನ್ನು ಕೈಯಾರೆ ಕೊಂದವರು-ಥೇರಸಾ ಮತ್ತು ಲೋರೆಂಟ. ವ್ಯಭಿಚಾರವೊಂದೇ ಸಾಲದುದಕ್ಕೆ ಕೊಲೆಯ ಪಾಪವನ್ನೂ ಕಟ್ಟಿಕೊಂಡರಲ್ಲವೆ? ಇದನ್ನು ಕಿವಿಯಾರೆ ಕೇಳಿದ ಬಳಿಕವೂ ಸುಮ್ಮನಿರಬೇಕಾದ ನಿಸ್ಸಹಾಯ ಸ್ಥಿತಿಯನ್ನು ನೆನೆದು ಆಕೆ ಮಮ್ಮಲಮರುಗಿದಳು.

ಥೇರಸಾ ತನ್ನವಳೇ ಎಂದು ಸಾಕಿ ಸಲಹಿದವಳು, ತನ್ನ ಮಗನೆಂದು ಪರಿಗ್ರಹಿಸಿದ, ಲೋರೆಂಟ— ಇವರಿಬ್ಬರೂ ಕೊಲೆಗಾರರು! "ಇವರು ನನ್ನ ಮಕ್ಕಳು...... ಇವರೇ ನನ್ನ ಮಗನನ್ನು ಕೊಂದರು" ಇದೇ ವಿಚಾರ ಮನಸ್ಸಿನಲ್ಲಿ ಮೊರೆಯಿತು, ಕಿವಿಗಳಲ್ಲಿ ಕುಂಯಿಗುಟ್ಟಿತು. ಆ ಮನೋವೇದನೆಯಿಂದ ಪಾರಾಗಲು ಮೃತ್ಯುವನ್ನು ಆಹ್ವಾನಿಸಿದಳು. ನಿಸ್ಸಹಾಯತೆ ಕಣ್ಣೀರ ಕೋಡಿಯಾಗಿ ಹರಿಯಲಾರಂಭಿಸಿತು. ಇದನ್ನು ಕಂಡು ಕನಿಕರದಿಂದ ಥೇರಸಾ ಹೇಳಿದಳು— "ಅತ್ತೆಯನ್ನು ಮಲಗಿಸಬೇಕು."

ಆಕೆಯನ್ನು ಎತ್ತಿ ಮಂಚದೆಡೆಗೆ ನಡೆಯುವಾಗ ತನ್ನನ್ನು ದುರುಗುಟ್ಟಿ ನೋಡುವುದನ್ನು ಕಂಡು ಲೋರೆಂಟ ರೇಗಿದ— "ನೋಡು ಕಣ್ಣೆವೆಯಿಕ್ಕದೆ ನೋಡು ಮುದುಕಿ! ನೀನು ನನ್ನನ್ನು ಕಣ್ಣುಗಳಿಂದ ನುಂಗಲಾರೆ" ಎನ್ನುತ್ತ ಆಕೆಯನ್ನು ಮಂಚದ ಮೇಲೆ ಎತ್ತಿ ಬಿಸುಟ. ಆಕೆಗೆ ಸ್ಮೃತಿ ತಪ್ಪಿತು.

ಗುರುವಾರ ಬಂತು, ಸಂಜೆ ಮೇಜವಾನಿ ಇದ್ದೇ ಇದೆ. ರೋಗಿಯನ್ನು ಆಕೆಯ ಕೋಣೆಯಲ್ಲಿಡುವುದು ಉಚಿತವೆಂದು ಥೇರಸಾ ಸೂಚಿಸಿದಳು. ಆಕೆಗೆ ಎಲ್ಲ ತಿಳಿದಿದೆ, ಅದನ್ನು ಬಯಲು ಮಾಡಬಹುದೆನ್ನುವ ಹೆದರಿಕೆ.

"ಹುಚ್ಚು! ಆಕೆಗೆ ಒಂದು ಬೆರಳನ್ನು ಎತ್ತಲಿಕ್ಕೆ ಕೂಡಾ ಆಗುವುದಿಲ್ಲ" ಲೋರೆಂಟ ಉತ್ತರಿಸಿದ.

"ಯಾವುದಾದರೊಂದು ರೀತಿಯಿಂದ... ಆ ದಿನದಿಂದ ಆ ಕಣ್ಣುಗಳಲ್ಲಿ ದ್ವೇಷದ ಕಿಡಿ ಕಾಣುತ್ತಿದೆ."

"ನಿನಗೆ ತಲೆ ಸರಿಯಿಲ್ಲ. ಆಕೆ ಹೆಚ್ಚು ಸಮಯ ಬದುಕುವುದಿಲ್ಲವೆಂದು ಡಾಕ್ಟರರೇ ಹೇಳಿರುವಾಗ ನಾವು ಸುಮ್ಮನಿರುವುದೊಳಿತು."

ಮದಾಂ ರೇಕ್ವಿನ್ ಕೂಡಾ ಗುರುವಾರದ ಸಂಜೆಯನ್ನೇ ಎದುರು ನೋಡುತ್ತಿದ್ದಳು. ಅದಕ್ಕೂ ಮೊದಲು ಲೋರೆಂಟ್ ತನ್ನನ್ನು ಕೊಂದು ಹಾಕಬಹುದೆನ್ನುವ ಹೆದರಿಕೆಯೂ ಇತ್ತು. ಆದರೆ ಹಾಗೇನಾಗಲಿಲ್ಲ, ಬದಲು ಎಂದಿನಂತೆ ಅತಿಥಿಗಳ ಸಮ್ಮುಖದಲ್ಲಿ ಹಾಜರು ಮಾಡಿದ್ದರು.

"ಅಗೋ ನೋಡು ಥೇರಸಾ, ಮದಾಂ ರೇಕ್ವಿನ್ ಬೆರಳಾಡಿಸುತ್ತಿದ್ದಾಳೆ. ಆಕೆಗೆ ಏನೋ ಹೇಳಬೇಕಾಗಿದೆ"—ಮಿ.ಚಾಪ್ ಅರಚಿದ. ಥೇರಸಾಳ ಬಾಯಿಂದ ಸ್ವರವೇ ಹೊರಡದು.

"ಹೌದೌದು" ಗ್ರಿವೇಟ್ ದನಿಗೂಡಿಸಿದ.

ಮಿ.ಚಾದ್ ಮತ್ತು ಗ್ರಿವೇಟ್ ಆಕೆಯ ಬಳಿ ನಿಂತು ಧೈರ್ಯವೀಯುತ್ತಾ, ಆಕೆಯ ಮನೋಗತವನ್ನು ಊಹಿಸಲೆತ್ನಿಸತೊಡಗಿದರು. ಆಕೆ

ಮೇಜಿನಮೇಲೆ ಗೀಚತೊಡಗಿದಳು. ಗೆಳೆಯರಿಬ್ಬರು ತಪ್ಪು ಹೇಳಿದಾಗ ಆಕೆ ಕೈಯನ್ನು ಸ್ವಲ್ಪ ಹಿಂದಕ್ಕೆ ಸರಿಸಿ ಅಲ್ಲವೆಂದು ಸೂಚಿಸಿದಳು. ಪುನಃ ಅಕ್ಷರಗಳನ್ನು ತಿದ್ದಿ ಸ್ಪಷ್ಟವಾಗಿ ಬರೆಯಲೆಳಸಿದಳು.

"ಥೇ...ರ...ಸಾ...ಮ...ತ್ತು..." ಒಲಿವರ್ ಗಟ್ಟಿಯಾಗಿ ಓದಿದ.

ಥೇರಸಾ ಚೀತ್ಕಾರ ಮಾಡಿದಳು, ಲೋರೆಂಟ್ ಎದ್ದು ನಿಂತ. ಮುದುಕಿ ಮುಂದುವರಿದರೆ ಅವಳ ತೋಳನ್ನು ತಿರುವಿ ಬಿಡುವುದೆಂದು ನಿಶ್ಚಯಿಸಿದ್ದ.

ಒಲಿವರ್ ಪುನಃ ಉತ್ಸಾಹದಿಂದ ಆ ದಂಪತಿಗಳನ್ನು ಕರೆದ. ಹೇಳಿದ—"ನಿಮ್ಮ ಅತ್ತೆ ನಿಮ್ಮಿಬ್ಬರ ಹೆಸರನ್ನು ಬರೆದಿದ್ದಾರೆ. ಥೇರಸಾ ಮತ್ತು ಲೋರೆಂಟ್..."

ಮಿಚಾಡ್ ಓದಿದ—"ಥೇರಸಾ ಮತ್ತು ಲೋರೆಂಟ್ ಇಬ್ಬರೂ..."

ಆ ಮುದುಕಿಯ ಕೈ ಮಾತ್ರ ಮುಂದುವರೆಯಲಿಲ್ಲ, ಕೆಳಕ್ಕೆ ಜಾರಿತು. ಇದನ್ನು ಕಂಡು ಗಂಡ ಮತ್ತು ಹೆಂಡತಿ ಕುಳಿತುಕೊಂಡರು. ಬಿಡುಗಡೆಯ ನಿಟ್ಟುಸಿರು ಬಿಟ್ಟರು. ಮಿಕ್ಕವರೆಲ್ಲ ತಮ್ಮ ತಮ್ಮ ಆಸನವನ್ನಾಕ್ರಮಿಸುತ್ತಾ ವಾಕ್ಯವನ್ನು ಪೂರ್ತಿಗೊಳಿಸಲು ಪ್ರಯತ್ನಿಸಿದರು:

"ಥೇರಸಾ ಮತ್ತು ಲೋರೆಂಟ್—ಇಬ್ಬರೂ ನನ್ನನ್ನು ಒಳ್ಳೇ ರೀತಿಯಿಂದ ನೋಡಿಕೊಳ್ಳುತ್ತಾರೆ" ಎಂದು!

—ಎಲ್ಲರೂ ಅದಕ್ಕೆ ಸಮ್ಮತಿ ಸೂಚಿಸಿದಾಗ ಮದಾಂ ರೇಕ್ವಿನ್‌ಗೆ ತೀರಾ ನಿರಾಶೆಯಾಯಿತು, ತನ್ನ ಕೊನೆಯ ಯತ್ನ ವಿಫಲವಾಯಿತೆಂದು ಹಲುಬಿದಳು.

*

ಎರಡು ತಿಂಗಳುಗಳು ಕಳೆದಿವೆ. ಥೇರಸಾ ಮತ್ತು ಲೋರೆಂಟ್—ಇಬ್ಬರ ಪಾಡು ಹೇಳತೀರದು. ಪರಸ್ಪರ ಹಗೆ ದಿನದಿನಕ್ಕೂ ಬೆಳೆಯುತ್ತಿತ್ತು. ಒಬ್ಬರಿಗಿನ್ನೊಬ್ಬರನ್ನು ನೋಡಿದರೆ ಆಗದು. ಪ್ರತಿ ರಾತ್ರಿ ಜಗಳ-ಕ್ಷುಲ್ಲಕ ಕಾರಣಕ್ಕಾಗಿ ಜಗಳ. ಮಾತು ಕೆಮಿಲ್‌ನ ದುರಂತದ ವಿಷಯಕ್ಕೆ ಹರಿಯದೆ ಮುಗಿಯದು. ಇದರಿಂದೆ ಮದಾಂ ರೇಕ್ವಿನ್‌ಗೆ ತನ್ನ ಮಗನ ಮರಣದ ಪೂರ್ತಿ ಚಿತ್ರ ದೊರಕಿತು. ಗಂಡ-ಹೆಂಡತಿಯರ ವಾಗ್ವಾದವನ್ನು ಕೇಳುತ್ತಾ ಕಣ್ಣೀರು ಹರಿಸುವಳು ಇದನ್ನು ಕಂಡು ಥೇರಸಾ ಕನಿಕರದಿಂದ ಮಾತು ತಡೆಹಿಡಿಯಲು ಸೂಚಿಸಿದರಷ್ಟೆ ಸಾಕು—ಲೋರೆಂಟ್ ರೇಗಿ ಚೀರುವ: "ಬಾಯಿ ಮುಚ್ಚು! ಆಕೆಗೂ ಹೆಚ್ಚು ನಾವು ಸುಖಿಯೇನು?"

ಅಂತೆಯೆ ಜಗಳ ಮುಂದುವರಿಯುತ್ತಿತ್ತು. ಆಕೆ ಎದುರಿಲ್ಲದೆ ಹೋದಲ್ಲಿ ಒಬ್ಬರು ಇನ್ನೊಬ್ಬರನ್ನು ಕೊಲ್ಲಲೆತ್ನಿಸಬಹುದೆಂದು ಹೆದರಿಕೆ ಇಬ್ಬರಲ್ಲಿಯೂ ಇತ್ತು. ಎಂದೇ ಆಕೆ ಕುಳಿತ ಕುರ್ಚಿಯನ್ನು ಹೊರ ಕೋಣೆಯಲ್ಲಿಯೆ ಇರಿಸಿದ್ದರು.

ಅವರ ಜಗಳ ಒಂದೇ ತೆರನದು, ಒಬ್ಬರಿನ್ನೊಬ್ಬರನ್ನು ಆರೋಪಿಸುವುದು. ಕೆಮಿಲ್‌ನ ಹೆಸರೆತ್ತಿದಾಕ್ಷಣ ಗುದ್ದಾಟಕ್ಕೂ ಮೊದಲಾಗುವುದು.



ಒಂದು ಸಂಜೆ, ಊಟಕ್ಕೆ ಕುಳಿತಾಗ ಲೋರೆಂಟ್ ಹೇಳಿದ:

"ನೀರು ನದಿಯ ನೀರಿನಂತಿದೆ."

"ನದಿಯ ನೀರು...ನದಿಯ ನೀರು..." ಎಂದು ಪುನರುಚ್ಚರಿಸಿ ಥೇರಸಾ ಅಳತೊಡಗಿದಳು.

"ನೀನು ಯಾಕೆ ಅಳುವುದು?"— ಆತ ಗುಡುಗಿದ.

"ಅಳು! ಯಾಕೆ?... ದೇವರೇ, ನಿನಗೆ ಗೊತ್ತಿದೆ—ಆತನನ್ನು ನೀನು ಕೊಂದೆ!"

"ಸುಳ್ಳು! ಒಳ್ಳೇ ಮಾತಿನಲ್ಲಿ ಸುಳ್ಳೆಂದು ಬೇಗ ಒಪ್ಪು. ನಾನು ಅವನನ್ನು ನೀರಿಗೆಸೆದರೆ, ಅದಕ್ಕೆ ನೀನೇ ಪ್ರೇರಕಳು! ಅದನ್ನಾದರೂ ಒಪ್ಪು!" ಆತ ಒದರಿದ.

"ನಾನು...ನಾನು?"

"ಹೌದು, ನೀನು ಏನೂ ತಿಳಿಯದೆನ್ನುವಂತೆ ನಟಿಸಬೇಡ. ನಿನ್ನ ಪಾಲಿನ ತಪ್ಪನ್ನು ಒಪ್ಪಿಬಿಡು, ನನಗೆ ಅಷ್ಟೇ ಸಾಕು."

"ನಾನು ಕೆಮಿಲ್‌ನನ್ನು ಮುಳುಗಿಸಲಿಲ್ಲ."

"ಅಂದು— ನೀನು ಆ ಸಣ್ಣ ದೋಣಿಯಲ್ಲಿದ್ದಾಗ, 'ನಾನು ಇವನನ್ನು ನದಿಗೆಸೆಯುವೆ'ನೆಂದು ನಿನಗೆ ಪಿಸುಗುಟ್ಟಿದುದು ನೆನಪಿದೆಯೇನು? ಆಗ ನೀನು ನನ್ನನ್ನು ತಡೆಯಲಿಲ್ಲ ಯಾಕೆ? ಕೆಮಿಲ್‌ನನ್ನಾದರೂ ಎಚ್ಚರಿಸಬಹುದಿತ್ತಲ್ಲ? **ಇಲ್ಲ!** ಆ ಕೊಲೆಯಲ್ಲಿ ನಿನ್ನದೂ ಸಮಪಾಲು."

"ಸುಳ್ಳು, ನನಗೆ ತಲೆ ಸರಿಯಿದ್ದಿಲ್ಲ. ನಾನೇನು ಮಾಡುತ್ತಿರುವೆನೆಂದು ನನಗೇ ತಿಳಿದಿರಲಿಲ್ಲ. ನನಗೆ ಅವನು ಸಾಯಬೇಕೆಂದಿರಲಿಲ್ಲ. ನೀನು— ನಿನ್ನ ದಾರಿ ಸುಗಮವಾಗಬೇಕಿತ್ತು ಅದಕ್ಕೆ..."

ಆಕೆ ನಿರಾಕರಿಸಿದಷ್ಟು ಆತನ ಯಾತನೆ ಹೆಚ್ಚುವುದು. ಆಕೆ 'ಹೌದು' ಎಂದು ಒಪ್ಪುವ ತನಕ ಹೊಡೆಯಬೇಕೆಂಬ ವಿಚಾರ ಬಂದಿತು. ಆದರೆ ಹಾಗೇನು ಮಾಡದೆ ಆತ ಕೋಣೆಯಲ್ಲಿ ಅತ್ತಿಂದಿತ್ತ ನಡೆಯತೊಡಗಿದ. ಮದಾಂ ರೇಕ್ವಿನ್ ತದೇಕಚಿತ್ತದಿಂದ ನಿರೀಕ್ಷಿಸುತ್ತಿದ್ದಳು.

"ಪಿಶಾಚಿ! ನನಗೆ ಹುಚ್ಚು ಹಿಡಿಸಲೆತ್ನಿಸುವಿಯೇನು? ನೀನು ಬೆಲೆವೆಣ್ಣಿನಂತೆ ನನ್ನ ಕೋಣೆಗೆ ಬಾರದಿರುತ್ತಿದ್ದರೆ...? ಗಂಡನನ್ನು ಕಂಡರೆ ನಿನಗೆ ಆಗುತ್ತಿದ್ದಿರಲಿಲ್ಲ. ಒಳ್ಳೇ ಕತೆ ಕಟ್ಟುತ್ತೀ...! ಮೂರು ವರ್ಷಗಳ ಹಿಂದೆ ನಾನು ಪರಸ್ತ್ರೀಯರನ್ನು ಅಪಹರಿಸುವ ಘಟಿಂಗನಾಗಿದ್ದೆನೇನು? ಇಲ್ಲ, ನಾನು ನುಸಿಯನ್ನು ಹೊಡೆಯುತ್ತಿದ್ದಿಲ್ಲ."

"ಕೆಮಿಲ್‌ನನ್ನು ಕೊಂದವ ನೀನು" ಎಂದು ಆಕೆ ಹಟಹಿಡಿದು ಹೇಳಿದಾಗ ಆತನಿಗೆ ರೇಗಿತು.

"ಹಾದರಗಿತ್ತಿ! ಏನೂ ಅರಿಯದ ಕೂಸು ನೀನು! ಎಲ್ಲ ನಿನ್ನದೇ ಮಸಲತ್ತು!"

"ಸುಳ್ಳು! ನಿನ್ನ ಭೆಟ್ಟಿಯಾಗುವ ತನಕ ನನಗೆ ಕೂಡಾ ಕಪಟ, ವಂಚನೆ ತಿಳಿದಿರಲಿಲ್ಲ. ನೀನು ಅಪ್ಪಂತನಂತೆ ಮಾತನಾಡಬೇಡ. ನೀನು ನನ್ನ ದೌರ್ಬಲ್ಯದ ಲಾಭ ಪಡೆದೆ. ಅದೆಲ್ಲವನ್ನೂ ನಾನು ಮರೆತುಬಿಡುವೆ, ಕ್ಷಮಿಸುವೆ. ಆದರೆ ಗಂಡನನ್ನು ಕೊಂದ ಪಾಪವನ್ನು ಮಾತ್ರ ನನ್ನ ತಲೆಯ ಮೇಲೆ ಹೇರಬೇಡ."

ಹೆಂಡತಿಯ ಪಕ್ಕದಲ್ಲಿ ಕುಳಿತು ಲೋರೆಂಟ್ ಹೇಳಿದ:

"ನೀನು ನಿನ್ನ ಪಾಲಿನ ಪಾಪವನ್ನು ಒಪ್ಪದಿರುವುದು ಹೇಡಿತನ. ನಾವಿಬ್ಬರೂ ಸೇರಿ ಕೊಲೆ ಮಾಡಿದೆವು. ನೀನು ನನ್ನ ಸಹಭಾಗಿನಿ. ನೀನು ನಿರಪರಾಧಿನಿಯಾಗಿದ್ದರೆ, ನನ್ನ ಕೈಹಿಡಿಯಲು ಎಂದೂ ಒಪ್ಪುತ್ತಿರಲಿಲ್ಲ. ಎಲ್ಲವನ್ನೂ ನಾವು ಪೋಲೀಸರಿಗೆ ವರದಿಮಾಡಿದರೆ, ನಮ್ಮಿಬ್ಬರನ್ನೂ ಶಿಕ್ಷಿಸದೆ ಇರಲಾರರು."

ಇಬ್ಬರೂ ನಡುಗಿದರು. ಥೇರಸಾ ಮೆಲ್ಲಗೆ ನುಡಿದಳು:

"ಅವರು ನಮ್ಮನ್ನು ಅಪರಾಧಿಯೆಂದು ಸಾರಬಹುದು. ಆದರೆ ಕೆಮಿಲ್‌ಗೆ ನಾನು ನಿರಪರಾಧಿಯೆಂದು ಗೊತ್ತಿದೆ. ಆತ ನಿನ್ನಂತೆ ನನ್ನನ್ನು ಪ್ರತಿ ರಾತ್ರಿ ಕಾಡಲಾರ."

"ಕೆಮಿಲ್ ನನ್ನನ್ನು ಕಾಡುವುದಿಲ್ಲ" ಎಂದು ಲೋರೆಂಟ್ ಒದರಿದ, ರೇಗಿದ. "ಅದೇ ನೀನು ರಾತ್ರಿ ಅಳುತ್ತಾ ನರಳುವುದನ್ನು ನಾನು ಬಲೆ."

"ಸುಳ್ಳು! ನಿನಗೇ ಕೆಮಿಲ್‌ನ ಭೂತ ಉಪ-ದ್ರವ ಕೊಡುತ್ತದೆ. ಆತನ ಲಕ್ಷ್ಯವನ್ನು ನನ್ನೆಡೆಗೆ ಸರಿಸುತ್ತೀಯೇನು?"

ಲೋರೆಂಟ್‌ನ ಸಿಟ್ಟು ನೆತ್ತಿಗೇರಿತು. ಥೇರಸಾಳನ್ನು ನೆಲದ ಮೇಲೆ ಹಿಡಿದೆಳೆದ. ಹೊಡೆಯಲು ಕೈಯೆತ್ತಿದ.

"ನನ್ನನ್ನು ಹೊಡಿ, ಕೊಲ್ಲು! ಕೆಮಿಲ್ ಹೆಂಗಸರ ಮೇಲೆ ಎಂದೂ ಕೈಮಾಡಲಿಲ್ಲ. ಆದರೆ ನೀನೊಂದು ಕಾಡು ಪಶು."

ಲೋರೆಂಟ್ ಆಕೆಯ ಕೂದಲನ್ನು ಬಿಗಿಹಿಡಿದು ತಲೆಯನ್ನು ನೆಲಕ್ಕೆ ಜಜ್ಜಿದ. ಆಕೆಯನ್ನು ಅಲ್ಲಾಡಿಸಿದ; ಕೈಗಳು ಕುತ್ತಿಗೆಯನ್ನು ಹಿಚುಕಲು ತಯಾರಾದುವು. ಆದರೆ ಬಿಟ್ಟುಕೊಟ್ಟ.

ಥೇರಸಾಳ ದೃಷ್ಟಿಯಲ್ಲಿ ಅದೊಂದು ಪ್ರಾಯಶ್ಚಿತ್ತ. ಆ ರಾತ್ರಿ ಆಕೆಗೆ ಚೆನ್ನಾಗಿ ನಿದ್ದೆ.

ದಿನಂಪ್ರತಿ ಜಗಳ, ಬೈಗಳು, ಹೊಡೆದಾಟಗಳಿಂದಾಗಿ ಮನೆಯ ವಾತಾವರಣ ತೀರ ಹದಗೆಟ್ಟಿದ್ದಿತು. ಇಬ್ಬರಿಗೂ ಆ ಮನೆಬಿಟ್ಟು ಓಡಿಹೋಗುವ ವಿಚಾರ ಬಂದಿತ್ತು. ಆದರೆ ಧೈರ್ಯ ಸಾಲದು. ಆ ರೋಗಿಯನ್ನು ಏನು ಮಾಡುವುದು? ಮತ್ತು ತಮ್ಮ ಮೇಲೆ ಸಂಶಯ ಬಂದು ಪೋಲೀಸರಿಗೆ ತಿಳಿಸಿದರೆ...? ಗಂಡನಿಲ್ಲದಾಗ, ಥೇರಸಾ ಮನೆ-ಅಂಗಡಿಯನ್ನು ಸುತ್ತುತ್ತಿದ್ದಳು, ಗಿರಾಕಿಗಳನ್ನು ನಿರ್ಲಕ್ಷಿಸಿದಳು; ಸುಜೇನಾಳನ್ನು ಬರಮಾಡಿ ತಾನೊಬ್ಬಳೇ ಹೊರಗೆ ಹೋಗಲಾರಂಭಿಸಿದಳು.

ಲೋರೆಂಟ್ ಕೂಡ ನರಕ ಜೀವನವನ್ನು ಅನುಭವಿಸುತ್ತಿದ್ದ. ಸ್ಟೂಡಿಯೋದಲ್ಲಿ ಏನು ಮಾಡುವುದು? ಕೆಮಿಲ್‌ನ ಮೂರ್ತಿ ಕಣ್ಣೆದುರಿಗೆ ಬಂದು ಚಿತ್ರಿಸುವುದನ್ನು ತಡೆಯುವುದು. ಹಿಂದಿನ ರಾತ್ರಿಯ ಜಗಳ ಮನಸ್ಸನ್ನು ಕಾಡುವುದು.

ಕತ್ತಿನ ಮೇಲಿನ ಕಲೆಯೂ ಆತನನ್ನು ಹಿಂಸಿಸುತಿತ್ತು. ಕನ್ನಡಿಯೆದುರು ನಿಂತಾಗಲೆಲ್ಲ ಆ ಕಲೆ ಕಾಣಿಸಿಕೊಳ್ಳುವುದು. ಕೈಕೈ ಹತ್ತಿದಾಗ ಥೇರಸಾ ಕೂಡಾ ಅದೇ ಕಲೆಯನ್ನು ಒತ್ತಿ ಗುದಿನೋವನ್ನುಂಟುಮಾಡುತಿದ್ದಳು. ಹೆಂಡತಿಯೊಡನೆ ಗುದ್ದಾಡಿ ದಣಿದ ಬಳಿಕ ಆತ ಕೋಣೆಯಲ್ಲಿ ಅಡ್ಡಾಡುವ, ಎದುರಿಗೆ ಕಂಡ ವಸ್ತುಗಳನ್ನು ಒಡೆಯುವ.

ಕ್ರಮೇಣ ಥೇರಸಾ ಬದಲಾದದ್ದು ಆತನ ಗಮನಕ್ಕೆ ಬಂತು. ಆಕೆ ಮಾತನಾಡುವುದನ್ನು ಬಿಟ್ಟುಬಿಟ್ಟಳು, ತದೇಕಚಿತ್ತದಿಂದ ಚಿಂತಿಸುತ್ತ ಕುಳಿತುಬಿಡುವಳು. ಆಕೆ ಮಧ್ಯಾಹ್ನದ ಹೊತ್ತು ಮನೆಯಿಂದ ಹೊರಗೆ ಕಳೆಯುತ್ತಿರುವುದನ್ನು

# ತಲೆನೋವಿನಿಂದ ತೊಂದರೆಪಡುವಾಗ...












**ಸ್ವಲ್ಪ ಸಮಯದ ನಂತರ...**

"ತಲೆನೋವು ಈಗ ಇಲ್ವೇ ಇಲ್ಲ!
ಸಾರಿಡಾನ್‌ನ ಉಪಕಾರ!"

# ಸಾರಿಡಾನ್ 'ರೋಶ್'

## ಉಪಶಮನ, ಆರಾಮ ಮತ್ತು ಉಲ್ಲಾಸವನ್ನು ನೀಡುತ್ತದೆ

ಸಾರಿಡಾನ್ ನೋವುಗಳನ್ನೂ ಸಿಡಿತಗಳನ್ನೂ ಬಲು ಬೇಗನೆ, ನಿಶ್ಚಿತವಾಗಿ ಮತ್ತು ನಿರಪಾಯಕರವಾಗಿ ಉಪಶಮನಗೊಳಿಸುತ್ತದೆ. ತಲೆನೋವು, ಹಲ್ಲುನೋವು, ಮೈಕೈನೋವು, ಮೈ ಬಿಸಿಯಾಗುವುದು, ಸಾಮಾನ್ಯ ಅಸ್ವಸ್ಥತೆ — ಇವುಗಳಿಗೆ ಸಾರಿಡಾನ್ ತೆಗೆದುಕೊಳ್ಳಿರಿ.




**ಒಂದೇ ಒಂದು ಮಾತ್ರೆ ಸಾಕು**

ಒಂದು ಮಾತ್ರೆಗೆ 13 ನ. ಪೈಸೆ

ದೊಡ್ಡವರಿಗೆ 1 ಮಾತ್ರೆ;
ಮಕ್ಕಳಿಗೆ ¼ರಿಂದ ½ ಮಾತ್ರೆ.

**'ರೋಶ್' ಉತ್ಪಾದನೆ**

ಸೋಲ್ ಡಿಸ್ಟ್ರಿಬ್ಯೂಟರ್ಸ್:
ವೋಲ್ಟಾಸ್ ಲಿಮಿಟೆಡ್